ಮೊದಲನೆಯ ಮುದ್ರಣ : ನವೆಂಬರ್ ೧೯೫೫

ಮೋಹನ ಕಾದಂಬರಿ ೮.



ಮುಖಚಿತ್ರ :

**ಜಿ. ಕೆ. ಮೂರ್ತಿ, ಧಾರವಾಡ**

**ಬೆಲೆ: ರೂ ೧-೮-೦**

ಮುದ್ರಣಕಾರರು:

ಜಿ. ಎಚ್. ರಾಮರಾವ್, ಬಿ. ಎಸ್‌ಸಿ.

ಮೈಸೂರು ಪ್ರಿಂಟಿಂಗ್ ಅಂಡ್ ಪಬ್ಲಿಷಿಂಗ್ ಹೌಸ್,

ಮೈಸೂರು

# ಮುನ್ನುಡಿ

ಕೆಲವು ವರ್ಷಗಳ ಹಿಂದೆ ಗೆಳೆಯರೊಡನೆ ಪಂಪಾಯಾತ್ರೆ ಮಾಡುವ ಸುಯೋಗ ದೊರೆಯಿತು. ಹಂಪೆಯಲ್ಲಿ ನಾನು ಕಂಡ ಭಗ್ನಾವಶೇಷಗಳು ಗತಕಾಲದ ಇತಿಹಾಸವನ್ನು ಕಣ್ಣಮುಂದೆ ತಂದು ನಿಲ್ಲಿಸಿದುವು. ಮುಂದೆ, ವಿಜಯನಗರದ ಇತಿಹಾಸದ ಬಗ್ಗೆ ಹೆಚ್ಚು ಅಭ್ಯಾಸ ಮಾಡಿದಾಗ— ಸುಮಾರು ಮೂರು ಶತಮಾನಗಳ ಕಾಲ ವೈಭವದಿಂದ ಬಾಳಿ, ನಾಗರಿಕತೆಯ ತುಟ್ಟ ತುದಿಯನ್ನು ಮುಟ್ಟಿ, ಹಿಂದೂ ಧರ್ಮ, ಸಂಸ್ಕೃತಿಗಳ ರಕ್ಷಾ ಮಣಿಯಂತಿದ್ದ, ವಿಜಯನಗರ ಸಾಮ್ರಾಜ್ಯದ, ಏಳುಬೀಳುಗಳನ್ನು ನೆನೆದಾಗ ದುರಂತ ನಾಟಕ ಒಂದನ್ನು ನೋಡಿದುದರ ಅನುಭವವಾಯಿತು. ಮಹಾ ಮಹಿಮರಾದ, ವಿದ್ಯಾರಣ್ಯ ಮುನೀಂದ್ರರು, ಖಿಲವಾಗುತ್ತಿದ್ದ ಹಿಂದೂ ಧರ್ಮದ ರಕ್ಷಣೆಗಾಗಿ ಭಗವತೀ ಭುವನೇಶ್ವರಿಯ ದಿವ್ಯಾನುಗ್ರಹದಿಂದ ಸ್ಥಾಪಿಸಿದ್ದ, ವಿಜಯನಗರ ಸಾಮ್ರಾಜ್ಯವು ಎಲ್ಲಿಯ ತನಕ ಧರ್ಮರಕ್ಷೆಯನ್ನು ಪಡೆದಿತ್ತೋ, ಅಲ್ಲಿಯ ತನಕ ಅದಕ್ಕೆ ಯಾವ ಚ್ಯುತಿ ಇರಲಿಲ್ಲ. ಧರ್ಮ ಕ್ಷಯವಾದಂದೇ ಸಾಮ್ರಾಜ್ಯವು ಅಳಿಯಿತು. ಈ ಮಾತಿನ ನಿದರ್ಶನ ವಿಜಯನಗರದ ಇತಿಹಾಸದಲ್ಲಿ ಸುವರ್ಣಾಕ್ಷರಗಳಿಂದ ಬರೆದಿಡಬೇಕಾದ ಅಧ್ಯಾಯ—ಕೃಷ್ಣದೇವರಾಯನ ಆಳ್ವಿಕೆಯು—ಮುಗಿದ ಕೇವಲ ಮೂವತ್ತೈದು ವರ್ಷಗಳ ಅನಂತರ ನಡೆದ ರಕ್ಕಸ ತಂಗಡಿ ಯುದ್ಧದಲ್ಲಿ ದೊರೆಯುತ್ತದೆ. **'ರಾಜದ್ರೋಹಿ'** ಕಾದಂಬರಿಯುದ್ದಕ್ಕೂ ಈ ಮಾತು ಧ್ವನಿಪೂರ್ಣವಾಗಿ ಬಂದಿದೆ.

ರಾಜದ್ರೋಹಿ! ಯಾರು ರಾಜದ್ರೋಹಿ? ಸಾಮ್ರಾಜ್ಯದ ಏಳಿಗೆಗಾಗಿ ಸರ್ವಸ್ವವನ್ನೂ ತ್ಯಾಗಮಾಡಿ, ಸಾಮ್ರಾಜ್ಯದ ಸೇವೆಯಲ್ಲಿ ಹಣ್ಣಾದ, ಪರಮ ರಾಜನಿಷ್ಠ ಸೇವಕನಾದ ತಿಮ್ಮರಸನೇ? ಮೋಹಾಂಧನಾಗಿ ಹೇಳಿಕೆಯ ಮಾತುಗಳಿಗೆ ಕಿವಿಗೊಟ್ಟು, ಅಪ್ಪಾಜಿಯಂತಿದ್ದ ತಿಮ್ಮರಸನ ಮೇಲೆ ಅವಿಚಾರಿಯಾಗಿ, ರಾಜದ್ರೋಹದ ಮಿಥ್ಯಾಪವಾದವನ್ನು ಹೊರಿಸಿದ ಕೃಷ್ಣದೇವರಾಯನೇ? ಇದು ವಿಚಾರ ಮಾಡಬೇಕಾದ ಅಂಶ.

ಇತಿಹಾಸದಲ್ಲಿ ಕೃಷ್ಣದೇವರಾಯನು ಅತ್ಯಂತ ಸಮರ್ಥನಾದ ದೊರೆ. ಸಾಹಿತ್ಯ, ಸಂಗೀತ, ಶಿಲ್ಪ, ಮೊದಲಾದ ಲಲಿತ ಕಲೆಗಳಿಗೆ ಆಶ್ರಯದಾತ

ನಾದ ಸಾಮ್ರಾಟ. ಅವನ ಕಾಲದಲ್ಲಿ ವಿಜಯನಗರ ಸಾಮ್ರಾಜ್ಯವು ಹಿಂದೆಂದೂ ಕಾಣದಿದ್ದ ವೈಭವದ ಶಿಖರವನ್ನು ಮುಟ್ಟಿತ್ತು. ವಿದೇಶೀಯ ಪ್ರವಾಸಿಗಳೂ ರಾಯನ ವೈಭವವನ್ನೂ, ಉದಾರಗುಣಗಳನ್ನೂ ಮುಕ್ತ ಕಂಠದಿಂದ ಹೊಗಳಿದ್ದಾರೆ. ಇವನ್ನು ಯಾರೂ ಅಲ್ಲಗಳೆಯಲಾರರು.

ಆದರೆ ವ್ಯಕ್ತಿಶಃ ಕೃಷ್ಣದೇವರಾಯನಲ್ಲಿ ಹಲಕೆಲವು ದೌರ್ಬಲ್ಯಗಳು ಮನೆ ಮಾಡಿಕೊಂಡಿದ್ದುವು. ಕಡೆಯ ದಿನಗಳಲ್ಲಂತೂ ರಾಯನು, ಮುಂಗೋಪಿಯೂ, ಹಠಮಾರಿಯೂ ಆಗಿದ್ದನು. ಅಲ್ಲದೆ ದುಡುಕುತನ, ಸ್ವಪ್ರತಿಷ್ಠೆ, ದುರಭಿಮಾನಗಳು ರಾಯನ ಸದ್ಗುಣಗಳನ್ನು ಮರೆಸುವ ಮಟ್ಟಿಗೆ ಬೆಳೆದಿದ್ದುವು. ಈ ಅವಗುಣಗಳು ಮಹಾಪುರುಷರ ಅವಗುಣಗಳೇ— ದೀಪದ ಕೆಳಗಿನ ಕತ್ತಲೆಯಂತೆ. ಮುಂದೆ ಇವುಗಳಿಂದಲೇ ಸಾಮ್ರಾಜ್ಯದ ಪತನಕ್ಕೆ ಕಾರಣವಾಯಿತೆಂಬುದನ್ನೂ ಕೃಷ್ಣದೇವರಾಯನು ಬಹಮನೀ ಸುಲ್ತಾನರನ್ನು ಹೇಗೆ ನಡಸಿಕೊಂಡನೆಂಬ ಸಂಗತಿಯನ್ನೂ ಇತಿಹಾಸವನ್ನು ಬಲ್ಲವರು ಬಲ್ಲರು.

'ರಾಜದ್ರೋಹಿ' ಕಾದಂಬರಿಯು ಕೃಷ್ಣದೇವರಾಯನ ಕೊನೆಯ ದಿನಗಳ ಕಥೆ. ಈ ಕಥೆಯ ಹಂದರವನ್ನು ಫೋರ್ಡೊ—ನೋವೊ—ನನ್ನೀಜ್‌ನ ಕ್ರಾನಿಕಲ್ಸ್‌ದಿಂದ ತೆಗೆದುಕೊಂಡಿದ್ದೇನೆ. ಇದಕ್ಕೆ ಕಲ್ಪನೆಯ ರಕ್ತ ಮಾಂಸ ಗಳನ್ನು ತುಂಬಿ ನಿಮ್ಮೆದುರಿಗಿಟ್ಟಿದ್ದೇನೆ. ಈ ಕೃತಿ ಎಷ್ಟರ ಮಟ್ಟಿಗೆ ಜೀವಂತವಾಗಿದೆಯೋ ಅದನ್ನು ಸಹೃದಯರಾದ ವಾಚಕರೇ ನಿರ್ಧರಿಸಬೇಕು. ಈ ಕಾದಂಬರಿಯಲ್ಲಿ ಬರುವ ಕುಸುಮಾಜಿ, ವಿಜಯಭದ್ರರು ನನ್ನ ಕಲ್ಪನಾ ಲೋಕಕ್ಕೆ ಸೇರಿದ ವ್ಯಕ್ತಿಗಳು. ಉಳಿದುವೆಲ್ಲ ಇತಿಹಾಸದ ಸಂಗತಿಗಳನ್ನು ಆಧರಿಸಿ ಬರೆದುವು.

ಆರಂಭದಿಂದಲೂ ಸಹೃದಯದ ವಿಮರ್ಶೆಯಿಂದ ನನ್ನ ಸಾಹಿತ್ಯದ ಬೆಳಸಿಗೆ ಕಾರಣರಾದ ಆತ್ಮೀಯ ಗೆಳೆಯ ಶ್ರೀ ಎನ್. ಆರ್. ಶ್ರೀಕಂಠ ಮೂರ್ತಿ ಬಿ. ಎ., ಬಿ. ಟಿ. ಅವರಿಗೆ ಈ ಕೃತಿಯನ್ನು ಅರ್ಪಿಸಿದ್ದೇನೆ.

ಇದನ್ನು **'ಮೋಹನ ಪ್ರಕಾಶನ'**ದಲ್ಲಿ ಪ್ರಕಟಿಸಲು ನೆರವಾ ಆತ್ಮೀಯ ಗೆಳೆಯರಾದ ರಾ. ವೆಂ. ಶ್ರೀ. ಅವರಿಗೆ ತುಂಬ ಉಪಕೃತನಾ ದ್ದೇನೆ.

**ಶ್ರೀನಿವಾಸರಾವ್ ಕೊರಟಿ**



ನಿರ್ಜನವಾದ ಅರಣ್ಯ ಪ್ರಾಂತ್ಯದಲ್ಲಿ ನಾಲ್ವರು ಬೋಯಿಗಳು ಒಂದು ಮೇನೆಯನ್ನು ಹೊತ್ತು ನಡೆದಿದ್ದರು. ಮೇನೆಯ ರಕ್ಷಣೆಗಾಗಿ ಸಮವಸ್ತ್ರವನ್ನು ಧರಿಸಿದ ಆಯುಧಪಾಣಿಗಳಾದ ಇಬ್ಬರು ಅಶ್ವಾರೋಹಿಗಳು ಮುಂದೆ ನಡೆದಿದ್ದರು. ಮೇನೆಯನ್ನು ನೋಡಿದರೆ ಅದು ರಾಜಕುಟುಂಬಕ್ಕೋ ಇಲ್ಲವೇ ಶ್ರೀಮಂತವರ್ಗಕ್ಕೋ ಸೇರಿರಬೇಕೆಂದು ತೋರುತ್ತಿತ್ತು. ಮೇನೆ ಅಷ್ಟು ಸುಂದರವಾಗಿತ್ತು. ಬಾಗಿಲಿನ ಇರ್ಕಡೆಯಲ್ಲೂ ಅಂದವಾದ ಚಿತ್ರಗಳನ್ನು ಬಿಡಿಸಿದ್ದರು. ಬಾಗಿಲಿನ ಮಧ್ಯೆ ಒಳಗೆ ಕುಳಿತವರು ಹೊರಗೆ ನೋಡಲು ಅನುಕೂಲಿಸುವಂತೆ ಒಂದು ಸಣ್ಣ ಕಿಟಕಿ. ಅದನ್ನು ನವುರಾದ ರೇಷ್ಮೆಬಟ್ಟೆಯಿಂದ ಮುಚ್ಚಿದ್ದರು. ಅದರ ಮೂಲಕ ಹೊರಗಿನ ದೃಶ್ಯವನ್ನು ಯಾವ ಆತಂಕವೂ ಇಲ್ಲದೆ ನೋಡಬಹುದಾಗಿತ್ತು. ಆ ರೇಷ್ಮೆವಸ್ತ್ರದ ಮೇಲೆ ಬಿಡಿಸಿದ್ದ ಕಸೂತಿಯ ಕೆಲಸ, ಮೇನೆಯನ್ನು ಉಪಯೋಗಿಸುವವರ ಶ್ರೀಮಂತಿಕೆ, ರಸಿಕತೆಗಳಿಗೆ ಸಾಕ್ಷಿಯಾಗಿತ್ತು.

ಮೇನೆಯ ಒಳಗಡೆ ಇಬ್ಬರು ಸ್ತ್ರೀಯರು ಸುಖಾಸನಗಳ ಮೇಲೆ ಕುಳಿತುಕೊಂಡು ಜಾಲರಿಯ ಮೂಲಕ ಹೊರಗೆ ನೋಡುತ್ತಿದ್ದರು. ಅವರಲ್ಲಿ ಒಬ್ಬಳು ನಡುವಯಸ್ಸಿನವಳು. ವಯಸ್ಸು ಮೂವತ್ತೈದು—ನಲವತ್ತು ವರ್ಷಕ್ಕೆ ಮೀರಿರಲಾರದು. ಅವಳ ಮುಖದಲ್ಲಿ ಇನ್ನೂ ಯೌವನದ ಕಾಂತಿ ಇದ್ದರೂ ಅದು ಅಸ್ತಮಿಸುತ್ತಿರುವ ಸೂರ್ಯನ ಕಾಂತಿಯಂತೆ ಬಾಡಿತ್ತು. ನರೆತ ತಲೆಗೂದಲೂ ಮುಖದ ಸುಕ್ಕುಗಳೂ ಜಾರುತ್ತಿರುವ ಅವಳ ಯೌವನದ ಸಾಕ್ಷಿಪುರುಷರಂತೆ ಇದ್ದುವು. ಅವಳು ಶ್ರೀಮಂತರಿಗೆ ಒಪ್ಪುವ ವೇಷಭೂಷಣಗಳಿಂದ ಅಲಂಕೃತಳಾಗಿದ್ದಳು. ಅವಳ ಉಡಿಗೆ ತೊಡಿಗೆಗಳಿಂದ ಅವಳೊಬ್ಬಳು ವಿಲಾಸಿನಿ, ರಸಿಕಳು—ಎಂದು ಖಂಡಿತವಾಗಿ ಹೇಳಬಹುದಾಗಿತ್ತು.

ಅವಳ ಜೊತೆಯಲ್ಲಿದ್ದ ಇನ್ನೊಬ್ಬಳು ವಯಸ್ಸಿನಲ್ಲಿ ಅವಳಿಗಿಂತ ಚಿಕ್ಕವಳು. ಅವಳು ಇಪ್ಪತ್ತು ಇಪ್ಪತ್ತೆರಡು ವರುಷ ವಯಸ್ಸಿನ ಯುವತಿ.

ಆದರೂ ತೀರ ಸಾಮಾನ್ಯವಾದ ಉಡಿಗೆಯಲ್ಲಿದ್ದಳು. ಅವಳು ಅಂತಹ ಬೆಡಗು ಗಾತಿಯೂ ಅಲ್ಲ. ನಿರಾಭರಣ ಸುಂದರಿ. ಆಗತಾನೇ ಅರಳಿದ ಚೆಂಗುಲಾಬಿಯ ಮೈಬಣ್ಣ; ಮಾಟವಾಗಿ ತಿದ್ದಿದ ಮುಖ. ಆ ಮುಖದಲ್ಲಿ ಎಂತಹದೋ ಮೋಹಕತೆ ಮನೆ ಮಾಡಿಕೊಂಡಿತ್ತು. ಕಾಂತಿಯುಕ್ತವದ ಹರಿಣಿಯ ಕಣ್ಣು. ಚಪಲವಾದ ಆ ಕಣ್ಣುಗಳು ಅವಳ ಸುಂದರ ಮುಖಕ್ಕೆ ಅಪೂರ್ವವಾದ ಮುಗ್ಧ ಶೋಭೆಯನ್ನು ತಂದುಕೊಟ್ಟಿದ್ದುವು. ಎಂಥವರಿಗಾದರೂ ಆ ಮುಖವನ್ನು ಒಮ್ಮೆ ನೋಡಿದರೆ ಮತ್ತೊಮ್ಮೆ ನೋಡುವ ಆಸೆಯಾಗುತ್ತಿತ್ತು. ಅಷ್ಟು ಸುಂದರವಾಗಿತ್ತು—ಆ ಮುಖ.

ಮೇನೆ ಕಾಡಿನ ದಾರಿಯಲ್ಲಿ ನಿಧಾನವಾಗಿ ಸಾಗಿತ್ತು. ಎತ್ತರವಾಗಿ ಬೆಳೆದ ಗಿಡ ಮರಗಳ ನಡುವೆ ದಾರಿ ಇಕ್ಕಟ್ಟಾಗಿತ್ತು. ಅನೇಕ ವೇಳೆ ದಾರಿ ಮುಳ್ಳು ಪೊದೆ, ಗಿಡಗೆಂಟೆಗಳಿಂದ ಮುಚ್ಚಿ ಹೋಗಿತ್ತು. ಅವುಗಳನ್ನು ಕೈಗತ್ತಿಗಳಿಂದ ಸವರಿ, ದಾರಿ ಮಾಡಿಕೊಂಡು, ಮುಂದಡಿಯಿಡಬೇಕಾಗುತ್ತಿತ್ತು. ಆ ನಿರ್ಜನಾರಣ್ಯದಲ್ಲಿ ಎಲ್ಲೆಲ್ಲೂ ಗಭೀರ ಮೌನ ಆವರಿಸಿತ್ತು. ಈ ಮೌನ ಒಮ್ಮೊಮ್ಮೆ ಹಕ್ಕಿಗಳ ಚಿಲಿಪಿಲಿ ರವದಿಂದಲೂ,ಕಾಡುಬೆಕ್ಕು, ಕಾಡುಕೋಳಿ, ನವಿಲು, ನರಿ, ಚಿರತೆ, ಮುಳ್ಳು ಹಂದಿಗಳ ಚೀತ್ಕಾರಗಳಿಂದಲೂ ಸಿಂಹ ಹುಲಿಗಳ ಗರ್ಜನೆಯಿಂದಲೂ ಒಡೆಯುತ್ತಿತ್ತು. ಒಮ್ಮೊಮ್ಮೆ 'ಸುಯ್' ಎಂದು ಬೀಸುವ ಗಾಳಿ, ದೈತ್ಯಾಕಾರದಲ್ಲಿ ನಿಂತ ಮರಗಳ ಟೊಂಗೆಗಳಿಂದ ಹೊರಡುವ ಮರಮರ ಸದ್ದು ಕಾಡಿನ ಮೌನವನ್ನು ಕದಡುತ್ತಿತ್ತು. ಇವುಗಳನ್ನು ಮೀರಿಸುವಂತೆ ಈಗ ಮೇನೆಯನ್ನು ಹೊತ್ತು ನಡೆದಿದ್ದ ಬೋಯಿಗಳ ಆಯಾಸ ಪರಿಹಾರಕ್ಕೆ ಮಾತ್ರವಲ್ಲ, ಕಾಡಿನ ದುಷ್ಟ ಮೃಗಗಳು ತಮ್ಮ ಗೊಡವೆಗೆ ಬರದೆ ಇರಲೆಂದು ಅವರು ದೊಡ್ಡ ದನಿಯಲ್ಲಿ ಕೂಗುತ್ತಿದ್ದರು. ಇದರಿಂದ ಅವರ ಆಯಾಸವೆಷ್ಟೋ ಪರಿಹಾರವಾಗುತ್ತಿತ್ತು, ದುಷ್ಟಮೃಗಗಳ ಭೀತಿಯೂ ತಪ್ಪುತ್ತಿತ್ತು.

ಹೀಗೆ ಅವರು ಅನೇಕ ತಾಸುಗಳ ತನಕ ಸಾಗಿರಬೇಕು. ಮೇನೆಯ ಒಳಗೆ ಇದ್ದವರು ಹಠಾತ್ತನೆ ಏನನ್ನೋ ಸಂಜ್ಞೆಮಾಡಿ ತಿಳಿಸಿದರು. ಮೇನೆಯ ಗತಿ ನಿಧಾನವಾಯಿತು. ಅದನ್ನು ಹೊತ್ತುಕೊಂಡು ನಡೆದಿದ್ದ ಬೋಯಿಗಳು, ತಲೆಯನ್ನು ಆಗಸದೆಡೆಗೆ ಒಮ್ಮೆ ತಿರುಗಿಸಿ, ಹೊತ್ತು ನೆತ್ತಿ

ಗೇರಿರುವುದನ್ನು ಅರಿತು ತಮ್ಮ ಮಧ್ಯಾಹ್ನದ ವಿಶ್ರಾಂತಿಯ ವೇಳೆಯಾಯಿ ತೆಂದು ಅರಿತರು. ಅವರಿಗಿಂತ ಮುಂದಾಗಿ ಹೋಗಿದ್ದ ರಾವುತರೂ ಒಳ್ಳೆಯ ಸುದ್ದಿಯನ್ನೇ ತಂದರು. ಆ ಪ್ರದೇಶದಲ್ಲಿ—ತೀರ ಸಮೀಪದಲ್ಲೇ ಬೆಟ್ಟದ ತೊರೆಯೊಂದು ಹರಿಯುತ್ತಿರುವುದಾಗಿಯೂ, ಅಲ್ಲಿ ಕೆಲಕಾಲ ತಂಗಿದ್ದು ಅಡಿಗೆ ಊಟಗಳನ್ನು ಮುಗಿಸಿಕೊಂಡು ಅನಂತರ ಮುಂದಿನ ಪ್ರಯಾಣಕ್ಕೆ ಸಿದ್ಧತೆ ಮಾಡಿಕೊಳ್ಳಬಹುದೆಂದೂ ಸಲಹೆಮಾಡಿದರು. ಅವರ ಸಲಹೆ ಮೇನೆ ಯಲ್ಲಿ ಇದ್ದವರಿಗೆ ಸೂಕ್ತವಾಗಿ ತೋರಿತು. ಅವರು ಮೇನೆಯನ್ನು ಸುರ ಕ್ಷಿತವಾದ ಕಡೆ ಇಳಿಸಲು ಹೇಳಿ ತಾವು ಮೇನೆಯಿಂದ ಇಳಿಯಲು ಸಿದ್ಧ ರಾದರು.

ಆ ಪ್ರದೇಶದಲ್ಲಿ ನೆಲಮುಗಿಲಿಗೆ ಬೆಳೆದು ನಿಂತ ಭೀಮಾಕಾರದ ಕಾಡು ಮರಗಳೂ, ಅವುಗಳನ್ನು ಆಶ್ರಯಿಸಿ ಬೆಳೆದಿದ್ದ ಅನೇಕ ತರುಲತೆಗಳೂ, ವಿಶೇಷವಾಗಿದ್ದುವು. ಮಧ್ಯಾಹ್ನದ ನಡು ಬಿಸಿಲಾದರೂ ಸೂರ್ಯನ ಪ್ರಖರ ಕಿರಣಗಳು ಮಾತ್ರ ನೆಲದ ಮೇಲೆ ಬೀಳುತ್ತಿರಲಿಲ್ಲ. ಅವುಗಳ ಪ್ರವೇಶಕ್ಕೆ ಅವಕಾಶವಿಲ್ಲದಂತೆ ಗಿಡ ಮರಗಳು ಛತ್ರಿ ಹಿಡಿದಿದ್ದುವು. ಅಲ್ಲೆಲ್ಲ—ಎತ್ತ ತಿರುಗಿದರೂ ಕಣ್ಣು ಮನಸ್ಸಿಗೆ ಹಿತವನ್ನುಂಟು ಮಾಡುವ ಹಚ್ಚ ಹಸಿರಿನ ಲಾಸ್ಯವೇ ನಡೆದಿತ್ತು. ನೆಲದಲ್ಲಿ ಅನೇಕ ಕಡೆ ಜವುಗು ಹತ್ತಿ, ಕಾಲಿಟ್ಟ ಕಡೆ ನಡುವುದ್ದದ ಕೆಸರು ತುಂಬಿತ್ತು. ಈ ಕೆಸರಿನ ಕಡಲನ್ನು ದಾಟುವುದು ಪ್ರಯಾಸವಾಗಿತ್ತು. ಅಲ್ಲಿ ಇಲ್ಲಿ ಅನೇಕ ಬಗೆಯ ಜಲಚರಗಳೂ ವಾಸ ಮಾಡಿಕೊಂಡಿದ್ದುವು. ಏಡಿಯನ್ನು ಹಿಡಿಯಲು ಹಾವೂ, ಹಾವಿಗಾಗಿ ಹೊಂಚುಹಾಕುವ ಮುಂಗಸಿಯೂ, ಮುಂಗಸಿಯನ್ನು ಬೇಟೆಯಾಡಲು ಚಿರತೆ, ಹುಲಿ, ಸಿಂಹಗಳೂ ಆ ಪ್ರದೇಶದಲ್ಲಿ ಸಾಮಾನ್ಯ ನೋಟ! ಹಿಂದೆ ಈ ಪ್ರದೇಶವೆಲ್ಲವೂ ದಂಡಕಾರಣ್ಯವಾಗಿತ್ತೆನ್ನಲು ಅಳಿದುಳಿದ ಈ ವನ ಪ್ರದೇಶವೇ ಸಾಕು. ಇದು ಅಷ್ಟು ನಿರ್ಜನವಾಗಿ, ಅಷ್ಟು ಭೀಕರವಾಗಿತ್ತು.

ಮೇನೆಯನ್ನು ಬೋಯಿಗಳು ಒಂದೆಡೆ ಇಳಿಸಿದರು. ಹಿರಿಯವಳಾದ ತಿಪ್ಪಾಜಿ ಮೇನೆಯಿಂದ ಲಗುಬಗಿಯಿಂದ ಇಳಿದು ಸುತ್ತಲಿನ ಪ್ರದೇಶವನ್ನು ಸೂಕ್ಷ್ಮವಾಗಿ ನೋಡಿ, ತಾವು ಕೆಲಕಾಲ ವಿಶ್ರಾಂತಿ ತೆಗೆದುಕೊಳ್ಳಲು ಅದೇ ಯೋಗ್ಯಸ್ಥಳವೆಂದು ನಿರ್ಧರಿಸಿದಳು. ತೀರ ಸಮೀಪದಲ್ಲಿ—ಹತ್ತುನೂರು

ದೂರದಲ್ಲಿ ಒಂದು ಕಿರು ಅಬ್ಬಿ ಹರಿಯುತ್ತಿತ್ತು. ಮೊದಲು ಅಬ್ಬಿಯಲ್ಲಿ ಮೈ ತೊಳೆದುಕೊಂಡು, ಅನಂತರ ಅಡಿಗೆಯ ಪ್ರಯತ್ನಮಾಡಬೇಕೆಂದು ನಿರ್ಧರಿಸಿ, ತಿಪ್ಪಾಜಿ ಅಬ್ಬಿಯ ಕಡೆ ವಸ್ತ್ರಗಳನ್ನು ತೆಗೆದುಕೊಂಡು ಹೊರಟಳು. ಕಿರಿಯವಳಾದ ಕುಸುಮಾಜಿಯೂ ಅವಳನ್ನು ಹಿಂಬಾಲಿಸಿದಳು.

ಕುಸುಮಾಜಿಗೆ ಮೊದಲಿನಿಂದಲೂ ಹರಿಯುವ ನೀರಿನಲ್ಲಿ ಚೆಲ್ಲಾಟವಾಡುವುದೆಂದರೆ ತುಂಬಾ ಇಷ್ಟ. ಅವಳ ಊರಾದ ಶ್ರೀರಂಗಪಟ್ಟಣದಲ್ಲಿಯೂ ಅಷ್ಟೆ. ಅವಳು ಸ್ನಾನಮಾಡಲು ಸ್ನಾನಘಟ್ಟಕ್ಕೆ ಹೋದಳೆಂದರೆ ಅನೇಕ ತಾಸುಗಳ ತನಕ ನೀರಿನಲ್ಲಿ ಎಳೆಯ ಮಕ್ಕಳಂತೆ ಆಡುತ್ತಾ ಮೈಮರೆತುಬಿಡುತ್ತಿದ್ದಳು. ಆಗ ತಿಪ್ಪಾಜಿಯೇ ಬಂದು ಅವಳನ್ನು ಎಚ್ಚರಿಸಿ ಮನೆಗೆ ಕರೆದೊಯ್ಯಬೇಕು. ಅವಳಿಗೆ ನೀರೆಂದರೆ—ನೀರಿನ ಆಟವೆಂದರೆ ಅಷ್ಟು ಪ್ರಾಣ! ಈಗ ಬಳಿಯಲ್ಲೇ ತೊರೆ ಇರುವುದನ್ನು ಕೇಳಿ ಇದುವರೆಗೆ ಜಡವಾಗಿ ಕುಳಿತಿದ್ದ ಅವಳ ಚೇತನ ಒಮ್ಮೆಲೇ ಚಟುವಟಿಕೆಯನ್ನು ತಳೆದಿತ್ತು. ಅವಳು ಒಂದೇ ಉಸಿರಿಗೆ ಅದನ್ನು ಸೇರುವ ಆತುರದಲ್ಲಿ ಹೊರಟಿದ್ದಳು.

ತೊರೆ ತುಂಬಾ ಚಿಕ್ಕದಾಗಿತ್ತು. ಅದರ ಪಾತ್ರ ಕಿರಿದಾಗಿದ್ದರೂ ಅದರ ರಭಸ ಮಾತ್ರ ಜೋರಾಗಿತ್ತು. ಅದು ಹತ್ತಿರದಲ್ಲಿ ಎಲ್ಲೋ ಹುಟ್ಟಿ ಬಂದಂತೆ ಇತ್ತು. ಅದು ಬಂಡೆಗಳ ಮೇಲೆ ಹರಿದು ಬಂದಾಗ ಬಿಳಿನೊರೆಯ ಮೋಡ ಮೇಲೇರುತ್ತಿತ್ತು. ಅದನ್ನು ನೋಡುತ್ತಲೇ ಕುಸುಮಾಜಿಗೆ ಸಂತೋಷದಿಂದ ಮೈಯುಬ್ಬಿತು. ಅವಳು ಉತ್ಸಾಹದಿಂದ ಉಟ್ಟ ಬಟ್ಟೆಯನ್ನು ಬದಲಿಸುವ ಗೋಜಿಗೆ ಹೋಗದೆ, ಎಳೆಯ ಮಗುವಿನಂತೆ ಅಬ್ಬಿಯ ನೀರಿಗೆ ಬಿದ್ದಳು. ತೊರೆ ಆ ಪ್ರದೇಶದಲ್ಲಿ ಕಲ್ಲುಗುಂಡುಗಳ ನಡುವೆ ಸಣ್ಣ ಹೊಂಡವನ್ನಾಗಿ ಮಾಡಿ, ಮುಂದೆ ಹರಿದಿತ್ತು. ಸ್ನಾನಕ್ಕೆ ತುಂಬಾ ಪ್ರಶಸ್ತವಾದ ಅಲ್ಲಿ ತಿಪ್ಪಾಜಿ ತನ್ನ ಸ್ನಾನವನ್ನು ಮುಗಿಸಿ, ಬಟ್ಟೆಗಳನ್ನು ಹಿಂಡಿಕೊಂಡು, ಹೊರಗೆ ಬಂದರೂ ಕುಸುಮಾಜಿ ಇನ್ನೂ ತನ್ನ ಜಲಕ್ರೀಡೆಯನ್ನು ಮುಗಿಸಿರಲಿಲ್ಲ.

" ಕುಸುಮಾ, ಅದೆಷ್ಟು ಹೊತ್ತು ಸ್ನಾನಮಾಡುವುದು? ನೀರಿನಲ್ಲಿ

ಹಾಗೆ ಮೈಯದ್ದಿ ಕುಳಿತರೆ ಶೀತವಾದರೆ ಏನು ಗತಿ?" ಎಂದಳು ತಿಪ್ಪಾಜಿ.

"ಇಲ್ಲ ಅಬ್ಬೆ, ಇನ್ನೊಂದು ನಿಮಿಷ. ಸ್ನಾನ ಮುಗಿಸಿ ಬಂದುಬಿಡ್ತೇನೆ. ಅಷ್ಟುಹೊತ್ತಿಗೆ ನೀನು ಅಡಿಗೆ ಪ್ರಯತ್ನ ಮುಂದುವರಿಸು" ಎಂದಳು ನಗುತ್ತ ಕುಸುಮಾಜಿ. ಈ ಮಾತಿನಲ್ಲಿ ತಾಯಿಗೆ ನಂಬಿಕೆ ಹುಟ್ಟದಿದ್ದರೂ ಅವಳು ತನ್ನ ಪಾರಿಯನ್ನೇ ಕಾಯುತ್ತ ಕುಳಿತಿದ್ದ ಅಡಿಗೆಯ ಕೆಲಸವನ್ನು ನೆನೆಸಿ ಕೊಂಡು ಅಲ್ಲಿಂದ ಹೊರಟುಹೋದಳು.

ಬೋಯಿಗಳು ಅಡಿಗೆಗೆ ಬೇಕಾಗಿದ್ದ ಎಲ್ಲ ವ್ಯವಸ್ಥೆಯನ್ನೂ ಮಾಡಿ, ತಾವೂ ಸ್ನಾನಮಾಡಿ ಬರಲು—ಸಾಧ್ಯವಾದರೆ ಯಾವುದಾದರೂ ಕಾಡಿನ 'ಮಿಗ'ವನ್ನು ಹೊಡೆದು ತರಲು ಅಲ್ಲಿಂದ ಕಣ್ಮರೆಯಾಗಿದ್ದರು. ಕುದುರೆ ಸವಾರರು ಕುದುರೆಗಳಿಗೆ ನೀರು ಕುಡಿಸಿ, ಅವುಗಳನ್ನು ಗಿಡಕ್ಕೆ ಕಟ್ಟಿಹಾಕಿ ಅದಕ್ಕೆ ಮೇವು ಒದಗಿಸುವ ಪ್ರಯತ್ನದಲ್ಲಿ ತೊಡಗಿದ್ದರು. ತಿಪ್ಪಾಜಿ ತನ್ನ ಅಡಿಗೆಯ ಕೆಲಸದಲ್ಲಿ ತೊಡಗಿದ್ದಳು.

ಇದ್ದಕ್ಕಿದ್ದಂತೆ 'ಗುರ್' 'ಗುರ್' ಎನ್ನುವ ಶಬ್ದ ತೊರೆಯ ಕಡೆ ಯಿಂದ ಕೇಳಿಸಿತು. ತಿಪ್ಪಾಜಿ ಚಕಿತಳಾಗಿ ಧ್ವನಿ ಬಂದತ್ತ ನೋಡಿದಳು. ಮೊದಲು ದೂರದಲ್ಲೆಲ್ಲೋ ಕೇಳಿಸುತ್ತಿದ್ದ ಆ ಶಬ್ದ ಕ್ಷಣ ಕ್ಷಣಕ್ಕೆ ಹತ್ತಿರ ದಲ್ಲೇ ಕೇಳತೊಡಗಿತ್ತು. ಯಾವುದೋ ಒಂದು ಕಾಡು ಮೃಗ ಮಾಡುತ್ತಿ ರುವ ಗರ್ಜನೆ ಇರಬೇಕೆಂದು ಊಹಿಸಿದ ಅವಳು ಕುಸುಮಾಜಿಯ ರಕ್ಷಣೆ ಗೆಂದು, ಅಡಿಗೆ ಕೆಲಸವನ್ನು ಬಿಟ್ಟು ತೊರೆಯ ಕಡೆ ಧಾವಿಸಿದಳು. ತಿಪ್ಪಾಜಿ ಅತ್ತ ಹೆಜ್ಜೆಹಾಕುವುದಕ್ಕೂ ತೊರೆಯ ಕಡೆಯಿಂದ ಕುಸುಮಾಜಿ ಚೀತ್ಕಾರ ಮಾಡುತ್ತಾ ಒದ್ದೆ ಬಟ್ಟೆಗಳಲ್ಲೇ ಓಡಿಬರುವುದಕ್ಕೂ ಸರಿ ಹೋಯಿತು. ಕುಸುಮಾಜಿ ಗಾಬರಿಗೊಂಡು ಬರುತ್ತಿರುವುದೇಕೆಂದು ತಿಪ್ಪಾಜಿಗೆ ತಿಳಿಯದೆ ಹೋಯಿತು.

"ಏನಾಯಿತು ಏನಾಯಿತು? ಮಗು?" ಎಂದು ಹತ್ತು ಬಾರಿ ಕೇಳಿದ ಮೇಲೆ ಕುಸುಮಾಜಿ ಹೆದರಿಕೆಯಿಂದ ಬಣ್ಣಗೆಟ್ಟಿದ್ದ ಮುಖವನ್ನು ತೊರೆಯ ಕಡೆ ತಿರುಗಿಸಿ, ಕೈ ತೋರಿಸಿ "ಅಬ್ಬೆ. ಅಗೋ....ಅಲ್ಲಿ........ಅದು ಬರು ತ್ತಿದೆ." ಎಂದು ಅದನ್ನು ನೋಡಲಾರದೆ ಮತ್ತೆ ಮುಖವನ್ನು ಮುಚ್ಚಿಟ್ಟು

ಕೊಂಡಳು. ಮಗಳ ಮಾತುಗಳಿಂದ ಯಾವುದೊಂದೂ ಬಗೆ ಹರಿಯದೆ ಅಲ್ಲಿ ಬರುತ್ತಿರುವ ಪ್ರಾಣಿ ಯಾವುದೆಂದು ಅವಳು ಅತ್ತ ದೃಷ್ಟಿ ಹೊರಳಿಸಿ ನೋಡುತ್ತಾಳೆ! ಎದುರಿಗೆ ದೈತ್ಯಾಕಾರವಾಗಿ, ತನ್ನ ರೋಮ ರೋಮಗಳಲ್ಲೂ ಹುದುಗಿದ್ದ ಮುಳ್ಳನ್ನು ನಿಮಿರಿಸಿ ನಿಂತುಕೊಂಡು, ಮೇಲೆ ಬೀಳಲು ಸನ್ನದ್ಧವಾಗಿರುವ ಮುಳ್ಳು ಹಂದಿ! ಅದನ್ನು ಕಂಡು ತಿಪ್ಪಾಜಿಯೂ ಚಿಟ್ಟನೆ ಚೀರಿದಳು. ಅವಳಿಗೆ ಅದೇನೆನಿಸಿತೋ ಕೂಡಲೇ ಕುಸುಮಾಜಿಯ ಕೈಯನ್ನು ಹಿಡಿದುಕೊಂಡು, ದರದರನೆ ಎಳೆದುಕೊಂಡು ಹೋಗಿ ಮೇನೆಯೊಳಗೆ ದಬ್ಬಿ ತಾನೂ ಒಳಹೊಕ್ಕು ಬಾಗಿಲನ್ನು ಭದ್ರಪಡಿಸಿದಳು. ನಿಮಿಷ ನಿಮಿಷಕ್ಕೂ ಕೋಪದಿಂದ 'ಗುರ್ ಗುರ್' ಗುಟ್ಟುತ್ತಾ, ತನ್ನ ಕೋರೆ ಹಲ್ಲುಗಳನ್ನು ಮಸೆಯುತ್ತಾ, ಕಾಲಿನ ಪಂಜಗಳಿಂದ ನೆಲವನ್ನು ಬಗಿಯುತ್ತಾ, ರೌದ್ರಾವೇಶದಲ್ಲಿ ನಿಂತ ಆ ಕಣೆ ಹಂದಿಯಿಂದ ಅವರು ಪಕ್ಕನೆ ತಪ್ಪಿಸಿಕೊಂಡದ್ದು ಅವರ ಪೂರ್ವ ಪುಣ್ಯದಿಂದಲೇ ಸರಿ. ಇಲ್ಲವಾದರೆ ಕೇವಲ ಹತ್ತು ಮಾರು ದೂರದಲ್ಲಿ ಇದ್ದ ಕಣೆ ಹಂದಿಯು ತನ್ನ ಕೈಗೆ ಸಿಕ್ಕಿದ ಬೇಟೆಯನ್ನು ನಿರ್ಲಕ್ಷಿಸುವುದೆಂದರೇನು? ಅದರಲ್ಲೂ ತನ್ನ ಮರಿಯೊಂದನ್ನು ಘಾತಿಸಿದ್ದ ಮನುಷ್ಯರ ಮೇಲೆ ತನ್ನ ಸೇಡನ್ನು ತೀರಿಸಿಕೊಳ್ಳಲು ನೋಡುತ್ತಿದ್ದ ಆ ಕ್ರೂರ ವರಹನ ಕೈಯಿಂದ ತಪ್ಪಿಸಿಕೊಂಡುದೇ ಅವರ ಪುಣ್ಯ. ತಿಪ್ಪಾಜಿ, ಕುಸುಮಾಜಿಯರು ತಮ್ಮ ಮೇನೆಯನ್ನು ಸೇರಿಕೊಂಡು ಅದರ ಬಾಗಿಲುಗಳನ್ನು ಭದ್ರವಾಗಿ ಇಕ್ಕಿ ಕುಳಿತ ಮೇಲೆ, ಕುದುರೆ ಸವಾರರಿಗೆ ಬೇರೇನು ಮಾಡಲೂ ತೋರದೆ ಅವರೂ ಪ್ರಾಣ ಭೀತಿಯಿಂದ ಬಳಿಯಲ್ಲಿದ್ದ ಮರವನ್ನು ಏರಿಕೊಂಡರು.

ಇಷ್ಟೆಲ್ಲಾ ಅಚಾತುರ್ಯ ಬೇಟೆಗೆಂದು ಹೋಗಿದ್ದ ಬೋಯಿಗಳಿಂದ ಉಂಟಾಗಿತ್ತು!

ಬೇಟೆಯಾಡಲು ಹೊರಟ ಬೋಯಿಗಳಿಗೆ ಬೇರೆ ಯಾವ ಮೃಗಗಳೂ ಕಣ್ಣಿಗೆ ಬೀಳದೆ, ತನ್ನ ಮರಿಗಳಿಗೆ ನೀರುಣಿಸಲು ತೊರೆಗೆ ಬಂದಿದ್ದ ಈ ಮುಳ್ಳು ಹಂದಿಯ ದರ್ಶನವಾಗಿತ್ತು. ಅವರಲ್ಲಿ ಒಬ್ಬನು ಹಂದಿಯ ಶಕ್ತಿಯನ್ನು ಉಪೇಕ್ಷೆಮಾಡಿ, ಹಿಂದಿನಿಂದ ಬರುತ್ತಿದ್ದ ಮರಿಯೊಂದನ್ನು ಭಲ್ಲೆಯಿಂದ ಗಾಯಗೊಳಿಸಿ ಕೊಂದುಬಿಟ್ಟನು. ತನ್ನ ಮರಿಯನ್ನು ತನ್ನ ಕಣ್ಣಿದಿರೇ ಕೊಂದ ಆ ಬೋಯಿಗಳನ್ನು ಸುಮ್ಮನೆ ಬಿಡಬಾರದೆಂದು ಆ ಕಣೆ ಹಂದಿ

ಅವರ ಮೇಲೆ ಬಿದ್ದಿತು. ಅವರು ಹೆದರಿಕೆಯಿಂದ ದಿಕ್ಕಾಪಾಲಾಗಿ ಓಡಿ ಮರಗಳನ್ನು ಏರಿ ಕುಳಿತರು. ಹೀಗಾಗಿ ಹಂದಿಗೆ ಶತ್ರುಗಳು ಸಿಕ್ಕಿರಲಿಲ್ಲ. ಇದರಿಂದಾಗಿ ಕೋಪಗೊಂಡಿದ್ದ ಆ ಹಂದಿ ತೊರೆಯಲ್ಲಿ ಸ್ನಾನ ಮಾಡುತ್ತಿದ್ದ ಕುಸುಮಾಜಿಯ ಮೇಲೆ ಬೀಳಲು ಬಂತು. ಅದನ್ನು ಅಕಸ್ಮಾತ್ ಕಂಡ ಕುಸುಮಾಜಿ, ಸ್ನಾನ ಮಾಡುವುದನ್ನು ಬಿಟ್ಟು ತೊಯ್ದ ಬಟ್ಟೆಗಳಲ್ಲೇ ಓಡಿಬಂದಿದ್ದಳು.

ಮುಳ್ಳುಹಂದಿಯ ಕೈಗೆ ಮನುಷ್ಯರಾರೂ ಸಿಗದೆ ಹೋದುದರಿಂದ ಅದಕ್ಕೆ ಭಯಂಕರ ಸಿಟ್ಟು ಬಂದಿತ್ತು. ಸಿಟ್ಟಿನಲ್ಲಿ ಬೇರೇನು ಮಾಡಲೂ ತೋರದೆ ಮೇನೆಯ ಮೇಲೆ ಬಿದ್ದು, ತನ್ನ ಕೋರೆ ದಾಡೆಗಳಿಂದಲೂ, ಮುಳ್ಳುಗಳಿಂದಲೂ ಮೇನೆಯನ್ನು ಪರಚಿ ದಣಿಯುತ್ತಿತ್ತು. ಇಷ್ಟಾದರೂ ಒಳಗೆ ಇದ್ದವರು ಯಾರೂ ಅದರ ಕೈಗೆ ಸಿಕ್ಕಲಿಲ್ಲ. ಮೇನೆಯ ಗಟ್ಟಿಯಾದ ಮರ ಅವರಿಗೆ ಬಲವಾದ ರಕ್ಷಣೆಯನ್ನು ಕೊಟ್ಟಿತ್ತು. ಹೀಗೆ ಆ ಮರ ಎಷ್ಟು ಹೊತ್ತು ಅವರಿಗೆ ರಕ್ಷಣೆ ಕೊಟ್ಟೀತು? ಈಗಲ್ಲದಿದ್ದರೂ ಇನ್ನು ಕೊಂಚ ಹೊತ್ತಿಗಾದರೂ – ಮುಳ್ಳುಹಂದಿಯ ಪೆಟ್ಟಿಗೆ ಅದು ಮುರಿದು ಬೀಳಲೇ ಬೇಕು. ವರಹನ ಆಘಾತ ಅಷ್ಟು ಭಯಂಕರವಾಗಿತ್ತು!

ತಿಪ್ಪಾಜಿ ಕುಸುಮೆಯರು ತಮ್ಮ ಆಯುಸ್ಸು ಇಂದಿಗೆ ಪೂರೈಸಿತೆಂದು ಭಾವಿಸಿದರು. ಮೇಲಿಂದ ಮೇಲೆ ಸಿಡಿಲಿನಂತೆ ಮೇನೆಯ ಮೇಲೆ ಎರಗುತ್ತಿದ್ದ ಆ ವರಹನಿಂದ ತಾವು ತಪ್ಪಿಸಿಕೊಳ್ಳಲು ಸಾಧ್ಯವೇ ಇಲ್ಲವೆಂದು ತಿಳಿದರು. ಅವರು ತಮ್ಮ ಪ್ರಾಣರಕ್ಷಣೆಗಾಗಿ ಕೂಗಿಕೊಂಡರು. ಬೊಬ್ಬೆಯಿಟ್ಟರು. ಅವರ ಅಂಗರಕ್ಷಕರಾಗಲೀ, ಮೇನೆಯನ್ನು ಹೊರುವ ಬೋಯಿಗಳಾಗಲೀ ಅವರ ರಕ್ಷಣೆಗೆ ಬರಲಿಲ್ಲ. ಎಲ್ಲರಿಗೂ ತಮ್ಮ ಪ್ರಾಣ ಉಳಿದರೆ ಸಾಕೆಂದು ಇರುವಾಗ ಇನ್ನೊಬ್ಬರ ಪ್ರಾಣರಕ್ಷಣೆಗೆ ಹೋಗುವ ಧೈರ್ಯ ಅವರಿಗೆಲ್ಲಿದೆ? ಅಂತಲೇ ಅವರು ಹತ್ತಿದ್ದ ಮರಗಳನ್ನು ಬಿಟ್ಟು ಇಳಿಯಲಿಲ್ಲ! ತಿಪ್ಪಾಜಿ, ಕುಸುಮಾಜಿಯರು ಮಾಡುತ್ತಿರುವ ಚೀತ್ಕಾರ, ವರಹನ ಆಘಾತಗಳಿಂದ ಉಂಟಾಗುತ್ತಿದ್ದ ಗುಡುಗಿನ ಧ್ವನಿಗಳಿಂದ ಕಾಡಿನ ನಿಶ್ಶಬ್ದ ಮೌನ ಕದಡಿ, ಎಲ್ಲೆಡೆಯಲ್ಲೂ ಶಂಕೆ, ಕಳವಳಗಳೇ ಉಂಟಾಗಿದ್ದುವು. ಇಂತಹ ಪ್ರಾಣಾಪಾಯದ ಸ್ಥಿತಿಯಲ್ಲಿ ತಿಪ್ಪಾಜಿ ಕುಸುಮಾಜಿಯರು ಇರುವಾಗಲೇ, ದೈವ

ಸಹಾಯವೆಂಬಂತೆ, ಆ ಮಾರ್ಗದಲ್ಲಿ ಆಕಸ್ಮಿಕವಾಗಿ ಹೋಗುತ್ತಿದ್ದ ರಾವುತನೊಬ್ಬನ ಗಮನ ಅತ್ತ ಹರಿದು, ಅವರಿಬ್ಬರೂ ಆ ವರಹನ ದವಡೆಯಿಂದ ಪಾರಾದರು.

ಆ ರಾವುತನೇ ತಿಮ್ಮರಸನ ಮಗನಾದ ಗೋವಿಂದರಾಜ. ಅವನು ಗೋವೆಯ ಯುದ್ಧದಲ್ಲಿ ಅಸದ್‌ಖಾನನನ್ನು ಸೋಲಿಸಿ, ಅವನ ಶಿರವನ್ನು ಪ್ರಭುಗಳಿಗೆ ವಿಜಯದ ಕಾಣಿಕೆಯಾಗಿ ಅರ್ಪಿಸಲು ಮಿತಪರಿವಾರದೊಂದಿಗೆ ವಿಜಯನಗರಕ್ಕೆ ಹೊರಟಿದ್ದನು. ಅವನ ಉತ್ಸುಕತೆಗೆ ಸರಿಸಾಟಿಯಾದ ಅವನ ಕುದುರೆ ಮಿಂಚಿನ ವೇಗದಲ್ಲಿ ಹೋಗುತ್ತಿತ್ತು. ಅವನನ್ನು ಹಿಂಬಾಲಿಸಿ ಬರುತ್ತಿದ್ದ ಸಂಗಡಿಗರು ನಿರ್ವಾಹವಿಲ್ಲದೆ ಹಿಂದೆ ಉಳಿಯಬೇಕಾಯಿತು. ಎಲ್ಲರಿಗೂ ಮುಂದಾಗಿ ಹೊರಟಿದ್ದ ಗೋವಿಂದರಾಜನ ಕಿವಿಗೆ ವರಹನ ಗರ್ಜನೆ, ಅದು ಮಾಡುತ್ತಿದ್ದ ಆಘಾತ ಕೇಳಿಸಿತು. ಅದರೊಂದಿಗೆ ತಾಯಿ ಮಕ್ಕಳ ರೋದನ, ಆಕ್ರಂದನಗಳೂ ಕೇಳಿಸಿತು. ಅವುಗಳನ್ನು ಕೇಳಿ, ನಡೆದಿರಬಹುದಾದುದನ್ನು ಊಹಿಸಿ, ದುಃಖಾರ್ತರಿಗೆ ನೆರವಾಗಲು ತನ್ನ ಕುದುರೆಯನ್ನು ದೌಡಾಯಿಸುತ್ತ ಅಲ್ಲಿಗೆ ಬಂದನು. ನಿಮಿಷ ಮಾತ್ರದಲ್ಲಿ ಅಲ್ಲಿ ನಡೆದಿರುವ ಎಲ್ಲ ವಿದ್ಯಮಾನವೂ ತಿಳಿಯಿತು. ಇನ್ನು ತಡಮಾಡಿದರೆ ಪ್ರಾಣಾಪಾಯವಾಗಬಹುದೆಂದು, ಕೂಡಲೇ ಕುದುರೆಯಿಂದ ಚಂಗನೆ ನೆಲಕ್ಕೆ ಧುಮುಕಿ, ಒರೆಯಿಂದ ಕತ್ತಿಯನ್ನು ಸೆಳೆದು ಅದನ್ನು ಇದಿರಿಸಲು ಹೊರಟ.

ಬೃಹದಾಕಾರದ ಆ ವರಹನನ್ನು ಒಂಟಿಯಾಗಿ ಇದಿರಿಸುವುದೆಂದರೆ ಸುಮ್ಮನಾಗಲಿಲ್ಲ. ಗೋವಿಂದರಾಜನಲ್ಲದೆ ಬೇರೆ ಯಾರಾದರೂ ಆಗಿದ್ದರೆ ಈ ಸಾಹಸ ಮಾಡುತ್ತಿದ್ದರೋ ಇಲ್ಲವೋ ಹೇಳುವುದು ಕಷ್ಟ. ಮೇನೆಯಲ್ಲಿ ಸಿಕ್ಕಿಬಿದ್ದಿರುವ ಆ ದುರ್ದೈವಿಗಳಿಗೆ ಆಪತ್ಕಾಲದಲ್ಲಿ ನೆರವು ನೀಡಬೇಕೆನ್ನುವ ಆಕಾಂಕ್ಷೆಯಿಂದ ಗೋವಿಂದರಾಜನು ತನ್ನ ಪ್ರಾಣದ ಮೇಲೆ ಆಸೆ ತೊರೆದು ಅವರ ರಕ್ಷಣೆಗೆ ಬಂದಿದ್ದ.

ಗೋವಿಂದರಾಜನ ಕೈಲಿದ್ದ ಕತ್ತಿ ವರಹನ ಮುಳ್ಳುಗಳನ್ನು ಭೇದಿಸಿ, ಅದನ್ನು ಕೊಲ್ಲಲು ಸಮರ್ಥನಾಗಲಿಲ್ಲ. ಈ ಪ್ರಯತ್ನದಲ್ಲಿ ಒಂದೆರಡು ಬಾರಿ ಗೋವಿಂದರಾಜನೇ ಅದರಿಂದ ಗಾಯಗೊಳ್ಳುವ ಪ್ರಸಂಗ ಬಂದಿತ್ತು. ಒಮ್ಮೆಯಂತೂ ಅದರ ಮುಳ್ಳುಗಳಿಗೆ ಅವನು ಸಿಕ್ಕಿ ತತ್ತರಿಸಿಹೋಗ

ಬೇಕಾಗಿದ್ದುದು—ದೈವವಶಾತ್ ಅವನು ತಪ್ಪಿಸಿಕೊಂಡ. ಆದರೂ ಬಲ ತೋಳಿಗೆ ಬಲವಾದ ಪೆಟ್ಟು ಬಿದ್ದು, ಗಾಯವಾಗಿತ್ತು. ಆ ವರಹನನ್ನು ಕೊಲ್ಲದ ಹೊರತು ಅವನ ಮನಸ್ಸಿಗೆ ನೆಮ್ಮದಿ ಇರಲಿಲ್ಲ. ಅದನ್ನು ಕೊಲ್ಲದ ಹೊರತು ಅವರಾರಿಗೂ ಉಳಿಗಾಲ ಇರಲಿಲ್ಲ. ಹೇಗಾದರೂ ಮಾಡಿ ಅದನ್ನು ಕೊಲ್ಲಲೇಬೇಕಾಗಿತ್ತು. ಅದನ್ನು ಹೇಗೆ ಕೊಲ್ಲುವುದೆನ್ನುವುದು ಗೋವಿಂದ ರಾಜನಿಗೆ ಕ್ಷಣಕಾಲ ತಿಳಿಯದಾಯಿತು. ದೈವದ ಮೇಲೆ ಭಾರ ಹಾಕಿ ಅವನು ಒಂದು ಉಪಾಯವನ್ನು ಮಾಡಿದನು.

ತಾನು ಮುಳ್ಳುಹಂದಿಯ ಮೇಲೆ ಏರಿ ಹೋಗಿ ಅದರೊಡನೆ ಕಾದಾಡಿ ಕೊಲ್ಲುವುದು ಕಷ್ಟಸಾಧ್ಯವೆಂದು ಬೇಟೆಯಲ್ಲಿ ನಿಷ್ಣಾತನಾಗಿದ್ದ ಅವನಿಗೆ ಚೆನ್ನಾಗಿ ಗೊತ್ತಿತ್ತು. ತಾನು ವರಹನ ಮೇಲೆ ಬೀಳುವುದಕ್ಕಿಂತ ಅದು ತನ್ನ ಮೇಲೆ ಬೀಳುವಂತೆ ಪ್ರೇರೇಪಿಸಿ, ಅದನ್ನು ಉಪಾಯಾಂತರವಾಗಿ ಉಸಿರು ಕಟ್ಟಿಸಿ ಕೊಲ್ಲಬೇಕೆಂದು ಆಲೋಚಿಸಿದ. ವಿಜಯೋನ್ಮತ್ತನಂತೆ ರಣಗರ್ಜನೆ ಮಾಡಿ ಮೇನೆಯಿಂದ ದೂರ ಸರಿದು ನಿಂತ. ಯಾವ ಆಸರೆಯೂ ಇಲ್ಲದೆ ಬಯಲಿನಲ್ಲಿ ನಿಂತ ಅವನನ್ನು ಕಂಡು ಕಣೆ ಹಂದಿಯು ಮಿಂಚಿನ ವೇಗದಲ್ಲಿ ಅವನ ಮೇಲೆ ಬಿದ್ದಿತು. ಹೀಗಾಗಬಹುದೆಂದು ಗೋವಿಂದ ರಾಜನಿಗೆ ಮೊದಲೇ ತಿಳಿದಿತ್ತೇನೋ ಅವನು ಕೂಡಲೆ ರಭಸದಿಂದ ನುಗ್ಗಿ ಬರುವ ಹಂದಿಯ ಗುರಿ ತಪ್ಪಿಸಿ, ಬಳಿಯಲ್ಲೇ ಇದ್ದ ಕವಲೊಡೆದ ಮರದ ಹಿಂದೆ ಅವಿತುಕೊಂಡ. ಛಂಗನೆ ಹಾರಿ ಬಂದು ಶತ್ರುವನ್ನು ನೆಲಕ್ಕೆ ಅಪ್ಪಳಿಸ ಬೇಕೆಂದು ಮಾಡಿದ ಹಂದಿಯ ಪ್ರಯತ್ನ ವಿಫಲವಾಯಿತು. ಅದು ಮತ್ತೆ ಚೇತರಿಸಿಕೊಂಡು ಮರಕ್ಕೆ ಒರಗಿ ನಿಂತ ಗೋವಿಂದರಾಜನನ್ನು ದುರುದುರನೆ ನೋಡಿ, ಒಮ್ಮೆ ಹೂಂಕರಿಸಿ, ಅವನ ಮೇಲೆ ಬೀಳಲು ಶಕ್ತಿಯನ್ನೆಲ್ಲ ಪ್ರಯೋಗಿಸಿ, ಪ್ರಚಂಡವೇಗದಲ್ಲಿ ಓಡಿಬಂದಿತು. ಈ ಬಾರಿ ಅದರ ಕೈಗೆ ಗೋವಿಂದರಾಜನು ಸಿಕ್ಕಿಬಿಟ್ಟಿದ್ದರೆ ಖಂಡಿತ ಅವನು ಉಳಿಯುತ್ತಿರಲಿಲ್ಲ. ದೈವವಶಾತ್ ಗೋವಿಂದರಾಜ ಸಕಾಲದಲ್ಲಿ ಹಂದಿಯ ಗುರಿಯನ್ನು ತಪ್ಪಿಸಿ ಕೊಂಡು ಮರದ ಹಿಂದೆ ಆಶ್ರಯ ಹೊಂದಿದ. ಮುಳ್ಳುಹಂದಿಯು ತಾನು ಬಂದ ರಭಸದ ವೇಗವನ್ನು ತಡೆಹಿಡಿಯಲಾರದೆ, ಮರದ ಬಳಿಯಲ್ಲೇ ಇನ್ನೂ ಗೋವಿಂದರಾಜನು ಇರುವನೆಂದು ಭ್ರಮಿಸಿ, ಮರವನ್ನು ಘಾತಿಸಿತು.

ಈ. ಹೊಡೆತಕ್ಕೆ ಬಲಶಾಲಿಯಾದ ಆ ದೊಡ್ಡ ಮರವೂ ತಲ್ಲಣಿಸಿತು. ಹಂದಿಗೆ ತಾನು ಘಾತಿಸಿದುದೊಂದು ಗೊತ್ತು. ಮುಂದೆ ಅದು ಮರಣಯಾತನೆಯನ್ನು ಅನುಭವಿಸುತ್ತಿತ್ತು.

ಮಿಂಚಿನ ವೇಗದಲ್ಲಿ ಓಡಿಬಂದ ಆ ಹಂದಿಯ ಮುಳ್ಳುಗಳಿಗೆ ಗೋವಿಂದರಾಜನ ದೇಹ ಬಲಿಯಾಗದೆ ಮರದ ಕಾಂಡ ಬಲಿಯಾಗಿತ್ತು. ಇದರ ಪರಿಣಾಮವಾಗಿ ಹಸಿಯಾಗಿದ್ದ ಮರದ ಕಾಂಡದಲ್ಲಿ, ಹಂದಿಯ ನಿಮಿರಿ ನಿಂತಿದ್ದ ಮುಳ್ಳುಗಳು ಬಲವಾಗಿ ನೆಟ್ಟುಕೊಂಡು ಕ್ಷಣಕಾಲ ಹಂದಿಯನ್ನು ಸೆರೆಹಿಡಿಯಿತು. ಇದೇ ಸಮಯ ಸಾಧಿಸಿ, ಗೋವಿಂದರಾಜನು ಹಂದಿಯ ಮೂತಿಯನ್ನು ಬಲವಾಗಿ ಹಿಡಿದು ಅದು ಉಸಿರಾಡದಂತೆ ತಿರುಚಿ, ಅದಕ್ಕೆ ಮರಣಯಾತನೆಯನ್ನು ಉಂಟುಮಾಡಿದ. ಉಸಿರಾಡಲು ಬಹಳ ಹೆಣಗಾಡಿ, ಗೋವಿಂದರಾಜನ ವಜ್ರ ಮುಷ್ಟಿಯಿಂದ ಬಿಡುಗಡೆ ಹೊಂದಲಾರದೆ, ಅದು ಕೆಲಕಾಲದಲ್ಲೇ ಬಸವಳಿದು ನೆಲದ ಮೇಲೆ ಉರುಳಿತು. ಆಗ ಗೋವಿಂದರಾಜನು ತನ್ನ ಖಡ್ಗದಿಂದ ನಿಮಿಷ ಮಾತ್ರದಲ್ಲಿ ಹಂದಿಯ ತಲೆಯನ್ನು ಛೇದಿಸಿ, ಅದನ್ನು ಯಮಲೋಕಕ್ಕೆ ಅಟ್ಟಿದನು. ಇಲ್ಲಿಗೆ ಆ ಮುಳ್ಳು ಹಂದಿಯ ಕಥೆ ಪೂರೈಸಿತು.

ತಿಪ್ಪಾಜಿ, ಕುಸುಮಾಜಿ ಇವರು ಮೇನೆಯ ಕಿಟಕಿಗಳಿಂದ ಈ ಹಂದಿಯ ಬೇಟೆಯನ್ನು ಬೆರಗಾಗಿ ನೋಡುತ್ತಿದ್ದರು. ಗೋವಿಂದರಾಜನು ಅಸಹಾಯನಾಗಿದ್ದರೂ ಒಬ್ಬನೇ ನಿಂತು ಹಂದಿಯನ್ನು ಸಂಹರಿಸಿ, ತಮಗೆ ಒದಗಿದ್ದ ಗಂಡಾಂತರದಿಂದ ಪಾರುಮಾಡಿದುದಕ್ಕೆ ಅವನ ಬಗ್ಗೆ ಅವರಿಗೆ ಕೃತಜ್ಞತೆಯುಂಟಾಗಿತ್ತು. ಅವನ ಧೈರ್ಯ, ಸಾಹಸಗಳನ್ನು ಕಂಡು ಅವನ ವಿಷಯದಲ್ಲಿ ಅಭಿಮಾನ ಉಂಟಾಯಿತು. ತಮ್ಮ ಕೃತಜ್ಞತೆ, ಗೌರವಗಳನ್ನು ಹೇಗೆ ವ್ಯಕ್ತಪಡಿಸಬೇಕೆಂಬುದು ಅವರಿಗೆ ತಿಳಿಯದಾಗಿತ್ತು. ತಮ್ಮ ಪ್ರಾಣವನ್ನು ಉಳಿಸಿದ ಆ ಆಪದ್ಬಂಧುವಿಗೆ ಹೇಗೆ ಸನ್ಮಾನ ಮಾಡಬೇಕೆನ್ನುವುದು ತಿಳಿಯದಾಗಿತ್ತು. ಅವರು ಗೋವಿಂದರಾಜನನ್ನೇ ತನ್ಮಯರಾಗಿ ನೋಡುತ್ತ ಪ್ರತಿಮೆಗಳಂತೆ ಕುಳಿತುಬಿಟ್ಟಿದ್ದರು. ಅವರನ್ನು ಅವರ ಭಾವಸಮಾಧಿಯಿಂದ ಎಚ್ಚರಿಸಿದವನೆಂದರೆ ಗೋವಿಂದರಾಜ.

ಗೋವಿಂದರಾಜನು ಹೋರಾಟದಲ್ಲಿ ಗಾಯಗೊಂಡು, ಮೈಯಲ್ಲೆಲ್ಲ

ರಕ್ತ ಹರಿಯುತ್ತಿದ್ದರೂ, ಅದರ ಕಡೆ ಗಮನ ಕೊಡದೆ, ಹಂದಿಯ ಉಪಟಳಕ್ಕೆ ಹೆದರಿ, ಮೇನೆಯಲ್ಲಿ ಅಡಗಿಕೊಂಡು ಕುಳಿತಿದ್ದವರ ನೆರವಿಗೆ ಓಡಿಬಂದಿದ್ದ. ಅವನಿಗೆ ಮೇನೆಯಲ್ಲಿ ಇರುವವರು ಯಾರು? ಎಲ್ಲಿಯವರು ಎಂಬುದು ತಿಳಿದಿರಲಿಲ್ಲ. ಮೇನೆಯನ್ನು ನೋಡಿ ಯಾರೋ ಶ್ರೀಮಂತರು ಇರಬೇಕೆಂದು ಊಹಿಸಿದ. ಹಂದಿಯು ಮರಣ ಹೊಂದಿದ ಮೇಲೆ ಒಳಗೆ ಇದ್ದವರು ನಿರ್ಭಯವಾಗಿ ಹೊರಗೆ ಬರಬಹುದೆಂದು ಭಾವಿಸಿದ್ದ. ಆದರೆ ಕಣೆ ಹಂದಿ ಸತ್ತು ಬಿದ್ದಿದ್ದರೂ ಮೇನೆಯಿಂದ ಯಾರೂ ಹೊರಗೆ ಬರದೆ ಇರುವುದನ್ನು ಕಂಡು ಮೇನೆಯಲ್ಲಿ ಇರುವವರು ಬದುಕಿರುವರೋ ಹೆದರಿಕೆ ಯಿಂದ ಸತ್ತಿರುವರೋ ಎಂಬುದನ್ನು ತಿಳಿಯಲು ಗೋವಿಂದರಾಜನೇ ಮೇನೆಯ ಬಾಗಿಲನ್ನು ಎಳೆದು ತೆಗೆದ. ಒಳಗಡೆ ಇದ್ದ ತಿಪ್ಪಾಜಿ, ಹಾಗೂ ಕುಸುಮಾಜಿ ಯರನ್ನು ಕಂಡೊಡನೆ ಅವನಿಗೆ ಒಂದು ಬಗೆಯ ಸಂತೋಷ, ಸಂಕೋಚಗಳು ಏಕಕಾಲದಲ್ಲಿ ಉಂಟಾದುವು. ಅವರು ಬದುಕಿರುವುದಕ್ಕೆ ಸಂತೋಷ; ಅವರು ಅಪರಿಚಿತರಾದ ಹೆಂಗಸರೆಂದು ಸಂಕೋಚ. ತಿಪ್ಪಾಜಿ ಕುಸುಮೆಯರು ಮುಗುಳುನಗುತ್ತ ಗೋವಿಂದರಾಜನನ್ನು ಸ್ವಾಗತಿಸಿ, ತಮ್ಮನ್ನು ಉಳಿಸಿದ ದೇವದೂತನೆಂದು ಹೊಗಳಿದರು.

ಗೋವಿಂದರಾಜನು ಶಿಷ್ಟಾಚಾರದಂತೆ ಅವರಿಗೆ ವಂದಿಸಿ, ಅವರ ಕ್ಷೇಮಸಮಾಚಾರ ವಿಚಾರಿಸಿದ. ಅವರು ಯಾರು, ಎಲ್ಲಿಗೆ ಹೊರಟಿದ್ದಾರೆ. ಈ ನಿರ್ಜನ ಅರಣ್ಯದಲ್ಲಿ ಅವರು ಈ ಮುಳ್ಳುಹಂದಿಯ ಕೈಗೆ ಸಿಕ್ಕಿಕೊಂಡ ಬಗೆ – ಎಲ್ಲವನ್ನೂ ಪ್ರಾರ್ಥಿಸಿದ.

ಈ ವೇಳೆಗೆ ತಿಪ್ಪಾಜಿ ಕುಸುಮಾಜಿಯರಿಗೆ ತಾವು ಯಾವ ಅಪಾಯ ವಿಲ್ಲದೆ ಸುರಕ್ಷಿತರಾಗಿರುವೆವೆಂಬ ಅರಿವುಂಟಾಗಿತ್ತು. ಅವರ ಕಣ್ಣೆದುರಿನಲ್ಲಿಯೇ ಕೆಲವು ನಿಮಿಷಗಳ ಹಿಂದೆ ಸಾವಿನ ದೂತನಂತೆ ಕಾಣಿಸಿಕೊಂಡಿದ್ದ ದೈತ್ಯಾಕಾರದ ವರಹನು ಸತ್ತು ಬಿದ್ದಿದ್ದ. ವರಹನಿಗೆ ಹೆದರಿ ಓಡಿಹೋಗಿದ್ದ ಸೇವಕರು ಮತ್ತೆ ಬಂದು ಸುತ್ತಲೂ ನಿಂತಿದ್ದರು. ಇವೆಲ್ಲಕ್ಕೂ ಮಿಗಿಲಾಗಿ ವೀರಾಗ್ರಣಿಯಾದ ಗೋವಿಂದರಾಜನು ಅಭಯದ ಮೂರ್ತಿಯಾಗಿ ಅವರ ಎದುರಿಗೆ ನಿಂತಿದ್ದನು. ಅವರಿಗೆ ಇನ್ನೆಲ್ಲಿಯ ಭಯ ಭೀತಿ? ಅವರು ತಮ್ಮ ಎಲ್ಲ ಕಥೆಯನ್ನೂ ಸವಿಸ್ತಾರವಾಗಿ ತಿಳಿಸಿದರು.

# ೨

ತಿಪ್ಪಾಜಿ ಶ್ರೀರಂಗಪಟ್ಟಣದ ಮಹಾಮಾಂಡಲೇಶ್ವರನಾದ ಕುಮಾರ ವೀರಯ್ಯನ ಆಸ್ಥಾನದ ರಾಜನರ್ತಕಿ. ಇವಳು ವಿಜಯನಗರದ ಸಾಮ್ರಾಟ ಶ್ರೀ ಕೃಷ್ಣದೇವರಾಯನ ಆಹ್ವಾನವನ್ನು ಅಂಗೀಕರಿಸಿ ರಾಜಧಾನಿಯಲ್ಲಿ ನಡೆಯಲಿದ್ದ ನಾಟ್ಯೋತ್ಸವದಲ್ಲಿ ಭಾಗವಹಿಸಲು ತನ್ನ ಮಗಳು ಕುಸುಮಾಜಿ ಯೊಡನೆ ಹೊರಟಿದ್ದಳು. ಸ್ವಯಂ ಕೃಷ್ಣದೇವರಾಯನೇ ಕುಸುಮಾಜಿಯ ನಾಟ್ಯಕಲಾ ಖ್ಯಾತಿಯನ್ನು ಕೇಳಿ ಈ ಬಾರಿ ರಾಜಧಾನಿಯಲ್ಲಿ ನಡೆಯಲಿದ್ದ ವಿಶೇಷ ಉತ್ಸವದಲ್ಲಿ ಭಾಗವಹಿಸಲು ಬರಬೇಕೆಂದು ಆಮಂತ್ರಣವನ್ನು ಇತ್ತಿದ್ದನು. ಸಾಮ್ರಾಟನ ಆಮಂತ್ರಣವನ್ನು ತಿರಸ್ಕರಿಸುವ ಧೈರ್ಯ ತಾಯಿ ಮಕ್ಕಳಿಗೆ ಇರಲಿಲ್ಲ. ಮೇಲಾಗಿ ರಾಜಧಾನಿಗೆ ಹೋಗುವುದರಲ್ಲಿ ಅವರಿಗೆ ವೈಯುಕ್ತಿಕ ಆನಂದವಿತ್ತು. ತಿಪ್ಪಾಜಿಯು ಬಾಲ್ಯದ ಗೆಳತಿಯೂ, ಸಹಾಧ್ಯಾಯಿಯೂ ಆಗಿದ್ದ ಮಹಾರಾಣಿ ತಿರುಮಲಾದೇವಿಯನ್ನು ಬಹು ಕಾಲದ ಮೇಲೆ ನೋಡುವ ಅವಕಾಶ ಇದರಿಂದ ಉಂಟಾಗಿತ್ತು. ಮಾಂಡಲೇಶ್ವರರಾದ ಕುಮಾರವೀರಯ್ಯನ ಮಗಳು ತಿರುಮಲಾದೇವಿಯೂ, ತಿಪ್ಪಾಜಿಯೂ ಬಾಲ್ಯದ ಗೆಳತಿಯರು. ಇಬ್ಬರೂ ಸಮವಯಸ್ಕರೆಂದೇ ಹೇಳಬೇಕು. ತಿರುಮಲಾದೇವಿಗೆ ಬಾಲ್ಯದಿಂದಲೂ ಸಂಗೀತ, ನಾಟ್ಯಕಲೆ ಗಳೆಂದರೆ ತುಂಬ ಪ್ರೀತಿ. ಅವಳಲ್ಲಿ ಹುದುಗಿದ್ದ ಕಲಾಸಕ್ತಿಯನ್ನು ಕಂಡು ಕೊಂಡು ಮಹಾಮಾಂಡಲೇಶ್ವರರು ಅವಳಿಗೆ ಯೋಗ್ಯರಾದ ಗುರುಗಳನ್ನೇ ದೊರಕಿಸಿ ಕೊಟ್ಟಿದ್ದರು. ನಾಟ್ಯಾಕಲಾವಿಶಾರದ, ನಾಟ್ಯಚಕ್ರವರ್ತಿ ಎಂದು ಪ್ರಸಿದ್ಧಿ ಪಡೆದಿದ್ದ ಭರತಾಚಾರ್ಯರೇ ತಿರುಮಲಾದೇವಿಯ ಅದೃಷ್ಟದಿಂದ ಅವಳಿಗೆ ಗುರುಗಳಾಗಿ ದೊರೆತಿದ್ದರು. ಅವರು ಶಿಷ್ಯಳ ಕಲಾಭಿರುಚಿಯನ್ನು ಕಂಡುಕೊಂಡು ಅವಳಿಗೆ ಉಚಿತವಾದ ಪ್ರೋತ್ಸಾಹ ಕೊಟ್ಟು ತಿರುಮಲಾ ದೇವಿಯನ್ನು ನಾಟ್ಯಕಲಾನಿಪುಣೆಯನ್ನಾಗಿ ಮಾಡಿದ್ದರು. ಆಗ ತಿರುಮಲಾ ದೇವಿಯೊಡನೆ ಸಹಾಧ್ಯಾಯಿಯಾಗಿ ನಾಟ್ಯವನ್ನು ಕಲಿಯುವ ಅಪೂರ್ವ ಸುಯೋಗ ತಿಪ್ಪಾಜಿಗೆ ದೊರೆಕಿತ್ತು.

ತಿಪ್ಪಾಜಿಯೂ ಭರತಾಚಾರ್ಯರ ಆಸೆಯನ್ನು ನಿರಾಶೆಗೊಳಿಸಲಿಲ್ಲ. ಅವಳು ತಿರುಮಲಾದೇವಿಗಿಂತ ಹೆಚ್ಚಿನ ಪ್ರತಿಭೆಯುಳ್ಳವಳು. ವಂಶಪಾರಂಪರ್ಯವಾಗಿ ಬೆಳೆದುಬಂದಿದ್ದ ಕಲಾಚೇತನ ಅವಳದು. ಅವಳಿಗೆ ಯೋಗ್ಯ ಗುರು ದೊರೆತದ್ದು, ಚಿನ್ನವನ್ನು ಅಪರಂಜಿಯನ್ನಾಗಿ ಮಾಡಿದಂತೆ ಆಗಿತ್ತು. ಅವಳ ಕಲಾಕೌಶಲ್ಯವನ್ನು ಕಂಡು ಬೆರಗಾದ ಪ್ರಭುಗಳು ಅವಳನ್ನು ತಮ್ಮ ಆಸ್ಥಾನ ನರ್ತಕಿಯನ್ನಾಗಿ ಮಾಡಿಕೊಂಡು ಗೌರವಿಸಿದ್ದರು.

ತಿರುಮಲಾದೇವಿಯು ಪ್ರಾಪ್ತವಯಸ್ಕಳಾದ ಮೇಲೆ ಅವಳನ್ನು ವಿಜಯನಗರದ ಸಾಮ್ರಾಟ ಶ್ರೀ ಕೃಷ್ಣದೇವರಾಯನಿಗೆ ಕೊಟ್ಟು ಮದುವೆ ಮಾಡಲಾಯಿತು. ಮಾಂಡಲೇಶ್ವರನ ಪುತ್ರಿ ಸಾಮ್ರಾಟನ ಪಟ್ಟ ಮಹಿಷಿಯಾದಳು. ಅವಳು ತನ್ನ ಗುರುಗಳಾದ ಭರತಾಚಾರ್ಯರನ್ನು ತನ್ನ ಸಂಗಡಲೇ ರಾಜಧಾನಿಗೆ ಕರೆದೊಯ್ದಿದ್ದಳು.

ತಿರುಮಲಾದೇವಿ ಮಹಾರಾಣಿಯಾಗಿದ್ದರೂ, ತನ್ನ ವೈಭವದಲ್ಲಿ ಬಡಗೆಳತಿಯಾದ ತಿಪ್ಪಾಜಿಯನ್ನು ಮರೆತಿರಲಿಲ್ಲ. ಅವಳು ಮರೆಯದಂತೆ ಭರತಾಚಾರ್ಯರು ಆಗಾಗ್ಗೆ ತಿಪ್ಪಾಜಿಯ ನೆನಪನ್ನು ಕೊಡುತ್ತಿದ್ದರು. ಭರತಾಚಾರ್ಯರು ಹುಟ್ಟುಕಲಾವಿದರು. ಮೇಲಾಗಿ ಕಲಾಭಿಮಾನಿಗಳು. ಅವರಿಗೆ ತಿಪ್ಪಾಜಿಯ ಕಲಾಪ್ರೌಢಿಮೆಯು ತುಂಬ ಮೆಚ್ಚಿಗೆಯಾಗಿತ್ತು. ಅದನ್ನು ಮೀರಿಸುವ ಪ್ರೌಢಿಮೆ, ಕಲಾಸಿದ್ಧಿ ಅವಳ ಮಗಳು ಕುಸುಮಾಜಿಯದು ಎಂದು ತಿಳಿದಮೇಲೆ ಕುಸುಮಾಜಿಯ ಕಲೆಯನ್ನು ನೋಡಲು ಅವರು ಬಹಳ ಕಾಲದಿಂದ ಉತ್ಸುಕರಾಗಿದ್ದರು.

ಸ್ವತಃ ತಿಪ್ಪಾಜಿಯೇ ನಿಂತುಕೊಂಡು ಕುಸುಮಾಜಿಗೆ ಭರತನಾಟ್ಯವನ್ನು ಕಲಿಸಿಕೊಟ್ಟಿದ್ದಳು. ಅಲ್ಲದೆ ಆಸ್ಥಾನದ ಉತ್ತಮೋತ್ತಮ ಕಲಾವಿದರಿಂದ ಅವಳಿಗೆ ಸಾಹಿತ್ಯ, ಸಂಗೀತ, ನೃತ್ಯಗಳಲ್ಲಿ ನಿಷ್ಣಾತ ಪಾಂಡಿತ್ಯವನ್ನು ದೊರಕಿಸಿ ಕೊಟ್ಟಿದ್ದಳು. ಹುಟ್ಟುತ್ತಲೇ ಕಲಾವಿದೆಯ ಮಗಳಾಗಿ ಹುಟ್ಟಿದ ಕುಸುಮಾಜಿ, ಬೆಳೆಯುತ್ತ ಬಂದಂತೆಲ್ಲ ಸಾಹಿತ್ಯ, ಸಂಗೀತ, ನೃತ್ಯಗಳಲ್ಲಿ ಅಪೂರ್ವ ಸಿದ್ಧಿಯನ್ನು ಪಡೆದಳು. ಈ ವಯಸ್ಸಿಗಾಗಲೇ ಅವಳ ಕೀರ್ತಿ ದೇಶವಿದೇಶಗಳಲ್ಲಿ ಹರಡಿ, ಎಲ್ಲ ದೇಶದ ರಾಜಾಧಿರಾಜರು ಅವಳನ್ನು ತಮ್ಮ ಆಸ್ಥಾನಗಳಿಗೆ ಬರಲು ಅನೇಕ ಆಮಂತ್ರಣಗಳನ್ನು ಕೊಟ್ಟಿದ್ದರು. ಸ್ವಭಾವತಃ

ಸಂಕೋಚಪ್ರವೃತ್ತಿಯವಳಾದ ಕುಸುಮಾಜಿ ತನ್ನ ಹುಟ್ಟಿದೂರಾದ ಶ್ರೀರಂಗ ಪಟ್ಟಣವನ್ನು ಬಿಟ್ಟು ಬೇರೆಲ್ಲಿಗೂ ಹೋಗಲು ಇಷ್ಟಪಟ್ಟಿರಲಿಲ್ಲ. ಅವಳ ಕೀರ್ತಿಯನ್ನು ಕೇಳಿದ್ದ ಭರತಾಚಾರ್ಯರೂ, ತಿರುಮಲಾದೇವಿಯೂ ಅವಳನ್ನು ಒಮ್ಮೆ ತಮ್ಮ ರಾಜಧಾನಿಗೆ ಬರಮಾಡಿಕೊಳ್ಳಬೇಕೆಂದು ತುಂಬಾ ಆಸೆಯುಳ್ಳವರಾಗಿದ್ದರು. ತಿಪ್ಪಾಜಿಗೆ ಮಗಳೊಡನೆ ರಾಜಧಾನಿಗೆ ಬರಲು ಪತ್ರಗಳ ಮೇಲೆ ಪತ್ರಗಳನ್ನು ಬರೆಯುತ್ತಿದ್ದರು. ಹೀಗಿದ್ದರೂ ಒಮ್ಮೆಯಾದರೂ ತಿಪ್ಪಾಜಿಗೆ ರಾಜಧಾನಿ ವಿದ್ಯಾನಗರಕ್ಕೆ ಹೋಗಿ ಬರುವ ಅವಕಾಶ ಬಂದಿರಲಿಲ್ಲ.

ಈ ಬಾರಿ ಅವರೆಲ್ಲರ ಆಶಯ ನೆರವೇರಿತ್ತು. ತಾಯಿ ಮಕ್ಕಳಿಬ್ಬರೂ ಸಾಮ್ರಾಟರ ಆಮಂತ್ರಣವನ್ನು ಅಂಗೀಕರಿಸಿದ್ದರು. ಈ ಬಾರಿ ಆಮಂತ್ರಣವನ್ನು ಅಂಗೀಕರಿಸುವುದರಲ್ಲಿ ಒಂದು ವಿಶೇಷ ಕಾರಣವಿತ್ತು.

ಕೃಷ್ಣದೇವರಾಯನು ಈ ಬಾರಿ ಸಾಮ್ರಾಜ್ಯದ ಮೂಲೆಮೂಲೆಗಳಿಂದ ಕಲಾವಿದರ ಒಂದು ಪರಿಷತ್ತನ್ನು ಕೂಡಿಸಿದ್ದನು. ಕೃಷ್ಣದೇವರಾಯನು ಕೆಲಕಾಲದ ಹಿಂದೆ, ಶತ್ರುಗಳ ವಿದ್ರೋಹಕ್ಕೆ ಬಲಿಯಾಗಿ, ಪ್ರಾಣಾಪಾಯದ ಗಂಡಾಂತರದಲ್ಲಿ ಸಿಕ್ಕಿಬಿದ್ದಿದ್ದನು. ಪಂಪಾಪತಿಯ ದಯೆಯಿಂದ, ರಾಯನು ಆ ಗಂಡಾಂತರದಿಂದ ಹೇಗೋ ಪಾರಾಗಿದ್ದನು. ಇದು ರಾಯನಿಗೆ ಎರಡನೆಯ ಜನ್ಮವೆಂದರೂ ಸರಿ. ಇದನ್ನು ಉಚಿತ ರೀತಿಯಲ್ಲಿ ಆಚರಿಸಲು, ಸಾಮ್ರಾಜ್ಯಾದ್ಯಂತ ದಾನ ಧರ್ಮಗಳೂ, 'ದೇವ'ತಾರ್ಚನೆಗಳೂ, ಯಜ್ಞಯಾಗಗಳೂ, ಹವನ ಹೋಮಗಳೂ ಯಥೇಚ್ಛವಾಗಿ ನಡೆದುವು. ಸಾಮ್ರಾಜ್ಯದ ಮೂಲೆಮೂಲೆಗಳಿಂದ ಬಂದ ಕಲಾವಿದರು ಭಗವದಾರಾಧನೆಗೆಂದು ರಾಜಧಾನಿಯಲ್ಲಿ ಒಟ್ಟುಗೂಡಿದ್ದರು. ಪ್ರತಿದಿನವೂ ವಿಜಯ ವಿಠಲಸ್ವಾಮಿ ದೇವಾಲಯ, ಗೋಪಾಲಕೃಷ್ಣ ದೇವಾಲಯಗಳಲ್ಲಿ ನೃತ್ಯ, ಸಂಗೀತ, ಭಗವನ್ನಾಮ ಸಂಕೀರ್ತನೆ, ನಾಟಕಗಳು ನಡೆಯಲು ಏರ್ಪಾಡಾಗಿತ್ತು. ಈ ರಸದೂಟವನ್ನು ಸವಿಯಲು ದೂರ ದೇಶಗಳಿಂದ ಕಲಾಭಿಮಾನಿಗಳೂ, ರಸಿಕರೂ ರಾಜಧಾನಿಯಲ್ಲಿ ಬಂದು ನೆರೆದಿದ್ದರು. ವಿಜಯ ವಿಠಲ ದೇವಾಲಯದಲ್ಲಿ ನೃತ್ಯಪ್ರದರ್ಶನಕ್ಕೆ ಅವಕಾಶ ಸಿಕ್ಕುವುದೆಂದರೇ ಕಲಾವಿದನಿಗೆ ಅದೊಂದು ಅಪೂರ್ವ ರೀತಿಯ ಸನ್ಮಾನ, ಅಂತಹ ಅಪೂರ್ವ ಸುಯೋಗ ಕುಸುಮಾಜಿಯ

ಪಾಲಿಗೆ ದೊರೆತಿತ್ತು. ಇದುವರೆಗೂ ಮಾಂಡಲೀಕರ ಆಸ್ಥಾನಕ್ಕೆ ಮಾತ್ರ ಮೀಸಲಾಗಿದ್ದ ಅವಳ ನೃತ್ಯ ದೇಶವಿದೇಶಗಳಿಂದ ಬಂದಿದ್ದ ಕಲಾಭಿಮಾನಿಗಳ ಸಮ್ಮುಖದಲ್ಲಿ ನಡೆಯುವ ಅಪೂರ್ವ ಸದವಕಾಶ ದೊರೆತಿತ್ತು. ಈ ಸದವಕಾಶವನ್ನು ವ್ಯರ್ಥಗೊಳಿಸಬಾರದೆಂದೇ ತಿಪ್ಪಾಜಿಯು ಮಗಳೊಡನೆ ಕಲಾ ಪರಿಷತ್ತಿನಲ್ಲಿ ಭಾಗವಹಿಸಲು ಬಂದಿದ್ದಳು. ತಿಪ್ಪಾಜಿಗೆ ರಾಜಧಾನಿಗೆ ಹೊರಟು ಬರಲು ಮತ್ತೊಂದು ಬಲವತ್ತರ ಆಕರ್ಷಣೆಯೆಂದರೆ ಬಹಳ ಕಾಲದ ಮೇಲೆ ಮಹಾರಾಣಿ ತಿರುಮಲಾದೇವಿಗೆ ಪುತ್ರೋತ್ಸವವಾಗಿತ್ತು. ಪ್ರಥಮಗರ್ಭದಲ್ಲಿ ಹುಟ್ಟಿದ್ದ ತಿರುಮಾಲಾಂಬೆಯಾದ ಮೇಲೆ ಅನೇಕ ವರ್ಷಗಳ ವರೆಗೆ ಅವರಿಗೆ ಪುತ್ರಸಂತಾನವಾಗಿರಲಿಲ್ಲ. ಕೆಲವು ತಿಂಗಳ ಹಿಂದೆ ಯಷ್ಟೇ ತಿಪ್ಪಾಜಿಗೆ ಪ್ರಿಯವಾದ ವಾರ್ತೆ, ಮಹಾರಾಣಿಯವರಿಗೆ ಗಂಡು ಮಗುವಾದ ಸಂಗತಿ ತಿಳಿದುಬಂದಿತ್ತು. ಮಹಾರಾಣಿಯನ್ನೂ, ಮುಂದೆ ಚಕ್ರೇಶ್ವರನಾಗಲಿರುವ ಆ ಮಗುವನ್ನೂ ನೋಡಿಬರಲು ತಿಪ್ಪಾಜಿಗೆ ಆಸೆ ಯಾಗಿತ್ತು. ಈ ಮಾತೃಸಹಜ ಆಸೆಯನ್ನು ಹತ್ತಿಕ್ಕಲಾರದೇ ತಿಪ್ಪಾಜಿಯು ಮಗಳೊಡನೆ ವಿದ್ಯಾನಗರಕ್ಕೆ ಹೊರಟಿದ್ದಳು. ದಾರಿಯಲ್ಲಿ, ಆ ದಿನದ ಪ್ರಯಾಣದಿಂದ ವಿಶ್ರಮಿಸಿಕೊಳ್ಳೋಣವೆಂದು ತಂಗಿದಾಗ ಅವರು ಆಕಸ್ಮಿಕ ವಾಗಿ ಗಂಡಾಂತರದಲ್ಲಿ ಸಿಕ್ಕಿಬಿದ್ದಿದ್ದರು. ಆದರೆ ಅವರ ಪುಣ್ಯವಿಶೇಷ ದಿಂದೆಂಬಂತೆ, ಗೋವಿಂದರಾಜನು ಅದೇ ಮಾರ್ಗದಲ್ಲಿ ಬಂದುದರಿಂದ ಅವರು ಆ ವರಹನ ದವಡೆಯಿಂದ ಪಾರಾಗಿದ್ದರು.

ಗೋವಿಂದರಾಜನೂ ಸ್ವಲ್ಪದರಲ್ಲೇ ತನ್ನ ಸಂಗತಿಯನ್ನೂ ಹೇಳಿದನು. ತನ್ನನ್ನು ಕೃಷ್ಣದೇವರಾಯನು ಗೋವೆಯನ್ನು ಮುತ್ತಲೆಂದು ಹೊರಟಿದ್ದ ಅಸದ್‌ಖಾನನ ಮೇಲೆ ಕಳುಹಿಸಿದ್ದನೆಂದೂ, ಗೋವೆಯ ಬಳಿಯಲ್ಲಿ ತಮ್ಮಿಬ್ಬರಿಗೂ ಭಾರಿ ಕದನ ನಡೆಯಿತೆಂದೂ, ಕದನದಲ್ಲಿ ಅಸದ್‌ಖಾನನ ಸೈನ್ಯ ನಿರ್ಮೂಲವಾಗಿ ಅವನು ಸೋತು ಓಡಿಹೋದನೆಂದೂ, ಅವರನ್ನು ಬೆನ್ನಟ್ಟಿಕೊಂಡು ಹೋಗಿ ಅವನ ತಲೆಯನ್ನು ಕತ್ತರಿಸಿ ತಂದು, ಈಗ ಪ್ರಭು ಗಳಿಗೆ ಅದನ್ನು ಅರ್ಪಿಸಲು ತ್ವರೆಯಿಂದ ರಾಜಧಾನಿಗೆ ಹೊರಟಿರುವು ದಾಗಿಯೂ ತಿಳಿಸಿದನು. ಅವನು ಎಂತಹ ವೀರನೆಂಬುದರ ಬಗ್ಗೆ ಅವರಿಗೆ ಬೇರೆ ನಿದರ್ಶನ ಬೇಕಿರಲಿಲ್ಲ. ಅವರ ಕಣ್ಣೆದುರಿನಲ್ಲಿಯೇ ದೊಡ್ಡ ಮುಳ್ಳು

ಹಂದಿಯನ್ನು ಕೊಂದಿದ್ದ, ಅವನ ಸಿಂಹಪರಾಕ್ರಮವನ್ನು ನೆನೆದು ಅವರು ಅವನೊಬ್ಬನು ಮಹಾಪುರುಷನೆಂದು ಭಾವಿಸಿದ್ದರು. ಹೌದು. ಸಿಂಹದ ಹೊಟ್ಟೆಯಲ್ಲಿ ಸಿಂಹದ ಮರಿಯೇ ಹುಟ್ಟಿತ್ತು! ಗೋವಿಂದರಾಜನು ಅತುಲ ಪರಾಕ್ರಮಿಯೂ, ರಾಜಕಾರಣ ಪಟುವೂ ಆಗಿದ್ದ ತಿಮ್ಮರಸನಿಗೆ ತಕ್ಕ ಮಗನೇ ಆಗಿದ್ದ.

ತಿಪ್ಪಾಜಿ ಗೋವಿಂದರಾಜನನ್ನು ಬಾಯಿ ತುಂಬಾ ಹೊಗಳಿ ಅವನ ಪರಾಕ್ರಮವನ್ನುಕೊಂಡಾಡಿದಳು. ಕುಸುಮಾಜಿಗೂ ಗೋವಿಂದರಾಜನಿಗೆ ತನ್ನ ಕೃತಜ್ಞತೆಗಳನ್ನು ಅರ್ಪಿಸಲು ಆಸೆಯಾಗಿತ್ತು. ಆದರೆ ಅದನ್ನು ಮಾತಿನಲ್ಲಿ ಆಡಿ ತೋರಿಸಲು ಏನೋ ಒಂದು ಬಗೆಯ ಸಂಕೋಚವಾಗುತ್ತಿತ್ತು. ಅವಳು ಹೇಳಬೇಕಾಗಿದ್ದುದನ್ನು ಅವಳ ಕಣ್ಣುಗಳೇ ಹೇಳುತ್ತಿದ್ದುವು. ಅವಳ ಸ್ನಿಗ್ಧ ಸೌಂದರ್ಯವನ್ನೂ, ಕಣ್ಣಿನ ಭಾವವನ್ನೂ ನೋಡಿ ಗೋವಿಂದರಾಜ ತನ್ನಲ್ಲಿ ಮುಗುಳ್ನಗೆ ನಕ್ಕು ಸುಮ್ಮನಾದ. ಇದರಿಂದ ಕುಸುಮೆಯ ಹೃದಯ ಸಂತೋಷದಿಂದ ಬಿರಿಯಿತು.

ತಿಪ್ಪಾಜಿ ತಮ್ಮ ಪ್ರಾಣವನ್ನು ಉಳಿಸಿದ ಗೋವಿಂದರಾಜನ ಯೋಗ ಕ್ಷೇಮಕ್ಕೆ ಮೊದಲು ಗಮನ ಕೊಟ್ಟಳು. ಅವನ ದೇಹದ ಮೂರು ನಾಲ್ಕು ಕಡೆ ಹಂದಿಯ ಮುಳ್ಳುಗಳಿಂದ ಗಾಯವಾಗಿತ್ತು. ಅದರಿಂದ ರಕ್ತದ ಧಾರೆ ಹರಿಯುತ್ತಿತ್ತು. ಅದನ್ನು ಕಂಡು, ತಿಪ್ಪಾಜಿಯ ಕರುಳು ಚುರುಕ್ ಎಂದಿತ್ತು. ಅವಳು ಗೋವಿಂದರಾಜನ ಗಾಯಗಳನ್ನು ತೊಳೆದು ಯಾವುದೋ ಗಿಡ ಮೂಲಿಕೆಗಳನ್ನು ಹಾಕಿ ಕಟ್ಟಿದಳು. ಅನಂತರ, ವಿಶ್ರಮಿಸಿಕೊಳ್ಳಲು ಬಲವಂತ ಪಡಿಸಿದಳು.

ಈ ವೇಳೆಗೆ ಗೋವಿಂದರಾಜನ ಅನುಚರರು ತಮ್ಮ ಒಡೆಯನನ್ನು ಹುಡುಕಿಕೊಂಡು ಅಲ್ಲಿಗೇ ಬಂದರು. ಅವರಿಗೆ ನಡೆದ ಎಲ್ಲ ಸಂಗತಿಯನ್ನೂ ಕೇಳಿ ತಮ್ಮ ಒಡೆಯನ ಬಗ್ಗೆ ಅಭಿಮಾನವೇ ಉಂಟಾಯಿತು.

ತಿಪ್ಪಾಜಿಗೆ ಗೋವಿಂದರಾಜನ ಜೊತೆ ಸಿಕ್ಕಿದುದರಿಂದ ತುಂಬಾ ಸಂತೋಷವಾಗಿತ್ತು. ಇನ್ನು ರಾಜಧಾನಿಯನ್ನು ತಲುಪಲು ಯಾವ ಕಷ್ಟವೂ ಕಾಣಲಿಲ್ಲ. ಅವನ ಸಂಗಡವಿದ್ದುದರಿಂದ ದಾರಿಯುದ್ದಕ್ಕೂ ಅವರಿಗೆ ರಾಜ ಕುಟುಂಬದವರಿಗೆ ಸಲ್ಲುವ ಮರ್ಯಾದೆ ಪುರಸ್ಕಾರಗಳು ದೊರೆಯುತ್ತಿದ್ದುವು.

ಹೀಗೆ ಕೆಲವು ದಿನಗಳು ಪ್ರಯಾಣಮಾಡಿದ ಮೇಲೆ ಅವರ ಪ್ರಯಾಣಕ್ಕೆ ಕೊನೆ ಬಂದಿತು; ರಾಜಧಾನಿಯಾದ ವಿದ್ಯಾನಗರದ ಹೊರವಲಯಕ್ಕೆ ಅವರು ಬಂದು ಸೇರಿದರು. ಗೋವಿಂದರಾಜನು ತಾನು ಅಗತ್ಯವಾಗಿ ಗಮನ ಕೊಡಬೇಕಾದ ಅನೇಕ ತ್ವರಿತದ ಕೆಲಸಗಳು ಇದ್ದುದರಿಂದ ಅವರಿಬ್ಬರನ್ನೂ ಬೀಳ್ಕೊಂಡು ಹೊರಟುಹೋದ. ಹೊರಟಾಗ ಅವನಿಗೆ ಕಾಲೇ ಬರಲಿಲ್ಲ. ಅವರಿಬ್ಬರನ್ನು ಅಗಲುವುದೆಂದರೆ ತನಗೆ ಪ್ರಿಯರಾದವರನ್ನು ಅಗಲುವಂತೆ ಆಗಿತ್ತು. ಅವರು ಜೊತೆಯಲ್ಲಿದ್ದ ಅಲ್ಪಕಾಲದಲ್ಲೇ ಅವನಿಗೆ ಆತ್ಮೀಯರೇ ಆಗಿಬಿಟ್ಟಿದ್ದರು. ಇಬ್ಬರಿಗೂ ಒಬ್ಬರನ್ನು ಒಬ್ಬರು ಅಗಲಬೇಕಾದರೆ ಹೇಗೆ ಹೇಗೋ ಆಯಿತು. ಕುಸುಮಾಜಿಗೆ ಗೋವಿಂದರಾಜನು ಹೊರಟಾಗ ಅವನು ತನ್ನ ಹೃದಯವನ್ನೂ ಕದ್ದುಕೊಂಡು ಹೋಗುತ್ತಿರುವಂತೆ ಅನಿಸಿತು. ಅವನ ಪ್ರಿಯವಾದ ಮಾತು, ಸಾನ್ನಿಧ್ಯಗಳಿಂದ ಅವಳ ಹೃದಯದಲ್ಲಿ ಅವಳಿಗೆ ತಿಳಿಯದಂತೆ ಗೋವಿಂದರಾಜನ ಮೂರ್ತಿಯ ಪ್ರತಿಷ್ಠಾಪನೆಯಾಗಿತ್ತು. ಅವಳಿಗೆ ತಿಳಿಯದಂತೆ ಅವನಲ್ಲೂ ಮೊದಲು ಅಭಿಮಾನ ಉಂಟಾಗಿತ್ತು. ಅದು ಕ್ರಮ ಕ್ರಮವಾಗಿ ಪ್ರೀತಿಯಾಗಿ ಅನುರಾಗವಾಗಿ ಮಾರ್ಪಟ್ಟಿತ್ತು. ಅವಳಿಗೆ ಇಷ್ಟು ಬೇಗನೆ ಗೋವಿಂದರಾಜನನ್ನು ಕಳುಹಿಸಿಕೊಡಲು ಇಷ್ಟವಿರಲಿಲ್ಲ. ಆದರೆ ನಿರ್ವಾಹವಿಲ್ಲದೆ ಅವನನ್ನು ಕಳುಹಿಸಿಕೊಡಬೇಕಾಗಿತ್ತು. ಈ ಅಗಲಿಕೆ – ವಿರಹವ್ಯಥೆ ಏಕೆಂದು ಅವಳಿಗೆ ಅಚ್ಚರಿಯಾಯಿತು. ಅವಳು ತನ್ನ ಮನಸ್ಸಿನ ಭಾವನೆಗಳನ್ನು ಆಡಿ ತೋರಿಸದಿದ್ದರೂ ಅಂತಃಕರಣ ಪೂರ್ಣವಾದ ಆ ನೋಟ, ಸಜಲವಾದ ಆ ನಯನಗಳು ಅವಳ ಮನಸ್ಸಿನ ಮೂಕ ವೇದನೆಯನ್ನು ಹೊರಗೆ ಹಾಕಿತ್ತು. ಅವಳ ಕರುಣಾಜನಕ ಮುಖವನ್ನು ನೋಡಿ, ಗೋವಿಂದರಾಜನು ಅವರನ್ನು ಮತ್ತೊಮ್ಮೆ ನೋಡುವುದಾಗಿ ಆಶ್ವಾಸವಿತ್ತು ಹೊರಟುಹೋದನು. ಅವನು ಹೊರಟುಹೋದೊಡನೆ ಕುಸುಮಾಜಿಗೆ ಏಕೋ ಅಳು ಬಂದುಬಿಟ್ಟಿತು. ಅವಳ ತಾಯಿ ಇರುವುದನ್ನು ಗಮನಿಸದೆ ಗಳಗಳನೆ ಅತ್ತುಬಿಟ್ಟಳು.

"ಥೂ ಹುಚ್ಚು ಹುಡುಗಿ. ಇದಕ್ಕೆಲ್ಲಾ ಹೀಗೆ ಅಳುತ್ತಾರೇನೇ ?" ಎಂದು ಮಗಳ ತಲೆಯನ್ನು ಪ್ರೀತಿಯಿಂದ ನೇವರಿಸಿದಳು ತಿಪ್ಪಾಜಿ.

ತಿಪ್ಪಾಜಿ, ಕುಸುಮಾಜಿಯರು ನಗರ ಪ್ರವೇಶಿಸುತ್ತಿರುವಂತೆಯೇ ಭರತಾಚಾರ್ಯರು ತಿರುಮಲಾದೇವಿಯ ಕೋರಿಕೆಯಂತೆ ತಿಪ್ಪಾಜಿಯನ್ನು ಇದಿರುಗೊಂಡರು. ಅವರು ಇಳಿದುಕೊಳ್ಳಲು ರಾಜೋಚಿತವಾದ ಭವ್ಯ ಭವನಕ್ಕೆ ಅವರನ್ನು ಕರೆದೊಯ್ದರು.

ತಿಪ್ಪಾಜಿಗೆ ತಮ್ಮ ಗುರುಗಳೇ ತಮ್ಮನ್ನು ಇದಿರುಗೊಳ್ಳಲು ಬರುವ್ರೆಂದು ಖಂಡಿತ ತಿಳಿದಿರಲಿಲ್ಲ. ತನ್ನ ವಿಷಯದಲ್ಲಿ ತಿರುಮಲಾದೇವಿ ಇನ್ನೂ ಮೊದಲಿನ ಅಭಿಮಾನ, ಪ್ರೀತಿ ವಿಶ್ವಾಸಗಳನ್ನು ಇಟ್ಟಿರುವಳೆಂಬುದಕ್ಕೆ ಗುರುಗಳನ್ನು ಸ್ವಾಗತಿಸಲು ಕಳುಹಿಸಿದುದೇ ಸಾಕ್ಷಿ. ತಿಪ್ಪಾಜಿ ಗುರುಗಳನ್ನು ನೋಡುತ್ತಲೇ ಅವರಿಗೆ ದೀರ್ಘದಂಡ ನಮಸ್ಕಾರಮಾಡಿ ಅವರ ಕುಶಲ ಪ್ರಶ್ನೆ ಮಾಡಿದಳು. ಅನಂತರ, ತನ್ನ ಮಗಳು ಕುಸುಮಾಜಿಯನ್ನು ಪರಿಚಯ ಮಾಡಿಸಿಕೊಟ್ಟಳು.

ಕುಸುಮಾಜಿಯೂ ಭರತಾಚಾರ್ಯರಿಗೆ ವಂದಿಸಿದಳು. ಆ ತಾಯಿ ಮಕ್ಕಳನ್ನು ಕ್ಷಣಕಾಲ ತದೇಕ ದೃಷ್ಟಿಯಿಂದ ನೋಡುತ್ತಿದ್ದ ಭರತಾಚಾರ್ಯರು ಹೇಳಿದರು.

" ತಿಪ್ಪಾಜಿ, ಇಷ್ಟು ದೊಡ್ಡ ಮಗಳು ನಿನಗಿರುವಳೆಂದು ನಾನು ಕನಸು ಮನಸಿನಲ್ಲೂ ತಿಳಿದಿರಲಿಲ್ಲ. ಅಂದು ನೀನು ನನ್ನನ್ನು ನೋಡಿದಾಗ ಕುಸುಮಾಜಿಯಂತೆಯೇ ಇದ್ದೆ. ಈಗ ನಿಮ್ಮಿಬ್ಬರಲ್ಲಿ ಯಾರು ತಾಯಿ, ಯಾರು ಮಗಳು ಎಂಬುದನ್ನು ಹೇಳುವುದೇ ಕಷ್ಟವಾಗಿದೆ." ಎಂದು ನಗೆಯಾಡಿದರು.

" ಎಲ್ಲವೂ ಗುರುಗಳ ಆಶೀರ್ವಾದ " ಎಂದಳು ತಿಪ್ಪಾಜಿ.

" ಮಹಾರಾಣಿಯವರು ಹೇಗಿದ್ದಾರೆ ? ಅವರ ಕುಮಾರರು ಹೇಗೆ ಇದ್ದಾರೆ ?" ಎಂದು ತಿಪ್ಪಾಜಿ ತಿರುಮಲಾದೇವಿ ಹಾಗೂ ಅವರ ಮಗನನ್ನು ವಿಚಾರಿಸಿಕೊಂಡಳು.

ಭರತಾಚಾರ್ಯರು ತಿಪ್ಪಾಜಿ, ಕುಸುಮೆಯರಿಗೆ ಎಲ್ಲ ಅನುಕೂಲ ಕಲ್ಪಿಸಿ, ಅಲ್ಲಿ ಯಾವುದಕ್ಕೂ ಕೊರತೆಯಾಗದೆಂದೂ, ಏನಾದರೂ ಆಗಬೇಕಿದ್ದರೆ ವಸತಿ ಗೃಹದ ಅಧಿಕಾರಿಗೆ ತಿಳಿಸಿದರೆ ಎಲ್ಲ ಸೌಕರ್ಯಗಳೂ ಒದಗಿಸಲ್ಪಡುವುದೆಂದೂ ತಿಳಿಸಿ, ಇತರ ಕೆಲಸಗಳನ್ನು ನೆನೆದುಕೊಂಡು ಅವರು ಹೊರಟು ಹೋದರು.

ತಿಪ್ಪಾಜಿ, ಕುಸುಮೆಯರು ದೀರ್ಘಕಾಲದ ಪ್ರಯಾಣದಿಂದ ದಣಿದಿದ್ದರು. ಅವರು ಸ್ನಾನಮಜ್ಜನಗಳನ್ನು ತೀರಿಸಿಕೊಂಡು, ಫಲಹಾರ ಮಾಡಿ ಕೆಲಕಾಲ ವಿಶ್ರಾಂತಿಯನ್ನು ಅನುಭವಿಸಿದರು.

ಹೀಗೆ ಒಂದೆರಡು ದಿನ ಅವರು ಯಾವ ಕೆಲಸವನ್ನೂ ಮಾಡದೆ ಆಯಾಸವನ್ನು ಪರಿಹರಿಸಿಕೊಳ್ಳುವುದರಲ್ಲಿಯೇ ಕಳೆದರು.

ತಿಪ್ಪಾಜಿ ತನ್ನ ಬಾಲ್ಯದ ಗೆಳತಿ ಮಹಾರಾಣಿ ತಿರುಮುಲಾದೇವಿಯನ್ನು ಎಂದು ನೋಡೇನು ಎಂದು ಒಂದೇ ಸಮನೆ ಚಡಪಡಿಸುತ್ತಿದ್ದಳು. ತನ್ನ ಬಾಲ್ಯದ ಗೆಳತಿಯನ್ನು ಕಂಡು ಅವಳ ಯೋಗಕ್ಷೇಮವನ್ನು ವಿಚಾರಿಸುವ ಉತ್ಸುಕತೆ ಅವಳಿಗೆ. ಇದನ್ನರಿತ ಭರತಾಚಾರ್ಯರು ತಾಯಿ ಮಕ್ಕಳಿಬ್ಬರನ್ನೂ ಮಹಾರಾಣಿಯ ಭೇಟಿಗೆ ಕರೆದೊಯ್ಯಲು ಅರಮನೆಗೆ ಬಂದರು. ಅದೇ ದಿನ ಗೋವಿಂದರಾಜನೂ ತಿಪ್ಪಾಜಿ, ಕುಸುಮಾಜಿಯರ ಯೋಗಕ್ಷೇಮ ವಿಚಾರಿಸಿಕೊಂಡು ಹೋಗಲು ಅಲ್ಲಿಗೆ ಬಂದಿದ್ದನು.

ಗೋವಿಂದರಾಜನು ರಾಜಧಾನಿಗೆ ಬಂದ ದಿನವೇ, ನಾಗಲಾಪುರದ ಚಿನ್ನಾದೇವಿಯ ಅಂತಃಪುರದಲ್ಲಿ ವಿಶ್ರಾಂತಿಯನ್ನು ಅನುಭವಿಸುತ್ತಿದ್ದ ಕೃಷ್ಣದೇವರಾಯನಿಗೆ ಗೋವೆಯ ವಿಜಯವಾರ್ತೆಯನ್ನು ತಿಳಿಸಿ ಅಸದ್ ಖಾನನ ಶಿರವನ್ನು ವಿಜಯದ ಕಾಣಿಕೆಯಾಗಿ ಅರ್ಪಿಸಿದ. ಮಹಾಪ್ರಭುಗಳು ಗೋವಿಂದರಾಜನ ಶೌರ್ಯವನ್ನು ಕೊಂಡಾಡಿ, ಅವನಿಗೆ ವೀರೋಚಿತ ಮರ್ಯಾದೆ ಮಾಡಿ ಅವನನ್ನು ವಿಜಯನಗರದ ಪ್ರಧಾನ ದುರ್ಗಾಧಿಪತಿಯನ್ನಾಗಿ ನೇಮಿಸಿ ಗೌರವಿಸಿದ್ದರು. ಈ ಸಂತೋಷ ವಾರ್ತೆಯನ್ನು ತಿಪ್ಪಾಜಿ, ಕುಸುಮೆಯರಿಗೆ ತಿಳಿಸಿ, ತನ್ನ ಸಂತೋಷವನ್ನು ಅವರೊಂದಿಗೆ ಹಂಚಿಕೊಳ್ಳಲು ಇಂದು ಇಲ್ಲಿಗೆ ಬಂದಿದ್ದ.

ಈ ಎಲ್ಲ ವಾರ್ತೆಯನ್ನು ಅವನ ಬಾಯಿಂದಲೇ ಕೇಳಿ ತಿಪ್ಪಾಜಿ ಕುಸುಮೆಯರ ಹೃದಯ ಸಂತೋಷದಿಂದ ಹಿಗ್ಗಿತು. ಅವರ ಭಾಗಕ್ಕೆ ಗೋವಿಂದರಾಜನು ಆತ್ಮೀಯ ವ್ಯಕ್ತಿಯಾಗಿಬಿಟ್ಟಿದ್ದರಿಂದ, ಅವನ ಸಂತೋಷ ಇವರ ಸಂತೋಷವಾಗಿತ್ತು. ಅವರು ತಮ್ಮನ್ನು ರಾಣಿಯ ಭೇಟಿಗೆಂದು ಕರೆದೊಯ್ಯಲು ಬಂದಿದ್ದ ಭರತಾಚಾರ್ಯರಿಗೆ ಗೋವಿಂದರಾಜನ ಪರಿಚಯ ಮಾಡಿಕೊಟ್ಟರು. ತಮ್ಮನ್ನು ವರಹನ ದವಡೆಯಿಂದ ಪಾರುಮಾಡಿದ ದೇವ

ದೂತನೆಂದು ಅವನನ್ನು ಕೊಂಡಾಡಿದರು. ಅವರ ಎಲ್ಲಾ ಹೊಗಳಿಕೆಗೆ ಗೋವಿಂದರಾಜನಿಗೆ ನಾಚಿಕೆಯಾದರೂ ಭರತಾಚಾರ್ಯರಿಗೆ ಗೋವಿ ರಾಜನ ವಿಷಯದಲ್ಲಿ ಅಭಿಮಾನ, ಗೌರವಗಳು ಉಂಟಾದುವು. ಅ ಗೋವಿಂದರಾಜನು ಬೇರಾರೂ, ಅಲ್ಲ – ತಿಮ್ಮರಸನ ಮಗನೆಂದು ತಿ ಮೇಲಂತೂ ಅವನ ಬಗ್ಗೆ ಇನ್ನಷ್ಟು ಆದರ, ಅಭಿಮಾನಗಳು ಮೂಡಿದ ತಿಮ್ಮರಸನ ಕೀರ್ತಿಯನ್ನು ಉಳಿಸಬಲ್ಲ–ಯೋಗ್ಯ ಪುತ್ರ ಅವನೆಂದು ಅ ಹೊಗಳಿದರು. ಈ ಎಲ್ಲಾ ಮಾತುಕತೆಗಳಲ್ಲಿ ಭರತಾಚಾರ್ಯರು ತ ಬಂದ ಕೆಲಸವನ್ನೇ ಮರೆತರು. ಮಾತಿನ ಮಧ್ಯೆ ಅತ್ತ ಸುಳಿದ ಕುಸ ಯನ್ನು ನೋಡಿ ಗೋವಿಂದರಾಜನು ಪ್ರಶ್ನಿಸಿದ.

" ಗುರುಗಳೇ, ನಮ್ಮ ಕುಸುಮಾಜಿಯವರ ನೃತ್ಯವೆಂದು ನಡೆ ಲಿದೆ ?"

ಈ ಮಾತು ಕೇಳಿ ತಿಪ್ಪಾಜಿ ಮಗಳೊಡನೆ ಬಂದು ಅವರೊ ಮಾತಿಗೆ ಸೇರಿದಳು.

"ನಿನ್ನೆ ಪರಿಷತ್ತಿನ ಕಾರ್ಯಭಾರಿಗಳು ಬಂದಿದ್ದರು. ನೃತ್ಯ ಏರ್ಪಡಿಸೋಣವೆಂದು ಪ್ರಶ್ನಿಸಿದರು. ಯಾವುದನ್ನೂ ಗುರುಗಳನ್ನು ವಿಚಾ ನಿರ್ಧರಿಸುವುದಾಗಿ ಹೇಳಿ ಅವರನ್ನು ಕಳುಹಿಸಿಕೊಟ್ಟೆ " ಎಂದಳು ತಿಪ್ಪಾ

"ಹೌದು ಕಾರ್ಯಬಾರಿಗಳು ನಿಮ್ಮನ್ನು ಕಂಡಮೇಲೆ ನನ್ನ ಬಳಿ ಬಂದಿದ್ದರು. ಅವರಿಗೆ–ಅವರಿಗೇನು? – ಎಲ್ಲರಿಗೂ ನಿಮ್ಮ ಕುಸುಮಾಜಿ ನೃತ್ಯವನ್ನು ನೋಡಬೇಕೆಂದು ಉತ್ಸುಕತೆ. ನಾನು, ದೀರ್ಘಕಾಲದ ಪ್ರಯ ದಿಂದ ನೀವು ಬಳಲಿರುವುದಾಗಿಯೂ ಕೆಲಕಾಲ ವಿಶ್ರಾಂತಿ ತೆಗೆದುಕೊ ನಂತರ ನೃತ್ಯವನ್ನು ಏರ್ಪಡಿಸಬಹುದೆಂದೂ ಹೇಳಿದೆ. ಕಾರ್ಯಭಾರಿಗಳು ಬರಲಿರುವ ಚೈತ್ರ ಶುದ್ಧ ಪೂರ್ಣಿಮೆಯ ದಿನ ವಿಜಯ ವಿಠಲ ಸ್ವಾಮಿ ಸೇವೆಗೆ ಅನುಕೂಲ ಮಾಡಿಕೊಡಬೇಕೆಂದು ಆಗ್ರಹ ಪಡಿಸಿದರು. ನಿ ಪರ ನಾನು ಒಪ್ಪಿಕೊಂಡುಬಿಟ್ಟಿದ್ದೇನೆ. ನಿಮಗೆ ತೊಂದರೆಯಿಲ್ಲ ತಾನೇ ಎಂದರು.

" ಗುರುಗಳು ಹೇಗೆ ಹೇಳಿದರೆ ಹಾಗೆ !" ಎಂದಳು ತಿಪ್ಪಾಜಿ.

" ಹೌದು ನಾನು ನಿನಗೆ ಗುರುಗಳು, ನಿಜ. ನಿನ್ನ ಮಗಳಿಗೆ ನ

ಗುರುಗಳಲ್ಲವಲ್ಲ ? ಅವಳು ತನ್ನ ವಿಷಯದಲ್ಲಿ ನಾನು ಸ್ವೇಚ್ಛೆವಹಿಸಿದೆನೆಂದು ತಿಳಿಯಬಾರದಷ್ಟೆ? ”

“ ನಮ್ಮ ಕುಸುಮಾಜಿಯ ವಿಷಯದಲ್ಲಿ ಗುರುಗಳು ಹಾಗೆಲ್ಲ ಅನ್ಯಥಾ ತಿಳಿಯಬಾರದು. ತಾವು ನನಗೆ ಹೇಗೆ ಗುರುಗಳೋ ಅವಳಿಗೂ ಹಾಗೇ ಗುರುಗಳಾಗಿದ್ದೀರಿ. ತಮ್ಮಿಂದ ಕಲಿತ ನಾಲ್ಕು ಅಕ್ಷರಗಳನ್ನು ನಾನು ಅವಳಿಗೆ ದಾನಮಾಡಿದ್ದೇನೆ. ಆದುದರಿಂದ ಅವಳೂ ನಿಮ್ಮ ಶಿಷ್ಯವರ್ಗಕ್ಕೆ ಸೇರಿದವಳೇ ಹೊರತು ಬೇರೆಯಲ್ಲ—” ಎಂದಳು ತಿಪ್ಪಾಜಿ.

“ ತಮ್ಮ ವಿಶ್ವಾಸಕ್ಕೆ ವಂದನೆಗಳು. ನಿಮ್ಮ ಈ ಗುರು ಭಕ್ತಿಯೇ ನಿಮ್ಮ ಎಲ್ಲ ಉತ್ಕರ್ಷದ ದಾರಿ !” ಎಂದು ಅವರೂ ಹೊಗಳಿದರು.

“ ಆದರೆ ನನ್ನದೊಂದು ಷರತ್ತು ಇದೆ ಗುರುಗಳೇ ” ಎಂದಳು ಮೆಲ್ಲನೆ ಕುಸುಮಾಜಿ.

“ ಏನು ಮಗು ?”

“ ಅಂದು ತಾವೇ ನನ್ನ ನೃತ್ಯದ ನಿರ್ದೇಶಕರಾಗಿ ನಿಲ್ಲಬೇಕು.”

“ ಮಗು, ನಿನ್ನ ದಿವ್ಯಕಲೆಯನ್ನು ಪ್ರೇಕ್ಷಕನಂತೆ ಕುಳಿತು ನೋಡಲು ನಾನು ತುಂಬಾ ಆಸೆಯಿಂದ ಇದ್ದೇನೆ. ನಿನ್ನ ಅಭಿನಯದಲ್ಲೂ – ನೃತ್ಯ ಪ್ರದರ್ಶನದಲ್ಲೂ ನನಗೆ ಪಾಲು ಬೇಡಮ್ಮ ” ಎಂದರು ಗುರುಗಳು.

“ ಹಾಗಾದರೆ ನಾನು ಅಭಿನಯಿಸುವುದೇ ಇಲ್ಲ !” ಎಂದಳು ಹುಸಿ ಕೋಪ ನಟಿಸುತ್ತ ಕುಸುಮೆ.

“ ಓಹೋ ಚೆನ್ನಾಯಿತು ಮಗು ! ನಾನು ನಿನ್ನನ್ನು ಏನೋ ಎಂದು ತಿಳಿದಿದ್ದೆ. ನೀನೂ ನಿನ್ನ ತಾಯಿಯಂತೆಯೇ ಹಟಗಾರ್ತಿ ಎಂದು ಗೊತ್ತಿರಲಿಲ್ಲ. ನಿನ್ನನ್ನು ನೋಡಿದರೆ ಹಠದಲ್ಲೂ ನಿನ್ನ ತಾಯಿಯನ್ನು ಮೀರಿಸಿಬಿಡುವಂತೆ ಕಾಣುತ್ತದೆ !” ಎಂದರು ಗುರುಗಳು.

ಭರತಾಚಾರ್ಯರಿಗೆ ಆ ಕ್ಷಣಕ್ಕೆ ತಿಪ್ಪಾಜಿಯ ಹಠಮಾರಿತನದ ಅನೇಕ ಪ್ರಸಂಗಗಳು ನೆನಪಾದುವು. ಅವಳು ಹುಡುಗಿಯಾಗಿರುವಾಗಲೇ ನೃತ್ಯ ಕಲೆಯ ಅನೇಕ ಸೂಕ್ಷ್ಮ ವಿಷಯಗಳನ್ನು ಕಲಿಸಲು ಗುರುಗಳನ್ನು ಪೀಡಿಸುತ್ತಿದ್ದಳು. ಕೇವಲ ಪರಿಣತಕಲಾವಿದರಿಗೆ ಮಾತ್ರ ವೇದ್ಯವಾಗುತ್ತಿದ್ದ ಅನೇಕ ಸಂಗತಿಗಳನ್ನು ಕಲಿಯಲು ಹಠಮಾಡಿ ಗುರುಗಳನ್ನು ಬೇಸರಗೊಳಿ

ಸುತ್ತಿದ್ದಳು. ಹೊಸ ವಿಷಯವನ್ನು ಕಲಿಯುವುದರ ಬಗ್ಗೆ ಅವಳು ತೋರಿಸುತ್ತಿದ್ದ ಹಠ ಶ್ರದ್ಧೆ ಒಮ್ಮೊಮ್ಮೆ ಗುರುಗಳನ್ನು ಬೆರಗುಗೊಳಿಸುತ್ತಿತ್ತು. ಅವರು ಮನಸ್ಸಿಲ್ಲದ ಮನಸ್ಸಿನಿಂದ, ತಿಪ್ಪಾಜಿಯ ಆಸೆಯನ್ನು ಈಡೇರಿಸುತ್ತಿದ್ದರು. ಗುರುಗಳಿಂದ ಕಲಿತುದನ್ನು ಅವರೆದುರಿಗೇ ಪ್ರದರ್ಶಿಸಿ, ಅವರಿಂದ ಹೊಗಳಿಸಿಕೊಳ್ಳದ ಹೊರತು ತಿಪ್ಪಾಜಿ ನಿದ್ರಾಹಾರಗಳನ್ನು ಲಕ್ಷಿಸುತ್ತಿರಲಿಲ್ಲ. ಅಭ್ಯಾಸದಲ್ಲಿ ಅವಳು ಅಷ್ಟು ಉಗ್ರವಾಗಿ ಅವಳ ಸಾಧನೆ ಅಷ್ಟು ಕಠೋರವಾದುದು. ಅಂತಲೇ ಅವಳಿಗೆ ಚಿಕ್ಕವಯಸ್ಸಿನಲ್ಲೇ ನೃತ್ಯಕಲೆ ಕರತಲಾಮಲಕವಾದುದು. ಅವಳಂತಹ ಪಂಡಿತೆಯನ್ನು – ನೃತ್ಯಶಾಸ್ತ್ರವೇತ್ತೆಯನ್ನು ತಾಯಿಯಾಗಿ ಗುರುವಾಗಿ ಪಡೆದಿದ್ದ ಕುಸುಮೆ ನೃತ್ಯದಲ್ಲಿ ಸರಸ್ವತಿಗೆ ಸಾಟಿಯಾಗಿ ನಿಂತುದರಲ್ಲಿ ಅಚ್ಚರಿಯಿಲ್ಲ !

"ಅದೇನು ಕೇಳುತ್ತೀರಿ ಗುರುಗಳೇ ? ಇವಳು ಹಠದಲ್ಲಿ ತಾಯಿಯನ್ನು ಮೀರಿಸುತ್ತಾಳೆ !" ಎಂದು ತಿಪ್ಪಾಜಿಯೇ ಹೇಳಿದ ಮೇಲೆ 'ಹೌದೇನು ?' ಎನ್ನುವಂತೆ ಗೋವಿಂದರಾಜ, ಭರತಾಚಾರ್ಯರು ಕುತೂಹಲದಿಂದ ನಕ್ಕರು.

"ಹಠಮಾರಿತನ ಅವಳ ತಾಯಿಯಿಂದ ಬಂದಿರುವ ಕೆಟ್ಟ ಗುಣ. ಅವಳು ಏನು ಆಸೆ ಪಟ್ಟರೆ ಅದು ಕೂಡಲೇ ನಡೆದು ಹೋಗಬೇಕು. ಇಲ್ಲದೆ ಇದ್ದರೆ ಅದನ್ನು ಈಡೇರಿಸಿಕೊಳ್ಳದ ಹೊರತು ಅವಳು ಮನುಷ್ಯಳೇ ಅಲ್ಲ—"

ಎಂದು ತಿಪ್ಪಾಜಿ ಮಗಳ ಗುಣವಿಮರ್ಶೆ ಮಾಡಿದಳು.

"ನಾಟ್ಯ ಸರಸ್ವತಿ ಎನ್ನುವ ಬಿರುದಿಗೆ ಪಾತ್ರವಾಗಿರುವ ಕುಸುಮಾಜಿಯೇ ಹೀಗೆ ಆಗ್ರಹ ಪಡಿಸುವುದಾದರೆ ನಾನೇಕೆ ಒಲ್ಲೆಂದು ಹೇಳಬೇಕು. ಮುಖ್ಯ ಅವಳಂತಹ ಹುರುಪಿನ, ತರುಣ ಕಲಾವಿದರಿಗೆ ಹಿಮ್ಮೇಳವಾಗಿ ನನ್ನಂಥ ಮುದುಕನೇಕೆಂದು ನಾನು ಒಪ್ಪಲಿಲ್ಲ. ನಿನ್ನ ನೃತ್ಯವನ್ನು ಸನಿಯದಲ್ಲಿ ನಿಂತು ನೋಡಬೇಕೆಂದು ಆಶಿಸಿದ್ದ ನನಗೆ ನಿರ್ದೇಶನದ ಭಾರವನ್ನು ವಹಿಸಿರುವುದು ನನಗೆ ಮಾಡಿರುವ ದೊಡ್ಡ ಮರ್ಯಾದೆ ಎಂದೇ ತಿಳಿಯುತ್ತೇನೆ. ಹಾಗೇ ಆಗಲಿ ಮಗು. ನಿನ್ನಿಚ್ಛೆಯಂತೆಯೇ ನಾನು ನೃತ್ಯವನ್ನು ನಿರ್ದೇಶಿಸುತ್ತೇನೆ. ಈಗ ನಿನ್ನ ನೃತ್ಯ ಪ್ರದರ್ಶನಕ್ಕೆ ಸಮ್ಮತಿಯುಂಟು ತಾನೇ ?"

—ಎಂದರು ಹುಸಿನಗೆ ನಗುತ್ತ, ಗುರುಗಳು.

ಕುಸುಮಾಜಿಯೂ ನಗುತ್ತಾ ತಲೆಯಾಡಿಸಿದಳು.

"ಸ್ವಯಂ ನೃತ್ಯ ಕಲಾವಿಶಾರದರೂ ಆಚಾರ್ಯ ಪುರುಷರೂ ಆದ ಭರತಾಚಾರ್ಯರಿಂದಲೇ ನಾಟ್ಯ ಸರಸ್ವತಿ ಎನ್ನುವ ಬಿರುದಿಗೆ ಅರ್ಹವಾಗ ಬೇಕಾದರೆ ಕುಸುಮಾಜಿ ನಿಜವಾಗಿಯೂ ಸಿದ್ಧಕಲಾವಿದೆ ಎನ್ನುವುದರಲ್ಲಿ ಸಂಶಯವಿಲ್ಲ. ಇಂತಹ ಗಾಂಧರ್ವ ವಿದ್ಯೆಯ ಪ್ರದರ್ಶನವನ್ನು ಕಾಣುವ ಅವಕಾಶವನ್ನು ಕಲ್ಪಿಸಿಕೊಟ್ಟಿರುವುದಕ್ಕಾಗಿ ನಿಮಗೆ ಧನ್ಯವಾದಗಳು. ಈ ಅವಕಾಶವನ್ನು ಕಲ್ಪಿಸಿಕೊಟ್ಟ ಗುರುಗಳಿಗೆ ನಾವೆಷ್ಟು ಋಣಿಗಳಾಗಿದ್ದರೂ ಸಾಲದು!"

—ಎಂದು ಗೋವಿಂದರಾಜ ತನ್ನ ಮೆಚ್ಚುಗೆಯನ್ನು ಸೂಚಿಸಿದ.

"ಗುರುಗಳು ಶಿಷ್ಯವಾತ್ಸಲ್ಯ ಪ್ರೇರಿತರಾಗಿ ಹೀಗೆ ಹೊಗಳುತ್ತಿದ್ದಾರೆ, ಅವುಗಳನ್ನು ಅಷ್ಟಾಗಿ ಮನಸ್ಸಿಗೆ ಹಚ್ಚಿಕೊಳ್ಳಬಾರದು." ಎಂದಳು ನಗುತ್ತ ಕುಸುಮಾಜಿ.

ಈ ಮಾತಿನಿಂದ ಗುರುಗಳಿಗೂ ಸಂತೋಷವಾಯಿತು. ಕುಸುಮಾಜಿಯಲ್ಲಿ ವಿದ್ಯೆಯ ಜೊತೆಗೆ ವಿನಯವೂ ಸೇರಿಕೊಂಡಿದೆ ಎಂದು ಅವರು ಮನದಲ್ಲೇ ಹರ್ಷಿಸಿದರು.

ಈ ವೇಳೆಗೆ ಹೊರಗೆ ಮೇನೆಯನ್ನು ಸಿದ್ಧಗೊಳಿಸಿ ನಿಂತ ಕಂಚುಕೀಯನು ಒಳಗೆ ಬಂದು, ಮೇನೆ ಸಿದ್ಧವಾಗಿರುವ ಸಂಗತಿಯನ್ನು ಗುರುಗಳಿಗೆ ಅರಿಕೆ ಮಾಡಿದನು. ಮಾತಿನ ಮಧ್ಯೆ ತಮ್ಮ ಕೆಲಸವನ್ನು ಮರೆತ ಗುರುಗಳು ತಟಕ್ಕನೆ ತಾವು ಬಂದ ಕೆಲಸವನ್ನು ನೆನಪಿಗೆ ತಂದುಕೊಂಡು,

"ಅಲ್ಲಿ ಅಂತಃಪುರದಲ್ಲಿ ಮಹಾರಾಣಿಯವರು ನಿಮಗಾಗಿ ಕಾದಿರುತ್ತಾರೆ. ತಡಮಾಡದೆ ಹೊರಡಲು ಸಿದ್ಧರಾಗಿ" ಎಂದು ತಿಪ್ಪಾಜಿಗೆ ಹೇಳಿದರು. ಈ ಮಾತಿನ ಅರ್ಥ ಗ್ರಹಿಸಿ, ಗೋವಿಂದರಾಜನು ಅವರನ್ನು ಮತ್ತೊಮ್ಮೆ ನೋಡುವುದಾಗಿ ಹೇಳಿ ಅಲ್ಲಿಂದ ಹೊರಟು ಹೋದನು.

# ೩

ಚೈತ್ರ ಶುದ್ಧ ಪೂರ್ಣಿಮಾ. ವಿಜಯ ವಿಠಲ ದೇವಾಲಯದಲ್ಲಿ ಇಂದು ಮಹಾಮಾಂಡಲೇಶ್ವರ ಶ್ರೀ ಕುಮಾರ ವೀರಯ್ಯನ ಆಸ್ಥಾನ ನರ್ತಕಿಯೂ ನಾಟ್ಯ ಸರಸ್ವತಿ ಬಿರುದಾಂಕಿತಳೂ ಆದ ಕುಸುಮಾಜಿಯ ನೃತ್ಯ ಏರ್ಪಟ್ಟಿದೆ. ಈ ವಿಷಯವನ್ನು ಪೂರ್ವಭಾವಿಯಾಗಿ ರಾಜಧಾನಿಯಲ್ಲೆಲ್ಲಾ ಸಾರಿದ್ದುದರಿಂದ, ನಗರದ ಕಲಾಭಿಮಾನಿಗಳೂ, ರಸಿಕರೂ, ಭಕ್ತರೂ ತಂಡೋಪತಂಡವಾಗಿ ಬಂದು ದೇವಾಲಯದ ವಿಶಾಲವಾದ ಪ್ರಾಂಗಣದಲ್ಲಿ ಸೇರಿದ್ದರು. ಕುಸುಮಾಜಿಯ ಕೀರ್ತಿಯನ್ನು ಕೇಳಿದ್ದ ಕಲಾವಿದರೆಲ್ಲ ಈ ಹೊಗಳಿಕೆಗೆ ಕುಸುಮಾಜಿ ಎಷ್ಟರ ಮಟ್ಟಿಗೆ ಬಾಧ್ಯಳೆಂದು ತಿಳಿಯುವ ಕುತೂಹಲದಿಂದ ಬಂದು ನೆರೆದಿದ್ದರು.

ದೇವಾಲಯದ ವಿಶಾಲವಾದ ಆವರಣ ಹಸಿರುವಾಣಿ ಚಪ್ಪರ, ಮಖಮಲ್ಲಿನ ಬಿಳಿಯ ತೆರೆಗಳಿಂದ ವಿವಾಹ ಮಂಟಪದಂತೆ ಅಲಂಕೃತವಾಗಿತ್ತು. ಆಸ್ಥಾನದ ಶಿಲ್ಪಿಗಳು ಆಸಕ್ತಿ ವಹಿಸಿ ಅದನ್ನು ಸ್ವರ್ಗಲೋಕದ ಸಭಾ ಭವನದಂತೆ ಕಂಗೊಳಿಸುವಂತೆ ಮಾಡಿದ್ದರು. ನೃತ್ಯವು ಸಂಜೆಯ ಸುಮಾರಿಗೆ ಆರಂಭವಾಗುವುದಿದ್ದರೂ ಮಧ್ಯಾಹ್ನದ ವೇಳೆಗಾಗಲೇ ದೇವಾಲಯದ ಪ್ರಾಂಗಣ ಜನರಿಂದ ತುಂಬಿ ಹೋಗಿತ್ತು. ಸಂಜೆಯ ವೇಳೆಗೆ ವಿಶೇಷ ಆಹ್ವಾನಿತರಾದ ರಾಜಕುಟುಂಬಕ್ಕೆ ಸೇರಿದವರೂ, ಹಿರಿಯ ಅಧಿಕಾರಿಗಳೂ, ಆಸ್ಥಾನದ ಕಲಾವಿದರೂ ಬಂದು ತಮಗೆಂದೇ ಸಿದ್ಧಪಡಿಸಿದ್ದ ಉಚಿತಾಸನಗಳಲ್ಲಿ ಮಂಡಿಸಿದರು.

ಗೊತ್ತಾಗಿದ್ದ ವೇಳೆಗೆ ಕುಸುಮಾಜಿಯ ನೃತ್ಯ ಆರಂಭವಾಯಿತು.

ಭರತಾಚಾರ್ಯರು ಕುಸುಮಾಜಿಯ ಕೋರಿಕೆಯಂತೆ ನೃತ್ಯ ನಿರ್ವಹಣೆಯ ಭಾರ ಹೊತ್ತಿದ್ದರು.

ತಿಪ್ಪಾಜಿ ಮಗಳ ನೃತ್ಯಕ್ಕೆ ಹಿಮ್ಮೇಳ ಒದಗಿಸುತ್ತ ಕುಳಿತಳು. ವೀಣೆ, ವೇಣು, ಮೃದಂಗಗಳ ಮಂಜುಳರವದಿಂದ ಸಭೆ ಎಚ್ಚರಗೊಂಡಿತು.

ಕುಸುಮಾಜಿಯ ನರ್ತನ ಆರಂಭವಾಯಿತು.

ಎಲ್ಲಕ್ಕೂ ಮೊದಲು ತಿಪ್ಪಾಜಿ ಹೇಳಿದ ನಾಂದಿಯ ಶ್ಲೋಕ ಸಭಿಕರನ್ನು ತನ್ನ ನಾದದ ಗುಂಗಿನಲ್ಲಿ ಸೆರೆಹಿಡಿಯಿತು. ಸಭಿಕರು ಅವಾಕ್ಕಾಗಿ ಕುಸುಮಾಜಿಯ ನೃತ್ಯವನ್ನು ನೋಡುತ್ತಾ ಮೈಮರೆತು ಕುಳಿತರು.

ನೃತ್ಯದ ಮೇಲೆ ನೃತ್ಯ ನಡೆಯಿತು.

ಮಣಿಪುರಿ, ತಿಲ್ಲಾಣ, ಅಲರಿಪು – ಮೊದಲಾದ ನೃತ್ಯ ಸಂಪ್ರದಾಯ ಪ್ರದರ್ಶನ ಯಶಸ್ವಿಯಾಗಿ ನೆರವೇರಿತು.

ಅಪೂರ್ವವಾದ ಮೋಹಿನಿ ಆಟ್ಟಂ ಪ್ರದರ್ಶನವಂತೂ ಸಭಿಕರನ್ನು ಹುಚ್ಚರನ್ನಾಗಿ ಮಾಡಿತು.

ಇಂದಿನ ವಿಶೇಷಕಾರ್ಯಕ್ರಮವೆಂದರೆ ಗುರುಗಳಾದ ಭರತಾಚಾರ್ಯರೇ ಕುಸುಮೆಗೆಂದು ಸಿದ್ಧಪಡಿಸಿದ್ದ ಮಹಾಕವಿ ಕಾಲಿದಾಸನ ಅಮರ ಕಾವ್ಯ ಕುಮಾರ ಸಂಭವದ ಅಭಿನಯ. ಕಷ್ಟ ಸಾಧ್ಯವಾದ ಆ ಮಹಾಕಾವ್ಯವನ್ನು ಬಹಳ ಶ್ರಮವಹಿಸಿ ನೃತ್ಯಕ್ಕೆ ಅಳವಡಿಸಿದ್ದರು. ಇದು ಹೇಗೆ ಬರುವುದೋ ಎಂದು – ಸಭಿಕರ ಮಾತಂತಿರಲಿ, ಸ್ವಯಂ ನಿಯೋಜಕರಾದ ಭರತಾಚಾರ್ಯರಿಗೇ ಕುತೂಹಲ. ಸ್ವಯಂ ನರ್ತಕಿಯಾದ ಕುಸುಮೆಗೂ ಅದರ ಬಗ್ಗೆ ಉತ್ಸುಕತೆ. ಅವಳು ವಿಜಯ ವಿಠಲ ಸ್ವಾಮಿಯನ್ನು ನೆನೆದು, ಗುರುಗಳನ್ನು ಮನದಲ್ಲಿಯೇ ವಂದಿಸಿ, ರಂಗಕ್ಕೆ ಬಂದಳು.

ಹಿಮವತ್ಪರ್ವತದ ಪ್ರಶಾಂತವಾದ ಸ್ಥಳದಲ್ಲಿ ಮಹೇಶ್ವರನು ಧ್ಯಾನ ರೂಢನಾಗಿದ್ದಾನೆ. ಸಖಿಯೊಡನೆ ವಿಹಾರಕ್ಕೆ ಬಂದ ಗಿರಿರಾಜನಂದಿನಿಯು ಪರಶಿವನ ಸೌಂದರ್ಯಕ್ಕೆ ಬೆರಗಾಗುತ್ತಾಳೆ. ಅವನಿಗೆ ತನ್ನನ್ನೇ ಅರ್ಪಿಸುತ್ತಾಳೆ. ಭುವನ ಮೋಹನ ರೂಪಿನ ಗಿರಿರಾಜ ನಂದಿನಿ ಎಲ್ಲಿ ? ಗಜ ಚರ್ಮಾಂಬರ ಧಾರಿಯೂ ಭಸಿತ ಭೂಷಣನೂ ಆದ ಆ ತಪಸ್ವಿ ಎಲ್ಲಿ ? ಆದರೂ ಗಿರಿರಾಜ ನಂದಿನಿ ಅವನನ್ನೇ ತನ್ನ ಪತಿ, ಎಂದು ಆರಿಸಿಕೊಳ್ಳುತ್ತಾಳೆ.

ಉಗ್ರ ತಪಸ್ಸಿನಲ್ಲಿ ಮೈಮರೆತಿದ್ದ ಪರಶಿವನನ್ನು ತನ್ನ ಮೋಹಕ ರೂಪಿನಿಂದ ಸೆರೆಹಿಡಿಯಲು ಪ್ರಯತ್ನಿಸಿ, ವಿಫಲಳಾಗಿ ಕಡೆಗೆ ಕುಸುಮ ಶರದ ನೆರವನ್ನು ಅಪೇಕ್ಷಿಸುತ್ತಾಳೆ – ಗಿರಿರಾಜನಂದಿನಿ.

ಕುಸುಮ ಶರನ ಹಿಂದೆ ವಸಂತೋದಯವಾಗುತ್ತದೆ. ಗಿಡ ಮರಗಳ ಹೂ ಅರಳಿ, ಕೋಕಿಲೆ ಕಾಜಾಣಗಳ ಮಂಜುಳ ಸ್ವರದಿಂದ ತುಂಬಿ ಎಲ್ಲೆಲ್ಲೂ

ಉತ್ಸಾಹ, ಸೌಂದರ್ಯ ರಸಿಕತೆಗಳೇ ಒಡೆದು ಮೂಡುವುವು. ಎತ್ತ ತಿರುಗಿ ದತ್ತ ಚೆಲ್ವಿನ ದೃಶ್ಯಗಳೇ ಕಣ್ಣಿಗೆ ಬೀಳುವುವು.

ಕುಸುಮಶರದ ಮುಂದೆ ಪರಮೇಶ್ವರನ ತಪಸ್ಸು ನಿಲ್ಲಲಿಲ್ಲ. ಒಮ್ಮೆ ತಪೋಭಂಗವಾಗಿ ಕಣ್ಣು ಅರಳಿಸಿ ನೋಡಿದ. ಎದುರಿಗೆ ತ್ರಿಭುವನ ಮೋಹಿನಿಯಾದ ಸೌಂದರ್ಯವೇ ಮೈವೆತ್ತಿ ನಿಂತ ಗಿರಿರಾಜನಂದಿನಿ, ಇಬ್ಬರ ದೃಷ್ಟಿ ಚಣಕಾಲ ಮಿಲನವಾಯಿತು. ಮರುಕ್ಷಣದಲ್ಲಿ ತಿಳಿವು ಗೊಂಡ ಪರಶಿವನು ಕೆರಳಿ ಕಣ್ಣು ಬಿಟ್ಟು ದುರುದುರನೆ ನೋಡಿದ.

ಪರಶಿವನ ಕಣ್ಣಿಗೆ ಮುಸುಕಿದ್ದ ಮೋಹದ ಪರೆ ಹರಿಯಿತು. ಎದುರಿಗೆ ಮೈವೊಡೆದು ನಿಂತ ಚೆಲುವಿನ ನಶ್ವರತೆ ಅರಿವಾಯಿತು. ತನ್ನ ತಪೋಭಂಗಕ್ಕೆ ಕಾರಣನಾದ ವಸಂತನ ಮೇಲೆ ಸಿಟ್ಟು ಬಂತು. ಕೆರಳಿ ಹಣೆಗಣ್ಣು ತೆರೆದು ನೋಡಿದ. ಆ ನೋಟಕ್ಕೆ ತತ್ತರಿಸಿ ಉರಿದುಹೋದ ಕುಸುಮ ಶರ.

ಮತ್ತೆ ಪರಶಿವನು ಧ್ಯಾನಾರೂಢನಾದನು.

ತನ್ನ ಕಣ್ಣೆದುರಿಗೇ ಮಿಥ್ಯ ಸೌಂದರ್ಯಕ್ಕೆ ಒದಗಿದ ದುಸ್ಥಿತಿಯನ್ನು ನೆನೆದು ಗಿರಿರಾಜನಂದಿನಿಗೆ ತುಂಬ ವ್ಯಥೆಯಾಯಿತು. ಅವಳ ಅಹಂಕಾರ ಅಳಿಯಿತು. ತನ್ನ ಸೌಂದರ್ಯ, ಯೌವನಗಳನ್ನು ನೆಚ್ಚಿ ಬಂದಿದ್ದ ಅವಳಿಗೆ ಈಗ ಅಪಮಾನವಾಗಿತ್ತು. ಒಂದು ಕಡೆ ಪರಾಭವ ! ಮತ್ತೊಂದು ಕಡೆ ಅಪಮಾನ! ಇವುಗಳಿಂದ ಕುಗ್ಗಿ, ಕುಸಿದು, ಸೊರಗಿದಳು ಗಿರಿರಾಜ ನಂದಿನಿ.

ಅವಳಿಗೆ ಈಗ ವಿಚಾರದ ಕಣ್ಣು ತೆರೆಯಿತು. ವ್ಯರ್ಥವಾಗುವ ಈ ನಶ್ವರ ಸೌಂದರ್ಯದಿಂದ ಪರಶಿವನನ್ನು ಒಲಿಸಿಕೊಳ್ಳಲು ಸಾಧ್ಯವಿಲ್ಲವೆಂಬ ಸತ್ಯ ಮನಗಂಡಳು. ಸಾರ್ಥಕವಾದ, ನಿತ್ಯ ಸೌಂದರ್ಯದ ಆಗರವಾದ ತಪಸ್ಸಿನ ಸಿದ್ಧಿಯಿಂದ ಪರಶಿವನನ್ನು ಒಲಿಸಿಕೊಳ್ಳಲು ನಿಶ್ಚಯಿಸಿದಳು.

ಗಿರಿರಾಜನಂದಿನಿ ತಪಸ್ಸಿಗೆ ಕುಳಿತಳು.

ಉಗ್ರ ತಪಸ್ಸಿನ ಮೂಸೆಯಲ್ಲಿ ಬೆಂದ ಗಿರಿರಾಜನಂದಿನಿ ಪಾರ್ವತಿಯಾದಳು. ಅವಳ ತಪಸ್ಸು ಪರಮೇಶ್ವರನಿಗೆ ಪ್ರಿಯವಾಯಿತು. ದೇವತೆಗಳ ಬಹುಕಾಲದ ಆಶೆ ಈಡೇರಿತು.

ಕುಮಾರ ಸಂಭವವಾಯಿತು.

ಕಾವ್ಯದ ಈ ಕಥೆಯನ್ನು ನೃತ್ಯಕ್ಕೆ ಬಹಳ ಜಾಣ್ಮೆಯಿಂದ ಅಳವಡಿಸ

ಲಾಗಿತ್ತು. ಗಿರಿರಾಜ ನಂದಿನಿಯ ಅಭಿನಯವನ್ನು ಕುಸುಮಾಜಿ ರಸಿಕರ ಕಲಾವಿದರ, ಭಕ್ತರ ಮನ ತಣಿಯುವಂತೆ ಅಭಿನಯಿಸಿ ತೋರಿಸಿದಳು. ಜೀವಂತವಾದ, ಅವಳ ಅಭಿನಯ ಭಾವ ಮುದ್ರೆಗಳು ಸಭಿಕರ ಹೃನ್ಮನಗಳಲ್ಲಿ ನೆಲೆಯಾಗಿ ನಿಂತು, ಕುಸುಮಾಜಿ ಪ್ರೇಕ್ಷಕರ ಅಭಿಮಾನವನ್ನು ಸೂರೆಗೊಂಡಳು.

ನೃತ್ಯ ಮುಗಿದ ಮೇಲೆ ವಿಜಯ ವಿಠಲ ಸ್ವಾಮಿಗೆ ಮಹಾಮಂಗಳಾರತಿ. ಅನಂತರ ಪ್ರಸಾದ ವಿನಿಯೋಗ. ಆದರೆ, ಕುಸುಮಾಜಿಗೆ ಇವುಗಳಿಗಾಗಿ ಅಲ್ಲೇ ಉಳಿಯುವಷ್ಟು ಮನಸ್ಸಿನ ವ್ಯವಧಾನ ಉಳಿಯಲಿಲ್ಲ. ಏಕೆಂದರೆ ಅವಳಿಗೆ ಇಂದು ಅದೇನು ಕಾರಣದಿಂದಲೋ ನೃತ್ಯಾರಂಭದಿಂದಲೇ ಒಂದು ಬಗೆಯ ತಲೆಯ ಸಿಡಿತ ಕಾಣಿಸಿಕೊಂಡಿತು. ಎಲ್ಲಿ ಈ ತಲೆ ನೋವಿನ ಕಾರಣದಿಂದ ಇಂದಿನ ಪ್ರದರ್ಶನ ನಿಂತು ಹೋಗುವ ಪ್ರಮೇಯ ಬರುವುದೋ ಎಂದು ತುಂಬಾ ಹೆದರಿದ್ದಳು. ಆದರೆ ದೇವರ ದಯದಿಂದ ಪ್ರದರ್ಶನವೆಲ್ಲ ಸುಸೂತ್ರವಾಗಿ ನೆರವೇರಿತ್ತು. ಆದರೆ ಈ ವೇಳೆಗೆ ನೃತ್ಯದಿಂದ ಆದ ಆಯಾಸದಿಂದ ತಲೆಯ ಸಿಡಿತ ದ್ವಿಗುಣವಾಗಿತ್ತು. ಅವಳು ತನ್ನ ಅಸ್ವಸ್ಥತೆಯನ್ನು ಗುರುಗಳಲ್ಲಿ ನಿವೇದಿಸಿಕೊಂಡು ಅವರ ಮೂಲಕ ಪರಿಷತ್ತಿನ ಕಾರ್ಯಭಾರಿಗಳ ಕ್ಷಮೆಯನ್ನು ಯಾಚಿಸಿ, ರಂಗಮಂಟಪದಿಂದ ಹೊರಟು ಹೋದಳು—ತಾಯಿಗೆ ಪ್ರಸಾದದೊಡನೆ ಮನೆಗೆ ಬರಲು ಹೇಳಿ.

ಇದರಿಂದ ಒಂದು ರೀತಿಯಲ್ಲಿ ಒಳ್ಳೆಯದೇ ಆಯಿತು. ಕುಸುಮಾಜಿಯ ಆಕಸ್ಮಿಕ ನಿರ್ಗಮನದಿಂದ ಅವಳು ಮನೆಯನ್ನು ಯಾವ ವಿಶೇಷ ಗದ್ದಲವೂ ಇಲ್ಲದೆ ಸೇರಲು ಸಾಧ್ಯವಾಯಿತು. ಕುಸುಮಾಜಿಯ ಕಲೆಯನ್ನು ಅಷ್ಟೊಂದು ಮೆಚ್ಚಿಕೊಂಡ ಪ್ರೇಕ್ಷಕ ತಂಡದ ಮುತ್ತಿಗೆಯಿಂದ ಅವಳು ತಪ್ಪಿಸಿಕೊಂಡು ಮನೆಯನ್ನು ಸೇರುವುದೇ ಬಹು ಪ್ರಯಾಸವಾಗುತ್ತಿತ್ತು. ಇನ್ನು ಪ್ರೇಕ್ಷಕರಲ್ಲಿ ಬಹುಮಂದಿ – ರಾಜಕುಟುಂಬದವರೂ – ಹಿರಿಯ ಅಧಿಕಾರಿಗಳೂ, ಗಣ್ಯ ಕಲಾವಿದರೂ ಕುಸುಮಾಜಿಗೆ ತಮ್ಮ ಮೆಚ್ಚಿಕೆಯನ್ನು ಸೂಚಿಸಿ, ಅವಳ ನಿಕಟ ಪರಿಚಯದ ಭಾಗ್ಯಕ್ಕಾಗಿ ಕಾದಿದ್ದರು. ಮಹಾ ಮಂಗಳಾರತಿಯಾಗಿ ಪ್ರಸಾದ ವಿನಿಯೋಗವಾಗುವ ತನಕ ನಿರ್ವಾಹವಿಲ್ಲದೆ ಅವರು ಬಕಪಕ್ಷಿಗಳಂತೆ ಕಾದಿದ್ದರು. ಈ ವೇಳೆಯಲ್ಲಿ ಕುಸುಮಾಜಿ ತನ್ನ ಮನೆಯನ್ನು

ಸೇರಿಕೊಂಡುಬಿಟ್ಟಿದ್ದಳು.

ಕುದುರೆಯ ಗಾಡಿಯಲ್ಲಿ ಕುಸುಮೆ ಮನೆಗೆ ಸಾಗಿರುವಾಗ ಮಧ್ಯ ದಾರಿಯಲ್ಲಿ ಅವಳಿಗೆ ಅನಿರೀಕ್ಷಿತವಾಗಿ ಗೋವಿಂದರಾಜನ ಭೇಟಿಯಾಯಿತು.

ಗೋವಿಂದರಾಜನಿಗೆ ಕುಸುಮೆ ತನ್ನ ನೃತ್ಯ ಪ್ರದರ್ಶನ ನೋಡಲು ತಪ್ಪದೆ ಬರಬೇಕೆಂದು ಆಗ್ರಹ ಪೂರ್ವಕವಾದ ಆಮಂತ್ರಣವನ್ನು ಕೊಟ್ಟಿದ್ದಳು. ಅವಳ ವಿಶ್ವಾಸದ ಆಮಂತ್ರಣವನ್ನು ತಿರಸ್ಕರಿಸುವ ಎದೆಗಾರಿಕೆ ಗೋವಿಂದರಾಜನಿಗೆ ಇರಲಿಲ್ಲ. ಅವನು ಖಂಡಿತ ಬರುವುದಾಗಿ ಮಾತು ಕೊಟ್ಟಿದ್ದನು. ಆದರೆ ನೃತ್ಯ ಪ್ರದರ್ಶನದ ವೇಳೆ ಸಮೀಪಿಸುತ್ತಿದ್ದರೂ ಗೋವಿಂದರಾಜನು ಮಾತ್ರ ಅವಳ ಕಣ್ಣಿಗೆ ಕಾಣಿಸಿಕೊಂಡಿರಲಿಲ್ಲ. ಕುಸುಮೆಗೆ ಗೋವಿಂದರಾಜನು ಬಂದಿರುವನೋ ಇಲ್ಲವೋ ಎನ್ನುವ ಅನುಮಾನ ಕಾಡಿತು. ಅವನು ಖಂಡಿತ ಬರುವುದಾಗಿ ಮಾತುಕೊಟ್ಟಿದ್ದ. ಆದರೆ ನಗರರಕ್ಷಕನಾದ ಅವನಿಗೆ ಈ ವೇಳೆಯಲ್ಲಿ ತ್ವರಿತದ ಕೆಲಸ ಯಾವುದಾದರೂ ಬಿದ್ದುಬಿಟ್ಟಿದೆಯೋ ಏನೋ! ಇಲ್ಲದೆ ಇದ್ದರೆ ಅವನು ಆಡಿದ ಮಾತಿನಂತೆ ಇಂದಿನ ಉತ್ಸವಕ್ಕೆ ಖಂಡಿತ ತಪ್ಪಿಸಿಕೊಳ್ಳುತ್ತಿರಲಿಲ್ಲ....ಬಹುಶಃ ಗೋವಿಂದರಾಜನು ವೇಳೆ ಮೀರಿ ಬರಬಹುದು. ಅಥವಾ ಸರಳ ಉಡಿಗೆಯನ್ನು ಧರಿಸಿ, ಇತರ ಪ್ರೇಕ್ಷಕರಂತೆ, ಸಭಾಂಗಣದಲ್ಲಿ ಯಾರಿಗೂ ಅಗೋಚರನಾಗಿ ಕುಳಿತಿದ್ದಾನೋ! ಏನೋ ಹಾಗೆ ಕುಳಿತಿದ್ದರೆ ಅವನನ್ನು ಪತ್ತೆಮಾಡಿ ದಂಡಿಸಬೇಕೆಂದುಕೊಂಡಳು ಕುಸುಮಾಜಿ.

ಅವಳು ರಂಗಮಂಟಪಕ್ಕೆ ಬಂದಾಗ ಕುತೂಹಲ ಪೂರ್ಣವಾಗಿ ಪ್ರತಿಷ್ಠಿತ ಗಣ್ಯವ್ಯಕ್ತಿಗಳ ಕಡೆಗೆಲ್ಲ ಒಮ್ಮೆ ಕಣ್ಣು ಹೊರಳಿಸಿ ನೋಡಿದಳು. ಅವಳ ಊಹೆ ನಿಜವಾಗಿತ್ತು. ಸಂಕೋಚದ ಸ್ವಭಾವದ ಗೋವಿಂದರಾಜನು, ಸಾಮಾನ್ಯ ಪ್ರೇಕ್ಷಕನಂತೆ ಕುಸುಮಾಜಿಯ ನೃತ್ಯವನ್ನು ಸವಿಯಬೇಕೆಂದು— ಸಾಮಾನ್ಯ ಉಡಿಗೆಯಲ್ಲಿ ಬಂದು, ಒಂದು ಮೂಲೆಯಲ್ಲಿ ಕುಳಿತಿದ್ದನು. ಅವನ ಉಡಿಗೆ ತೊಡಿಗೆಯಿಂದ ಅವನೇ ಗೋವಿಂದರಾಜನೆಂದು ಹೇಳುವುದು ಕಷ್ಟವಾಗಿತ್ತು. ಅವನು ಸಾಮಾನ್ಯ ಪೌರನಂತೆ ಶುಭ್ರವಾದ ಬಿಳಿಯ ಕಸೆಯಂಗಿಯನ್ನು ಧರಿಸಿ, ತಲೆಗೆ ಸಾಮಾನ್ಯವಾದ ಒಂದು ಸುರುವಾಲನ್ನು ಧರಿಸಿದ್ದನು. ಆದರೆ ಅವನ ಕಿವಿಯಲ್ಲಿ ಇದ್ದ ವಜ್ರದ ಹಳಕು ಮಾತ್ರ

ಶವನ ಶ್ರೀಮಂತಿಕೆಯ ಲಾಂಛನವಾಗಿತ್ತು. ಅವನು ಹೀಗೆ ವೇಷ ಮರೆಸಿ ಕೊಂಡು ಕುಳಿತಿದ್ದರೂ ಕುಸುಮೆಯ ಅರಸುವ ಕಣ್ಣು ಅವನನ್ನು ಪತ್ತೆ ಮಾಡಿಯೇಬಿಟ್ಟುವು.

ಒಂದು ಕ್ಷಣ ಇಬ್ಬರ ಕಣ್ಣುಗಳೂ ಒಂದನ್ನೊಂದು ಸಂಧಿಸಿ, ಇಬ್ಬರಲ್ಲೂ ವಿದ್ಯುತ್ ಸಂಚಾರವಾಯಿತು. ಕುಸುಮೆ ಭಾವದ ತೀವ್ರತೆಯನ್ನು ತಡೆಯ ಲಾರದೆ ಕ್ಷಣಕಾಲ ತತ್ತರಿಸಿ, ತಪ್ಪು ಹೆಜ್ಜೆ ಹಾಕುವಂತೆ ಆಯಿತು. ಮರು ಕ್ಷಣದಲ್ಲಿ ಅವಳು ಭಾವೋದ್ವೇಗವನ್ನು ಬಿಗಿ ಹಿಡಿದು ಲಕ್ಷ್ಯವನ್ನು ಇನ್ನೆ ಲ್ಲಿಗೋ ತಿರುಗಿಸಿ, ಗೋವಿಂದರಾಜನ ಕಣ್ಣುಗಳ ಕಾಟವನ್ನು ತಪ್ಪಿಸಿ ಕೊಂಡಿದ್ದಳು.

ಒಮ್ಮೆಯಂತೂ ಗೋವಿಂದರಾಜನ ದೆಸೆಯಿಂದ ತಪ್ಪು ಹೆಜ್ಜೆ ಹಾಕಿದ ಕುಸುಮೆಯನ್ನು ಗುರುಗಳು ದುರುದುರನೆ ನೋಡಿ ಟೀಕಿಸುವಂತೆ ಆಯಿತು. ಆಗ ಕುಸುಮೆಗೆ ತುಂಬಾ ನಾಚಿಕೆಯಾಗಿ, ಗೋವಿಂದರಾಜನ ಮೇಲೆ ತಾತ್ಕಾ ಲಿಕವಾಗಿ ಸಿಟ್ಟು ಬಂತು.

ಮುಂದೆ ನೃತ್ಯ ಸುಲಲಿತವಾಗಿ ನಡೆಯಿತು.

ಕುಸುಮೆ ಹಠಾತ್ತನೆ ಮನೆಗೆ ಹೊರಡಲು ನಿಶ್ಚಯಿಸಿದಾಗ, ಅವಳ ಹೃದಯ ಗೋವಿಂದರಾಜನಿಗಾಗಿ ಇನ್ನೂ ಕೆಲಕಾಲ ರಂಗಮಂಟಪದಲ್ಲೇ ಕಾಯಬೇಕೆಂದು ಪಿಸುಧ್ವನಿಯಲ್ಲಿ ಹೇಳಿತ್ತು. ಆದರೆ ಅಲ್ಲಿ ಹೆಚ್ಚು ಕಾಲ ಇದ್ದರೆ ಮತ್ತೆ ಗುರುಗಳ ಇದಿರಿನಲ್ಲಿ ಮತ್ತೆ ಯಾವ ಆಭಾಸ ನಡೆಯುವುದೋ ಎಂದು ಹೆದರಿ, ಕುಸುಮೆ ಯಾರಿಗೂ ಕಾಯದೆ ನೇರವಾಗಿ ಮನೆಗೆ ನಡೆದು ಬಿಟ್ಟಿದ್ದಳು.

ಇದನ್ನು ಗೋವಿಂದರಾಜನು ಹೇಗೆ ಪತ್ತೆಮಾಡಿಬಿಟ್ಟನೋ. ಅವನು ತನ್ನ ಕುದುರೆಯನ್ನು ಹತ್ತಿ ಕುಸುಮೆಯನ್ನು ಹಿಂಬಾಲಿಸಿದ್ದ. ಅವನು ಹಿಂಬಾಲಿಸಿದುದರ ಕಾರಣ ಕುಸುಮೆಗೆ ತನ್ನ ಮೆಚ್ಚುಗೆಯನ್ನು ಸೂಚಿಸ ಬೇಕೆಂಬುದಷ್ಟೇ ಅಲ್ಲ. ರಾತ್ರಿಯಲ್ಲಿ ಒಬ್ಬೊಂಟಿಯಾಗಿ ಹೊರಡುವ ಅವಳು ಯಾವುದಾದರೂ ತೊಂದರೆಗೆ ಸಿಕ್ಕಿಬಿದ್ದಾಳೆಂದು ಅವಳ ರಕ್ಷಣೆಗಾಗಿ ಅವಳ ಹಿಂದೆ ಹೊರಟು ಬಂದಿದ್ದ.

ಗಾಡಿಯಲ್ಲಿ ಕುಸುಮೆಯೊಬ್ಬಳೇ ಇರುವುದನ್ನು ಕಂಡು ಗೋವಿಂದ

ರಾಜನಿಗೆ ಆಶ್ಚರ್ಯವಾಗಲಿಲ್ಲ. ಆದರೂ ವಿನೋದಕ್ಕಾಗಿ ಹೇಳಿದ.

"ಈ ಅಪರಾತ್ರಿಯಲ್ಲೂ ನೀವೊಬ್ಬರೇ ಒಂಟಿಯಾಗಿ ಮಾಯಾಂಗನೆಯಂತೆ ರಂಗಮಂಟಪದಿಂದ ತಪ್ಪಿಸಿಕೊಂಡು ಮನೆ ಸೇರುವಿರೆಂದು ನಾನು ತಿಳಿದಿರಲಿಲ್ಲ."

"ನಾನು ಹೀಗೆ ಹಠಾತ್ತನೆ ಮನೆಗೆ ಹೊರಡಲು ನೀವೇ ಕಾರಣ. ನೀವು ತುಂಬಾ ಕೆಟ್ಟವರು" ಎಂದು ಹುಸಿ ಮುನಿಸಿನಿಂದ ಹೇಳಿದಳು ಕುಸುಮಾಜಿ.

"ಏಕೋ ಕಾಣೆ !"

"ನಿಮ್ಮ ಕಣ್ಣುಗಳನ್ನೇ ಕೇಳಿಕೊಳ್ಳಿ. ತಿಳಿಯುತ್ತದೆ."

"ಅವು ನಿರಪರಾಧಿಗಳು !"

"ಹೊರನೋಟಕ್ಕೆ ಅಷ್ಟೇ. ಆದರೆ ನಾನು ನರ್ತಿಸುವಾಗ ನನ್ನ ಹೃದಯದ ಭಾವನೆಗಳನ್ನು ಬಯಲು ಮಾಡುತ್ತಿದ್ದ ಕೆಟ್ಟ ಕಣ್ಣುಗಳು ಅವು. ಆ ತುಂಟ ಕಣ್ಣುಗಳಿಂದ ನಾನು ಗುರುಗಳಿಂದ ಬೈಸಿಕೊಳ್ಳುವಂತೆ ಆಯಿತು. ಈ ತುಂಟ ಕಣ್ಣುಗಳನ್ನು ಏನು ಮಾಡಬೇಕು ಗೊತ್ತೇ ?" ಎಂದಳು ಹುಸಿ ಮುನಿಸಿನ ದನಿಯಲ್ಲಿ.

"ಏನು ಮಾಡಬೇಕೆಂಬುದು – ಶಿಕ್ಷೆ ವಿಧಿಸುವ ನಿಮಗೆ ಗೊತ್ತು !"

—ಎಂದು ಮುಗುಳು ನಕ್ಕ ಗೋವಿಂದರಾಜ.

"ನೀವು ಮೊದಲು ಕುದುರೆಯನ್ನು ಬಿಟ್ಟು ಗಾಡಿಯೊಳಕ್ಕೆ ಬನ್ನಿ. ಅನಂತರ ಶಿಕ್ಷೆ ಏನೆಂದು ತಿಳಿಸುತ್ತೇನೆ."

ಈ ಮಾತಿನಿಂದ ಗೋವಿಂದರಾಜನ ಮುಖ ಚಂದಿರನಂತೆ ಆಹ್ಲಾದವನ್ನು ಸೂಸಿತು· ಅವನು ದೂರದಲ್ಲಿ ತನ್ನನ್ನೇ ಹಿಂಬಾಲಿಸಿ ಬರುತ್ತಿದ್ದ ತನ್ನ ಅನುಚರನನ್ನು ಸನ್ನೆ ಮಾಡಿ ಬಳಿಗೆ ಕರೆದು ಕುದುರೆಯನ್ನು ಅವನ ವಶಕ್ಕೆ ಕೊಟ್ಟು ಗಾಡಿಯನ್ನು ಹತ್ತಿ ಕುಳಿತ.

"ಶಿಕ್ಷೆ ವಿಧಿಸಲೇ ?" ಎಂದು ಕುಸುಮೆಯ ಭಾವೋದ್ವಿಗ್ನ ಕಣ್ಣುಗಳು ಪ್ರಶ್ನಿಸಿದುವು.

"ಆಗಬಹುದು !" ಎಂದು ಗೋವಿಂದರಾಜನ ಕಣ್ಣುಗಳು ಅದೇ ಧಾಟಿಯಲ್ಲಿ ಉತ್ತರಿಸಿದುವು.

"ಇವು ಕೆಟ್ಟಕಣ್ಣುಗಳು—ಇವುಗಳನ್ನು ನಾನು ಕಿತ್ತು ಇಟ್ಟುಕೊಳ್ಳುತ್ತೇನೆ" ಎಂದವಳೇ ಗೋವಿಂದರಾಜನನ್ನು ಬರಸೆಳೆದು ಅಪ್ಪಿಕೊಂಡು, ಅವನ ಮುಖವನ್ನೇ ಕ್ಷಣಕಾಲ ದಿಟ್ಟಿಸಿ ನೋಡಿ, ಕಣ್ಣುಗಳನ್ನು ಕಿತ್ತುಕೊಳ್ಳುವಂತೆ ಅವನ್ನು ಚುಂಬಿಸಿದಳು. ಇದರಿಂದ ಉತ್ತೇಜಿತನಾದ ಗೋವಿಂದರಾಜನು ಕುಸುಮಾಜಿಯನ್ನು ಬಾಚಿ ತಬ್ಬಿಕೊಂಡು, ಅವಳ ಹಣೆ, ಗಲ್ಲ, ಕೆನ್ನೆ ತುಟಿಗಳಿಗೆ ಪ್ರೇಮದ ಬಳುವಳಿಯನ್ನು ಯಥೇಚ್ಛವಾಗಿ ಸಲ್ಲಿಸಿದ.

ಹೊರಗಡೆ ಚಂದ್ರಿಕೆಯ ಸಾಂದ್ರತೆ ಹಾಲು ಚಲ್ಲಿದಂತೆ ಹರಡಿತ್ತು. ರಸ್ತೆಗುಂಟ ಇದ್ದ ಬೀದಿಯ ದೀಪಗಳನ್ನು ಚಂದ್ರೋದಯದ ಕಾರಣದಿಂದ ಆರಿಸಿಬಿಟ್ಟಿದ್ದರು. ಅಕ್ಕಪಕ್ಕದ ವಿಲಾಸ ಗೃಹಗಳಿಂದ, ವೀಣೆ, ಗೆಜ್ಜೆಗಳ ಮಂಜುಳರವ ಕೇಳಿಸುತ್ತಿತ್ತು. ಹೂ ತೋಟಗಳಲ್ಲಿ ಅರಳಿದ ಅನೇಕ ಸುಗಂಧ ಪುಷ್ಪಗಳು ಸಮೀರನೊಂದಿಗೆ ಸಂಚುಮಾಡಿ, ಎಲ್ಲೆಡೆಯಲ್ಲೂ ತನ್ನ ಕಂಪನ್ನು ಹರಡಿತ್ತು. ಇದು ವಿರಹಿಗಳ ರಾತ್ರಿ ಎಂಬಂತೆ ಮಲ್ಲಿಕಾಮಂಟಪಗಳಿಂದಲೂ ಮೇಲುಪ್ಪರಿಗೆಗಳಿಂದಲೂ ಮೃದುಮಧುರವಾದ ಸಂಗೀತ, ಅನೇಕ ಬಾರಿ ಮೋಹಕವಾದ ನಗು, ಕೈಬಳೆಗಳ ಗೆಜ್ಜೆಗಳ ಝಣತ್ಕಾರಗಳು ಹಿತವಾಗಿ ಅಲೆಅಲೆಯಾಗಿ ಕೇಳಿಸುತ್ತಿತ್ತು. ತುಂಬಿದ ಚಂದ್ರನು ತನ್ನ ರೋಹಿಣಿಯನ್ನು ಅರಸಿಕೊಂಡು ಹೋಗುವವನಂತೆ ಒಮ್ಮೊಮ್ಮೆ ಮೋಡಗಳ ಮರೆಯಲ್ಲಿ ಮರೆಯಾಗುತ್ತಿದ್ದ.

ಈ ಪ್ರಶಾಂತ ರಮಣೀಯ ವಾತಾವರಣದಲ್ಲಿ ತರುಣಪ್ರಣಯಿಗಳು ಮಧುಮಹೋತ್ಸವದಲ್ಲಿ ಮೈಮರೆತು ಕನಸಿನ ರಾಜ್ಯದಲ್ಲಿ ವಿಹರಿಸುತ್ತಿದ್ದರು. ಅವರಿಗೆ ಮಾರ್ಗ ಕಳೆದುದೂ ತಿಳಿಯಲಿಲ್ಲ—ಗಾಡಿಯವನು ಗಾಡಿಯನ್ನು ಮನೆಯ ಮುಂದೆ ನಿಲ್ಲಿಸಿ, ಗಾಡಿಯ ಬಾಗಿಲನ್ನು ತೆರೆದಾಗಲೇ ಅವರಿಗೆ ಎಚ್ಚರ.

ಪ್ರಣಯಿಗಳಿಬ್ಬರೂ ಗಾಡಿಯಿಂದ ಇಳಿದರು. ಗಾಡಿ ಕಣ್ಮರೆಯಾದೊಡನೆ ಕುಸುಮಾಜಿ ಗೋವಿಂದರಾಜನನ್ನು ಆತ್ಮೀಯವಾಗಿ ನೋಡಿ ನಕ್ಕಳು. ಆ ನಗುವಿನಲ್ಲಿ ಮಾದಕತೆ ಇತ್ತು. ಯಾವುದೋ ಆಕರ್ಷಣೆಯಿತ್ತು. ಆ ನಗೆಯಿಂದ ಗೋವಿಂದರಾಜನ ಹೃದಯ ಕಂಪಿಸಿತು. ಮೈ ರೋಮಾಂಚವಾಯಿತು. ಅವನು ಅವಾಕ್ಕಾಗಿ ಕುಸುಮಾಜಿಯನ್ನು

ಬಟ್ಟಗಣ್ಣುಗಳಿಂದ ನೋಡಿದ. ಆ ಕಣ್ಣುಗಳು ಏನನ್ನು ಶೋಧಿಸಿತೋ, ಯಾವ ಉತ್ತರ ಪಡೆಯಿತೋ, ಅವನು ಮಂತ್ರಮುಗ್ಧನಂತೆ ಕುಸುಮಾಜಿಯನ್ನು ಹಿಂಬಾಲಿಸಿದ.

ಪ್ರಾತಃಕಾಲ, ಅರುಣೋದಯಕ್ಕೆ ಮೊದಲೇ ಗೋವಿಂದರಾಜನಿಗೆ ಎಚ್ಚರವಾಯಿತು. ಅವನು ಕಣ್ಣರಳಿಸಿ ಸುತ್ತಲೂ ನೋಡಿದನು. ಕೋಣೆ. ಉತ್ತಮವಾದ ಅನೇಕ ಚಿತ್ರಪಟಗಳಿಂದ ಅಲಂಕರಿಸಲ್ಪಟ್ಟಿತ್ತು. ಭಿತ್ತಿಯಲ್ಲಿ ಅನೇಕ ಸುಂದರ ವರ್ಣಚಿತ್ರಗಳನ್ನು ಬಿಡಿಸಿದ್ದರು. ಅವುಗಳನ್ನು ನೋಡುತ್ತಾ ಹಾಗೇ ಮೈಮರೆತು ಮಲಗಿದ.

ಕೋಣೆಯು ತುಂಬಾ ಸುವಾಸನಾದ್ರವ್ಯಗಳ ಕಂಪು ಹರಡಿತ್ತು. ವಾತಾಯನದ ಜಾಲರಿಗಳ ಮೂಲಕ ತಂಗಾಳಿ ತೂರಿ ಬರುತ್ತಿತ್ತು. ಪೂರ್ವ ದಿಗಂತದಲ್ಲಿ ಅರುಣೋದಯದ ಸಂಭ್ರಮ—ಹೊಂಬೆಳಕು ಮೂಡಿತ್ತು. ಅದರೊಂದಿಗೆ ಹಕ್ಕಿಗಳ ಕಲರವ ಕಿವಿಗೆ ಹಿತವಾಗಿತ್ತು. ಗೋವಿಂದರಾಜನು ಆಯಾಸಗೊಂಡವನಂತೆ ಸುತ್ತಲೂ ಹೊರಳಿ ದಿಗಂತಮುಖಿಯಾಗಿ ಮಲಗಿದ. ಅವನಿಗೆ ತಾನು ಕನಸಿನ ಲೋಕದಲ್ಲಿ ಇರುವೆನೋ ನನಸಿನ ಲೋಕದಲ್ಲಿ ಇರುವೆನೋ ತಿಳಿಯದಾಗಿತ್ತು. ಹಿಂದಿನ ರಾತ್ರಿ ತಾನು ಅನುಭವಿಸಿದ ಸ್ವರ್ಗಸುಖ ಖಂಡಿತವಾಗಿ ಈ ಲೋಕದ್ದಾಗಿರಲಿಲ್ಲ. ಅವನಿಗೆ ಆ ಸಂಜೆ ಕುಸುಮಾಜಿಯ ನೃತ್ಯವೀಕ್ಷಿಸಲು ವಿಜಯ ವಿಠಲ ದೇವಾಲಯಕ್ಕೆ ಹೋದುದು ಚೆನ್ನಾಗಿ ನೆನಪಿತ್ತು. ಮುಂದೆ ಆದುದೆಲ್ಲವೂ ಕೇವಲ ಕನಸೆಂದೇ ಅವನ ಭ್ರಮೆ. ತಾನು ಕುಸುಮೆಯನ್ನು ಹಿಂಬಾಲಿಸಿ ಬಂದುದು, ತನಗೆ ಅವಳ ಪ್ರಿಯಸಾನ್ನಿಧ್ಯ ದೊರೆತುದು, ಅವಳೊಡನೆ ಸ್ವರ್ಗಸುಖ ಅನುಭವಿಸಿದುದು, ಎಲ್ಲವೂ ಅವನ ಭಾಗಕ್ಕೆ ಕನಸೇ ಸರಿ. ತಾನು ಇಲ್ಲಿ—ಅಪರಿಚಯವಾದ ಸ್ಥಳದಲ್ಲಿ ಹೇಗೆ ಬಂದೆನೆಂಬುದು ವಿಸ್ಮಯಕ್ಕೆ ಕಾರಣವಾಗಿತ್ತು! ತಾನು ಇದುವರೆಗೆ ಕಂಡದ್ದು ಕನಸಲ್ಲ—ನನಸು ಎಂಬುದನ್ನು ಹೇಳಲು ಅವನಿದ್ದ ಕೋಣೆ ಸಾಕ್ಷಿಯಾಗಿತ್ತು. ಅವನು ಯಾವುದನ್ನೂ ನಿರ್ಧರಿಸಲಾರದೆ ಹಾಸಿಗೆಯ ಮೇಲೆ ಅತ್ತಿತ್ತ ಹೊರಳುತ್ತಿದ್ದ.

ಅಷ್ಟು ಹೊತ್ತಿಗೆ ದಾಸಿಯೊಬ್ಬಳು ಅಲ್ಲಿ ಕಾಣಿಸಿಕೊಂಡು "ಸ್ನಾನಕ್ಕೆ ನೀರು ಸಿದ್ಧವಾಗಿದೆ" ಎಂದು ತಿಳಿಸಿ ಹೊರಟುಹೋದಳು.

ಗೋವಿಂದರಾಜನು ದಾಸಿಯನ್ನು ಅನುಸರಿಸಿ, ಸ್ನಾನವನ್ನು ಮುಗಿಸಿ ಒಂಡು ವಿಶ್ರಾಂತಿಯ ಕೋಣೆಗೆ ಬಂದನು. ಅಲ್ಲಿ ಅವನಿಗಾಗಿ ಲಘು ಲಹಾರ ಕಾದುಕುಳಿತಿತ್ತು. ಗೋವಿಂದರಾಜ ಅಲ್ಲಿಗೇ ಕುಸುಮಾಜಿ ಬರ ಹುದೆಂದು ಊಹಿಸಿ ನಿರಾಶನಾದ. ಅನಂತರ ತಿಳಿಯಿತು – ಕುಸುಮಾಜಿ ಡಿಯುಟ್ಟು ತನ್ನ ಆರಾಧ್ಯ ದೇವತೆಯಾದ ಸರ್ವಮಂಗಳೆಯ ಪೂಜೆಯಲ್ಲಿ ರತಳಾಗಿರುವಳೆಂದು.

ಗೋವಿಂದರಾಜನಿಗೆ ಫಲಹಾರದ ಮೇಲೆ ಅಪೇಕ್ಷೆಯುಂಟಾಗಲಿಲ್ಲ. ುಸುಮಾಜಿಯ ಸರ್ವಮಂಗಳೆಯ ಪೂಜೆ, ಆರಾಧನೆ ಅವನನ್ನು ಕುತೂಹಲ ಗಳಿಸಿತು. ಅವನು ಫಲಹಾರವನ್ನು ಕುಸುಮಾಜಿಯೊಂದಿಗೆ ತೆಗೆದು ಾಳ್ಳಲು ಯೋಚಿಸಿ, ಕುಸುಮಾಜಿಗೆ ಸುದ್ದಿ ಕೊಡದೆ ಅವಳ ಪೂಜಾಗೃಹ ನ್ನು ಸಮೀಪಿಸಿ, ಅವಳಿಗೆ ಕಾಣದಂತೆ ಮರೆಯಾಗಿ ಅವಳ ಪೂಜಾವಿಧಾನ ನ್ನು ನೋಡುತ್ತ ನಿಂತ.

ಕುಸುಮೆ ತನ್ನ ಆರಾಧ್ಯ ದೇವಿಯನ್ನು ಹೂಗಳಿಂದ ಅಲಂಕರಿಸಿ, ೀಪಧೂಪಗಳಿಂದ ಪೂಜಿಸಿ, ಆಗ ಸಂಗೀತ ಸೇವೆಯನ್ನು ಮಾಡುತ್ತಿದ್ದಳು. ವಳು ಸಾಮಾನ್ಯವಾಗಿ ತನಗೆ ಪ್ರಿಯವಾದ ವೀಣೆಯಿಂದ ಒಂದೆರಡು ದೇವಿ ್ತುತಿಯನ್ನಾಗಲೀ, ಭಕ್ತಿ ಗೀತಗಳನ್ನಾಗಲೀ ನುಡಿಸುವುದು ಅನುದಿನದ ಾಧಿ. ವೀಣೆಯ ಮೇಲೆ ಕುಸುಮಾಜಿಯ ಕೈ ಬೆರಳುಗಳು ಆಡಿದೊಡನೆ ಂಧರ್ವ ಸಾದೃಶದಿಂದ ಇಂಪಾದ ನಾದಮಾಧುರ್ಯ ಅಲೆಅಲೆಯಾಗಿ ಹೊರ ೊಮ್ಮಿತು. ಗೋವಿಂದರಾಜನು ನಿಂತೆಡೆಯಲ್ಲೇ ಭಾವಾವೇಶಗೊಂಡು ್ಯಮರೆತ. ಆ ಕ್ಷಣದಲ್ಲಿ ಅವನ ಹೃದಯದಲ್ಲಿ ಸರ್ವಮಂಗಳೆಯ ಬಗೆಗೆ ನನ್ಯವಾದ ಭಕ್ತಿಯುಂಟಾಯಿತು. ಪೂಜಾಗೃಹದ ನಿರಾಡಂಬರವಾದ ್ವಿಕ ಆವರಣದಲ್ಲಿ ಸರ್ವಮಂಗಳೆಯ ಹೊನ್ನಿನ ಪುತ್ಥಳಿ ನೀಲಾಂಜನದ ಂದ ಪ್ರಕಾಶದಲ್ಲಿ ಮಿರುಗುತ್ತಿತ್ತು. ದೇವಿಯ ಮುಖದ ಪ್ರಸನ್ನತೆ ಎದ್ದು ಾಣಿಸುತ್ತಿತ್ತು. ದೇವಿಯನ್ನು ತದೇಕ ಚಿತ್ತದಲ್ಲಿ ನೋಡುತ್ತಿದ್ದ ಗೋವಿಂದ ಾಜ ಹಾಗೆಯೇ ಕುಸುಮೆಯ ಕಡೆ ದೃಷ್ಟಿಯನ್ನು ಹೊರಳಿಸಿದ. ದೇವಿಯ ್ತೋತ್ರದಲ್ಲಿ ಮೈಮರೆತು ಭಾವನಾಲೋಕದಲ್ಲಿ ವಿಹರಿಸುತ್ತಿದ್ದ ಕುಸುಮೆ ವನಿಗೆ ಕೇವಲ ಪ್ರಣಯಿನಿಯಾಗಿ ಕಾಣಲಿಲ್ಲ. ಅವಳೊಬ್ಬಳು—

ಸಾಧಕಳಾಗಿ ಸಿದ್ಧಳಾಗಿ ಕಂಡಳು. ಇಂತಹ ದೈವಭಕ್ತ ಸುಸಂಸ್ಕೃತ ಜೀವಿಯನ್ನು ನಲ್ಲೆಯಾಗಿ ಪಡೆದ ತಾನು ನಿಜವಾಗಿಯೂ ಪುಣ್ಯಶಾಲಿ ಎಂದು ಭಾವಿಸಿದ.

ವೀಣಾವಾದನ ಮುಗಿದಾಗ ಗೋವಿಂದರಾಜನಿಗೆ ಎಷ್ಟು ಬೇಗನೆ ಈ ಸ್ವರ್ಗಸೊಪೆ ನಿಂತುಹೋಯಿತು ಎಂದು ಅನಿಸವೆ ಇರಲಿಲ್ಲ. ಅವನು ತನ್ನ ಮೆಚ್ಚುಗೆಯನ್ನು ತೋರಿಸುವ ಭರದಲ್ಲಿ ಕುಸುಮೆಯನ್ನು ಅವಳ ಭಾವಸಮಾಧಿಯಿಂದ ಎಚ್ಚರಗೊಳ್ಳುವಂತೆ ಮಾಡಿದ್ದ. ಕುಸುಮೆಗೆ ತನ್ನ ಪೂಜೆಯನ್ನು ಗೋವಿಂದರಾಜನು ನೋಡಿಬಿಟ್ಟನಲ್ಲ ಎಂದು ಮೊದಲು ಸಂಕೋಚವಾಯಿತು. ಅವಳು ಮಾತನಾಡವೆ, ಗೋವಿಂದರಾಜನನ್ನು ಮೆಲ್ಲನೆ ಕತ್ತೆತ್ತಿ ನೋಡಿ ನಸುನಕ್ಕು ಮತ್ತೆ ತನ್ನ ಪೂಜೆಯಲ್ಲಿ ನಿರತಳಾದಳು.

ಇನ್ನು ಉಳಿದುದು ಮಹಾಮಂಗಳಾರತಿ. ಅನಂತರ ತೀರ್ಥಪ್ರಸಾದ ವಿನಿಯೋಗ. ಎಲ್ಲ ಮುಗಿದು ಕುಸುಮೆ ಹೊರಗೆ ಬರಲು ಒಂದು ತಾಸಾಯಿತು. ನಗುನಗುತ್ತ ಪ್ರಶ್ನಿಸಿದಳು—

"ನಿಮಗೆ ಬೇಸರವಾಯಿತೆ? ನಾನು ಮಾತನಾಡಿಸಲಿಲ್ಲೆಂದು?.... ಕ್ಷಮಿಸು ನನ್ನ ರಾಜ...." ಎಂದಳು.

ದೇವಿಯ ಆರಾಧನೆಯಲ್ಲಿ ತೊಡಗಿರುವಾಗ ಯಾವ ಲೌಕಿಕ ವ್ಯಾಪಾರಗಳಿಗೂ ಗಮನ ಕೊಡಬಾರದೆನ್ನುವ ಕುಸುಮಾಜಿಯ ಮಾತನ್ನು ಕೇಳಿದಾಗ ಅವಳ ಮಾತು ಗೋವಿಂದರಾಜನಿಗೆ ತುಂಬ ಹಿಡಿಸಿತು. ಅವನು ಕುಸುಮಾಜಿಯ ನಿಜವಾದ ಭಕ್ತಿಯನ್ನು ಮನದಲ್ಲಿ ಕೊಂಡಾಡದೆ ಇರಲಿಲ್ಲ.

"ಈಚೆಗೆ ನೀವು ಕಳ್ಳರಾಗುತ್ತಿದ್ದೀರಿ!"

—ಎಂದಳು ಹುಸಿಕೋಪದ ಧ್ವನಿಯಲ್ಲಿ.

"ಏಕೆ?"

"ನಿಮ್ಮನ್ನೇ ಕೇಳಿಕೊಳ್ಳಿ."

"ಗೊತ್ತಾಗಲಿಲ್ಲ!"

"ಪಾಪ, ಹೃದಯವನ್ನು ಕದ್ದವರಿಗೆ ತಮ್ಮ ಕಳ್ಳತನ ಗೊತ್ತಾಗಲಿಲ್ಲವೇನೋ!" ಎಂದು ವೈಯ್ಯಾರದಿಂದ, ಬಳುಕುತ್ತ ಹೇಳಿದಳು.

ಆ ಮಾತಿಗೆ ನಸುನಗುತ್ತ ಗೋವಿಂದರಾಜ ಅವಳನ್ನು ಕೈಹಿಡಿದು

ಳಿದುಕೊಂಡು ತನ್ನ ಹೃದಯದಲ್ಲಿ ಹುದುಗಿಸಿಕೊಂಡ. ಹೀಗೆ ಅವರು ಾವಾಸ್ವೋದದಲ್ಲಿ ಅದೆಷ್ಟು ಹೊತ್ತು ವ್ಯಯಿಸುತ್ತಿದ್ದರೋ! ಅಷ್ಟು ಹೊತ್ತಿಗೆ ಾಸಿ ಅತ್ತ ಕಡೆ ಬರುತ್ತಿರುವುದು ಕಾಣಿಸಿತು. ಕುಸುಮಾಜಿ ದೂರ ರಿದು, ಏನೂ ಆಗದವಳಂತೆ ನಟಿಸುತ್ತಾ, ಗೋವಿಂದರಾಜನಿಗೆ ಫಲಹಾರ ಯಿತೋ ಇಲ್ಲವೋ ವಿಚಾರಿಸಿಕೊಂಡಳು. ಈ ಮಾತಿಗೆ ಗೋವಿಂದ ಾಜನೇ ಉತ್ತರಕೊಟ್ಟ.

"ಮಹಾರಾಣಿಯವರ ಜೊತೆಯಲ್ಲಿ ಸೇವಾರ್ಥ ನಡೆಯಲೆಂದು ಾನೇ ತೆಗೆದುಕೊಳ್ಳಲಿಲ್ಲ—"

"ಹಾಗೋ" ಎಂದೆನ್ನುತ್ತ ಇಬ್ಬರಿಗೂ ಫಲಹಾರವನ್ನು ಮೇಲುಪ್ಪರಿ ಯ ಪ್ರಮೋದಭವನಕ್ಕೆ ತಂದಿಡಲು ತಿಳಿಸಿ, ಗೋವಿಂದರಾಜನೊಡನೆ ಲ್ಲಿಂದ ಹೊರಟುಹೋದಳು. ಅವರು ಅಲ್ಲಿಂದ ಹೊರಟಿದ್ದಾಗ ಅಲ್ಲಿಗೆ ಂದ ತಿಪ್ಪಾಜಿ ಅವರಿಬ್ಬರನ್ನು ನೋಡಿ ನಕ್ಕು ಅವರ ಕುಶಲಪ್ರಶ್ನೆ ಮಾಡಿ ೊರಟುಹೋದಳು. ಅಲ್ಲಿಂದ ಹೋಗುವಾಗ ತಿಪ್ಪಾಜಿಗೆ ಸಂಪ್ರದಾಯದ ರುದ್ಧ ಇಷ್ಟು ದಿನ ಕುಮಾರಿಯಾಗಿ ಉಳಿದಿದ್ದ ತನ್ನ ಮಗಳು— ಡೆಗೂ ತನಗೆ ಅನುರೂಪನಾದ ಪತಿಯನ್ನೇ ಆರಿಸಿಕೊಂಡಳಲ್ಲ. ಎಂದು ಂತೋಷವಾಗಿತ್ತು.

ಕುಸುಮೆ ಮೊದಲಿನಿಂದಲೂ ತಿಪ್ಪಾಜಿಗೆ ವಿಚಿತ್ರ ಹುಡುಗಿಯಾದ್ದಳು. ವಳು ಬೆಳೆದು ದೊಡ್ಡವಳಾದರೂ ಬಾಲ್ಯದ ಮುಗ್ಧತನ ಸರಳ ನಡೆನುಡಿ, ವಳಿಂದ ಮಾಯವಾಗಲೇ ಇಲ್ಲ. ಅವಳು ವಯಸ್ಸಿಗೆ ಬಂದಮೇಲಂತೂ, ುಸುಮೆಯ ಮಾತುಕತೆ, ವಿಚಾರಗಳನ್ನು ಕೇಳಿ ತಿಪ್ಪಾಜಿ ಗಾಬರಿಗೊಳ್ಳು ಂತೆ ಆಯಿತು. ಕುಸುಮೆ ತನ್ನ ವಂಶದ ಸಂಪ್ರದಾಯವನ್ನು ಮುರಿದು, ಾನು ಆಜೀವಪರ್ಯಂತ ಕುಮಾರಿಯಾಗಿಯೇ ಇದ್ದುಕೊಂಡು ಭಗವತೀ ರ್ವಮಂಗಳೆಯ ಧ್ಯಾನದಲ್ಲಿ ತನ್ನ ಜೀವನವನ್ನು ಸಾರ್ಥಕಗೊಳಿಸುವುದಾಗಿ ೇಳತೊಡಗಿದ್ದಳು. ಈ ಮಾತುಗಳನ್ನು ಮೊದಲು ಕೇವಲ ಹುಡುಗಾಟಿ ಯ ಮಾತುಗಳೆಂದು ತಿಳಿದು ಅವಳು ಅಲಕ್ಷ್ಯ ತಾಳಿದಳು. ಆದರೆ ುಸುಮೆ, ತಿಪ್ಪಾಜಿಯ ಸಲಹೆಯಗಳನ್ನು ತಿರಸ್ಕರಿಸಿ, ತಾನು ಬಾಳಿದರೆ ಂಸಾರಿಯಾಗಿ ಬಾಳಬೇಕು; ಇಲ್ಲದೆ ಇದ್ದರೆ, ಆಜೀವಪರ್ಯಂತ ಕುಮಾರಿ

ಯಾಗಿಯೇ ಇರಬೇಕೆಂಬ ಹಠ ತೊಟ್ಟಮೇಲೆ ಕುಸುಮೆಯ ಮನಸ್ಸಿನ ಇಂಗಿತವರಿತ ತಾಯಿ ಬೇರೇನೂ ಮಾಡಲು ತೋಚದೆ ನಿರ್ವಾಹವಿಲ್ಲದೆ ಸುಮ್ಮನಾಗಬೇಕಾಯಿತು. ಕುಸುಮೆಯ ಮೇಲೆ ಬಲಪ್ರಯೋಗ ಮಾಡಿದರೆ ಇದರಿಂದ ಅನರ್ಥಕಾರಿಯಾಗುವುದೆಂದು ಅನುಭವದಿಂದ ತಿಳಿದಿದ್ದ ತಿಪ್ಪಾಜಿ, ಮಗಳ ಸುಖವನ್ನು ಸಂಪ್ರದಾಯದ ಸೋಗಿಗೆ ಬಲಿ ಕೊಡಲಾರದೆ, ಅವಳ ದಾರಿಯಲ್ಲಿ ಅವಳನ್ನು ಬಿಟ್ಟಿದ್ದಳು. ಇದರಿಂದ ವೈಷಮ್ಯ ಉಂಟಾದರೂ—ಅನೇಕ ಶ್ರೀಮಂತ ಪುತ್ರರ, ರಾಜಸಂಬಂಧಿಕರ ಅಸಮಾಧಾನ, ದ್ವೇಷಗಳುಂಟಾದರೂ–ತಿಪ್ಪಾಜಿ ಯಾವುದಕ್ಕೂ ಹೆದರಲಿಲ್ಲ. ಮಗಳ ಹಣೆಯಲ್ಲಿ ಏನೆಲ್ಲಿ ಬರೆದಿದೆಯೋ ಅದರಂತೆ ಆಗಲಿ, ಎಂದು ಅವಳು ಕುಸುಮಾಜಿಯನ್ನು ಅವಳ ಇಚ್ಛೆಯಂತೆ ಬಿಟ್ಟುಬಿಟ್ಟಿದ್ದಳು. ಈಗ ಮಗಳು ತನಗೆ ಸರ್ವರೀತಿಯಲ್ಲಿ ಆದರ್ಶಪತಿಯಾಗಬಲ್ಲ ಗೋವಿಂದರಾಜನನ್ನು ವರಿಸಿ, ಅವನನ್ನು ಗಾಂಧರ್ವರೀತ್ಯ ವಿವಾಹವಾದುದರಿಂದ, ಮಗಳ ಭವಿಷ್ಯ ಹೇಗೋ ಎನ್ನುವ ಬಗೆಗೆ ತಾಯಿಯ ಎಲ್ಲ ಶಂಕೆ ಕಳವಳಗಳು, ಮಂಜಿನಂತೆ ಕರಗಿಹೋಗಿದ್ದುವು. ಅವಳಿಗೆ ಈಗ ಮಗಳ ಬಗ್ಗೆ ನೆಮ್ಮದಿಯುಂಟಾಯಿತು. ಇಷ್ಟಕ್ಕೆಲ್ಲ ಕಾರಣಳಾದ ಸರ್ವಮಂಗಳೆಯನ್ನು ಅವಳು ಮತ್ತೊಮ್ಮೆ ನೆನೆದಳು.

ಕುಸುಮೆ ಗೋವಿಂದರಾಜರು ಅಲ್ಲಿಂದ ಹೊರಟುಹೋಗಿ ಹೆಚ್ಚು ಕಾಲವಾಗಿರಲಿಲ್ಲ. ಅಷ್ಟರೊಳಗೆ ದಾಸಿಯೊಬ್ಬಳು ಕಾಣಿಸಿಕೊಂಡು, ಕುಸುಮಾಜಿಯನ್ನು ನೋಡಲು ಯಾರೋ ಬಂದಿರುವುದಾಗಿಯೂ ಕೂಡಲೇ ಹೊರಟುಬರಬೇಕೆಂದು ತಿಪ್ಪಾಜಿ ತಿಳಿಸಿದುದಾಗಿಯೂ ಹೇಳಿದಳು. ದಾಸಿಯ ಹಿಂದೆ ಕುಸುಮೆ ತನ್ನನ್ನು ಅರಸಿಕೊಂಡು ಬಂದ ವ್ಯಕ್ತಿ ಯಾರೆಂದು ನೋಡಲು ಕುತೂಹಲದಿಂದಲೇ ಬಂದಳು. ಅವಳ ಎದುರಿಗೆ ಸುಮಾರು ನಲವತ್ತು ವರ್ಷ ಪ್ರಾಯದ, ರಾಜಪುತ್ರನಂತೆ ತುಂಬಾ ಬೆಲೆಬಾಳುವ ಉಡುಪನ್ನು ಧರಿಸಿದ್ದ ಒಬ್ಬ ವ್ಯಕ್ತಿ ಕುಳಿತಿದ್ದ. ಅವಳನ್ನು ನೋಡುತ್ತಲೇ, ಅವನು ಒಂದು ಸಲ ಮಂದಹಾಸವನ್ನು ಬೀರಿ, ತನ್ನ ಮೀಸೆಯನ್ನು ಹುರಿಮಾಡಿಕೊಂಡು, ಠೀವಿಯಿಂದ ತನ್ನ ಅನುಚರರು ಹೊತ್ತು ತಂದಿದ್ದ ವಸ್ತುಗಳ ಕಡೆ ನೋಡಿದ.

ಕುಸುಮಾಜಿ ಬಂದವಳೇ ಅಲ್ಲೇ ನಿಂತುಕೊಂಡುದನ್ನು ಕಂಡು, ತಿಪ್ಪಾಜಿ ಹೇಳಿದಳು:

"ಬಾ ಮಗು ಬಾ, ಬಾ. ಕುಳಿತುಕೋ. ಇವರು ಬೇರೆ ಯಾರೂ ಅಲ್ಲ; ವಿಜಯಭದ್ರರು—ಸ್ವಯಂಮಹಾಪ್ರಭುಗಳ ಭಾವಮೈದುನರಂತೆ. ಮಾತ್ರ ಶ್ರೀ ಚಿನ್ನಾದೇವಿಯವರ ಸಹೋದರರಂತೆ. ಮಹಾದಂಡಾಧಿಪತಿ ಕೊಂಡ ಮರಸಯ್ಯನವರ ಕುಮಾರರಂತೆ. ನಮ್ಮ ಮೇಲೆ ಕೃಪೆಮಾಡಿ, ಇಷ್ಟು ದೂರ ಪಾದ ಬೆಳೆಸಿದ್ದಾರೆ. ಬಡವರ ಮನೆಗೆ ಭಾಗ್ಯದೇವತೆ ಬಂದಂತೆ ದಯಮಾಡಿಸಿದ್ದಾರೆ...."

—ಎಂದಳು ತಿಪ್ಪಾಜಿ ಅವರನ್ನು ಮಗಳಿಗೆ ಪರಿಚಯ ಮಾಡಿಕೊಡುತ್ತಾ.

"ಶ್ರೀಮಂತರು ನಮ್ಮ ಬಡಕುಟೀರಕ್ಕೆ ದಯಮಾಡಿಸಿದುದು ನಮ್ಮ ಪುಣ್ಯವಿಶೇಷವೇ ಸರಿ." ಎಂದಳು ಕುಸುಮಾಜಿ.

"ನಿನ್ನೆಯ ದಿನ ನಿನ್ನ ನೃತ್ಯಪ್ರದರ್ಶನವಾಯಿತಲ್ಲ, ನೋಡಲು ಇವರೂ ಬಂದಿದ್ದರಂತೆ. ಅದರ ವೇಷ ಮರೆಸಿಕೊಂಡು ಬಂದಿದ್ದರಂತೆ. ಅಂತಲೇ ನಮಗೆ ತಿಳಿಯಲಿಲ್ಲ. ನಿನ್ನ ನೃತ್ಯವನ್ನು ನೋಡಿ ತುಂಬಾ ಮೆಚ್ಚಿಕೊಂಡಿದ್ದಾರೆ. ಉತ್ಸವ ಮುಗಿದಮೇಲೆ ನಿನಗಾಗಿ ಶೋಧಿಸಿದರಂತೆ. ಆದರೆ ನೀನು ಮೊದಲೇ ಮನೆಗೆ ಬಂದುಬಿಟ್ಟದ್ದರಿಂದ ಶ್ರೀಮಂತರಿಗೆ ತುಂಬಾ ನಿರಾಶೆಯಾಯಿತು. ಅವರೂ ನಮ್ಮ ಮೇಲೆ ವಿಶ್ವಾಸವಿಟ್ಟು ಇಷ್ಟೆಲ್ಲ ಕಾಣಿಕೆಯನ್ನು ನಿನಗಾಗಿ ಅಲ್ಲ—ನಿನ್ನ ಕಲೆಗಾಗಿ ಕೊಟ್ಟು ಗೌರವಿಸಲು ತಾವೇ ಬಂದಿದ್ದಾರೆ. ಶ್ರೀಮಂತರ ಕಲಾಭಿಮಾನ, ಔದಾರ್ಯಗಳನ್ನು ನಾವು ಎಷ್ಟು ಹೊಗಳಿದರೂ ಅಲ್ಪವೇ!" ಎಂದಳು ತಿಪ್ಪಾಜಿ.

ವಿಜಯಭದ್ರನು ಮೂರು ನಾಲ್ಕು ಸೇವಕರ ಕೈಲಿ ಹೊರಿಸಿಕೊಂಡು ತಂದಿದ್ದ ಅನೇಕ ಒಡವೆ ವಸ್ತುಗಳನ್ನೂ ಅನರ್ಘ್ಯವಾದ ಮುತ್ತು ರತ್ನಗಳನ್ನೂ ನೋಡಿ, ಬೆರಗಾಗಿಹೋಗಿದ್ದಳು ತಿಪ್ಪಾಜಿ. ಅಂತಲೇ ಅವಳು ಕೂಡಲೇ ಕುಸುಮಾಜಿಯನ್ನು ಅಲ್ಲಿಗೆ ಕರಸಿಕೊಂಡದ್ದು. ತನ್ನ ಕಲೆಯ ಬೆಲೆ ಏನೆಂದು ಆ ಮುಗ್ಧೆ ಅರಿಯಲೆಂದು ಅವಳ ಆಶಯ.

ಅವನ್ನೆಲ್ಲವನ್ನು ನೋಡಿಯೂ ನೋಡದವಳಂತೆ—ನಿರುತ್ಸಾಹದ ಧ್ವನಿಯಲ್ಲಿ ಕುಸುಮಾಜಿ,

"ತುಂಬಾ ಸಂತೋಷ. ತುಂಬಾ ಸಂತೋಷ" ಎಂದು ಹೇಳಿ ಅಲ್ಲೇ ಇದ್ದ ಆಸನದ ಮೇಲೆ ಕುಳಿತುಕೊಂಡಳು.

ಕೆಲಕಾಲ ಯಾರೂ ಮಾತನಾಡಲಿಲ್ಲ. ಅನಂತರ ಕುಸುಮಾಜಿಯೇ ಹೇಳಿದಳು.

"ಶ್ರೀಮಂತರಿಗೆ ನಮ್ಮಂಥ ಬಡ ಕಲಾವಿದೆಯ ನರ್ತನ ಮನಸ್ಸಿಗೆ ಬಂದುದು ನಮ್ಮ ಭಾಗ್ಯವೇ ಸರಿ!"

"ನಿಮ್ಮ ನೃತ್ಯವನ್ನು ಕಂಡಮೇಲೆ ನಮ್ಮಿಬ್ಬರಲ್ಲಿ ಯಾರು ನಿಜವಾಗಿ ಶ್ರೀಮಂತರೆನ್ನುವುದು ನನಗೆ ತಿಳಿಯದಾಗಿದೆ!"

"ಏಕೆ?"

"ನಾವು ಕೇವಲ ಸಾಂಪತ್ತಿಕ ಸ್ಥಿತಿಯಲ್ಲಿ, ಐಹಿಕ ಭೋಗಭಾಗ್ಯಗಳಲ್ಲಿ ಶ್ರೀಮಂತರಿರಬಹುದು. ಆದರೆ ಕಲಾಸಂಪತ್ತಿನಲ್ಲಿ ನೀವು ನಮಗಿಂತಲೂ ನೂರುಮಡಿ ಶ್ರೀಮಂತರಾಗಿದ್ದೀರಿ. ಹೀಗಿರುವಲ್ಲಿ...."

"ಇದು ತುಂಬಾ ದೊಡ್ಡ ವ್ಯಕ್ತಿಗಳಿಗೆ ಉಚಿತವಾದ ಮಾತು. ಆದರೆ ಹೀಗೆಂದಮಾತ್ರಕ್ಕೆ ವಸ್ತುಸ್ಥಿತಿ ಬೇರೆಯಾಗಲಾರದು. ಕಲೆಯೂ ಒಂದು ಶ್ರೀಮಂತಿಕೆ ನಿಜ. ಆದರೆ ಈ ಕಲಾ ಶ್ರೀಮಂತಿಕೆಯನ್ನು ಮೆಚ್ಚಿ, ಪ್ರೋತ್ಸಾಹಿಸುವ ಸಹೃದಯ ಕಲಾಭಿಮಾನಿಗಳು ಇಲ್ಲದ ಮೇಲೆ ಇದು. ಅರಣ್ಯ ಕುಸುಮದಂತೆ ವ್ಯರ್ಥವೇ ಸರಿ. ತಾವು ನಿಜವಾದ ಕಲಾಭಿಮಾನಿಗಳೂ ಸಹೃದಯರೂ ಉದಾರಚರಿತರೂ ಆಗಿರುವುದರಿಂದಲೇ ನಮ್ಮಂಥ ಕಲಾವಿದರನ್ನು ಅರಸಿಕೊಂಡು ನಮ್ಮ ಬಡಕುಟೀರಕ್ಕೆ ದಯಮಾಡಿಸಿದ್ದೀರಿ ಇದು ನಮ್ಮ ಭಾಗ್ಯವೇ ಸರಿ."

"ಹೂವಿದ್ದಕಡೆ ದುಂಬಿಗಳು ಬರುವುದರಲ್ಲಿ ಏನು ಆಶ್ಚರ್ಯ?" ಎಂದು ಹೇಳಿ ಒಂದು ಬಗೆಯಾಗಿ ಅರ್ಥಗರ್ಭಿತವಾಗಿ ನೋಡಿ ನಕ್ಕ. ಆದರೆ ನಿನ್ನಂಥ ಕಲಾವಿದೆಯರಿದ್ದಲ್ಲಿ ತಾನು ಸದಾ ಸಿದ್ಧನೆನ್ನುವ ಮಾತು ಅವನ ಗಂಟಲಲ್ಲಿಯೇ ಉಳಿಯಿತು.

"ನಮ್ಮಂಥ ಕಲಾವಿದರ ಮೇಲೆ ತಮ್ಮ ಅಭಿಮಾನ ಏಕರೀತಿಯಾಗಿ ಇರಬೇಕು" ಎಂದಳು ಇದುವರೆಗೆ ಸುಮ್ಮನೆ ಕುಳಿತಿದ್ದ ತಿಪ್ಪಾಜಿ.

"ಅಂತಲೇ ನಾವು ಬಂದಿರುವುದು. ತಮ್ಮ ಭೇಟಿ ಮಾತ್ರದಿಂದ

ತೃಪ್ತರಾಗದೇ ತಮ್ಮ ಪ್ರೀತಿ ವಿಶ್ವಾಸಗಳನ್ನು ನಮ್ಮದು ಮಾಡಿಕೊಂಡು ಹೋಗಲೆಂದೇ ನಾವು ಬಂದುದು. ನಮ್ಮ ವಿಶ್ವಾಸದ ಅಲ್ಪ ಕಾಣಿಕೆಯಾದ ಈ ವಡವೆ ವಸ್ತುಗಳನ್ನು ತಾವು ಒಪ್ಪಿಕೊಂಡು ನಮ್ಮನ್ನು ಕೃತಾರ್ಥರನ್ನಾಗಿ ಮಾಡಬೇಕು" ಎಂದ ಅವನ ಮುಖ ಅವನ ಮನಸ್ಸಿನ ಎಲ್ಲ ವಿಕಾರಗಳ ದರ್ಪಣವಾಗಿತ್ತು. ಅವನ ನೋಟ ಅವನ ಮನಸ್ಸಿನ ಎಲ್ಲ ದುಷ್ಟವಾಸನೆಯನ್ನೂ ಬಯಲುಮಾಡುತ್ತಿತ್ತು. ಮೊದಲು ಕಲಾವಿದೆಯ ಕಲೆಯನ್ನು ಸನ್ಮಾನಮಾಡಲೆಂದು ಬಂದವನು ಈಗ ಯಾಚಿಸುತ್ತಿರುವುದು ಕುಸುಮಾಜಿಯ ಪ್ರೀತಿ ವಿಶ್ವಾಸಗಳನ್ನು. ತನ್ನೊಡನೆ ತಂದಿರುವ ಅಮೂಲ್ಯವಾದ ಒಡವೆ ವಸ್ತುಗಳಿಂದ ಕುಸುಮಾಜಿಯ ಪ್ರೀತಿವಿಶ್ವಾಸಗಳನ್ನು ಕೊಂಡುಕೊಳ್ಳಲು ಬಯಸಿದನೇನೋ.

ಅಂತೂ ಅವನ ಮಾತು, ಅಂಗಚಲನೆ ಇವುಗಳೊಂದೂ ಕುಸುಮೆಗೆ ಪ್ರಿಯವಾಗಲಿಲ್ಲ. ಪ್ರಿಯವೆನಿಸುವ ಮಾತು ಹಾಗಿರಲಿ ಅವು ಅಸಹ್ಯವನ್ನೇ ತಂದುವು. ಅವನ ಇದುರಿನಲ್ಲಿ ಇರಬೇಕಲ್ಲ ಎಂದು ಅವಳು ಬೇಸರಪಡುವಂತೆ ಆಯಿತು. ಅವನ ಔದಾರ್ಯದ ಹೊರೆಯಿಂದ ತಪ್ಪಿಸಿಕೊಳ್ಳಬೇಕೆಂದು ಕುಸುಮೆಯೇ ಹೇಳಿದಳು.

"ಇಷ್ಟೊಂದು ಬೆಲೆಬಾಳುವ ಈ ಕಾಣಿಕೆಯನ್ನು ನಾವು ಹೇಗೆ ಸ್ವೀಕರಿಸಬೇಕೋ ನಮಗೆ ತಿಳಿಯದಾಗಿದೆ. ನಾವು ಹೇಳಿಕೇಳಿ ಭಿಕಾರಿಗಳು. ನಮಗೆ ಈ ರಾಜಸನ್ಮಾನವೇ ? ಇವುಗಳನ್ನು ಸ್ವೀಕರಿಸಲು ಅರ್ಹತೆಯಾದರೂ ನಮ್ಮಲ್ಲಿದೆಯೆ? ತಾವು ನಮ್ಮನ್ನು ಅನ್ಯಥಾ ತಿಳಿಯದೇ ಹೋದರೆ ತಮ್ಮಲ್ಲಿ ನಮ್ಮದೊಂದು ಪ್ರಾರ್ಥನೆಯಿದೆ. ದಯವಿಟ್ಟು ನಡಸಿಕೊಡಬೇಕು. ಶ್ರೀಮಂತರು ನಮ್ಮ ಮೇಲೆ ಇರುವ ವಿಶ್ವಾಸವೇ ಸಾಕು. ಈ ಕಾಣಿಕೆಯು ನಮ್ಮ ಯೋಗ್ಯತೆಗೆ ಮೀರಿದ ಶ್ರೀಮಂತರ ಔದಾರ್ಯ. ಇದನ್ನು ತಾವು ಹಿಂದಕ್ಕೆ ಸ್ವೀಕರಿಸಿದರೆ ನಮಗೆ ತುಂಬಾ ಉಪಕಾರ ಮಾಡಿದಂತೆ ಆಗುತ್ತೆ."

ಈ ಮಾತು ಕೇಳಿ ವಿಜಯಭದ್ರ ಕೂಡಲೇ ಬೆರಗಾದ. ಕುಸುಮಾಜಿಯಿಂದ ಈ ಬಗೆಯ ಮಾತುಗಳು ಬರುವುವೆಂದು ಅವನು ಖಂಡಿತ ಊಹಿಸಿರಲಿಲ್ಲ. ಸಾಮಾನ್ಯ ವೇಶ್ಯೆಯ ಪುತ್ರಿ ಕುಸುಮಾಜಿ. ಅವಳನ್ನು ಒಲಿಸಿಕೊಳ್ಳಲು ಯಾವ ತೊಡಕೂ ಇರುವುದಿಲ್ಲವೆಂದು ತಿಳಿದಿದ್ದ ವಿಜಯಭದ್ರ—

ಕುಸುಮೆ ಇತರ ವೇಶ್ಯೆಯರಂತೆ ಅಲ್ಲ. ಅವಳಿಗೆ ಈ ಧನಕನಕ ತುರಗವಾಹನ ಗಳ ಲೋಭದಿಂದ ಅವಳನ್ನು ಒಲಿಸಿಕೊಳ್ಳಲು ಸಾಧ್ಯವೇ ಇಲ್ಲವೆಂಬುದು ವಿಜಯಭದ್ರನಿಗೇನು ಗೊತ್ತು ? ಅವನು ಕುಸುಮೆಯನ್ನು ಇತರ ವಿಲಾಸಿನಿ ಯರ ಗುಂಪಿಗೆ ಸೇರಿಸಿ ಮೋಸಹೋಗಿದ್ದ ! ಈಗ ಕುಸುಮೆಯ ಮಾತಿನಿಂದ ಅವನು ಕಣ್ಣು ತೆರೆಯಬೇಕಾಯಿತು. ಅವನು ಹೇಳಿದ : “ನಿಮ್ಮ ನೃತ್ಯ ಕಲೆಯನ್ನು ಕಂಡು ನಾನು ಬೆರಗಾಗಿದ್ದೆ. ಈಗ ಅವುಗಳಿಗೂ ಮೀರಿದ ವಿಸ್ಮಯ ಬೆರಗು ಉಂಟಾಗಿವೆ—ನಿಮ್ಮ ನಡೆನುಡಿಗಳನ್ನು ಕಂಡ ಮೇಲೆ. ನಿಮ್ಮ ಮಾತನ್ನು ಅರ್ಥಮಾಡಿಕೊಳ್ಳುವ ಶಕ್ತಿ ನನಗೆ ಇಲ್ಲ. ಇದು ನನ್ನ ಅಲ್ಪ ಸಂಭಾವನೆ—ಇದನ್ನು ತಿರಸ್ಕರಿಸಿದರೆ ನನ್ನ ಮನಸ್ಸಿಗೆ ತುಂಬಾ ವ್ಯಥೆ ಯುಂಟಾಗುತ್ತದೆ. ತಾವು ಇದನ್ನು ಸ್ವೀಕರಿಸಲೇಬೇಕು—ಎಂದು ಅವು ಗಳನ್ನು ಬಳಿಗೆ ತಂದು ಇಡಲು ಸೇವಕರಿಗೆ ಸನ್ನೆ ಮಾಡಿದ.

ಆಗ ಕುಸುಮಾಜಿ ನಿರ್ಧಾರದ ಧ್ವನಿಯಲ್ಲಿ ಹೇಳಿದಳು.

“ಶ್ರೀಮಂತರ ಉಪಕಾರ ನಮ್ಮ ಮೇಲೆ ಅಪಾರವಾಯಿತು. ತಾವು ಇಷ್ಟು ಹೇಳಿದ ಮೇಲೆ ತಮ್ಮ ಮನಸ್ಸನ್ನು ನೋಯಿಸಲು ನಮಗೆ ಇಷ್ಟವೂ ಇಲ್ಲ, ಆದರೆ ನಮ್ಮದೊಂದು ಕೋರಿಕೆ. ತಾವು ತಿಳಿದಿರುವಂತೆ ನಾವು ಶ್ರೀರಂಗಪಟ್ಟಣದಿಂದ ಹೊಸದಾಗಿ ಬಂದಿರುವ ಪ್ರವಾಸಿಗಳು. ಇಲ್ಲಿ ನಮ್ಮದೆನ್ನುವ ಮನೆಯಿಲ್ಲ—ತಮ್ಮ ಅಮೂಲ್ಯ ನಿಧಿಗೆ ಇಲ್ಲಿ ಯೋಗ್ಯರಕ್ಷ ಣೆಯೂ ಇಲ್ಲ. ತಾವು ನಮ್ಮದಾಗಿ ಕಾಣಿಕೆಯನ್ನು ತಮ್ಮಲ್ಲಿಯೇ ನಮ್ಮ ಪರ ಇರಿಸಿಕೊಂಡಿದ್ದು, ನಾವು ಹೊರಡುವಾಗ ನಮಗೆ ಸಂದಾಯಮಾಡ ಬಹುದು. ಇದರಿಂದ ಶ್ರೀಮಂತರಿಗೆ ಅಸಮಾಧಾನವಿಲ್ಲವೆಂದು ಭಾವಿಸು ತ್ತೇನೆ” ಎಂದಳು ಉಪಾಯವಾಗಿ ಬಂದಿದ್ದ ಗಂಡಾಂತರವನ್ನು ದೂರ ಮಾಡುವ ನೆವದಲ್ಲಿ. ಕುಸುಮೆಗೆ, ವಿಜಯಭದ್ರನು ತಂದಿದ್ದ ಕಾಣಿಕೆಯನ್ನು ಮುಟ್ಟುವುದೆಂದರೆ ಅವನ ಕೀಳಾಸೆಗೆ ತಾನು ಇಂಬುಕೊಟ್ಟಂತೆ. ಇದನ್ನು ಅವನಿಗೆ ಸ್ಪಷ್ಟಪಡಿಸಲೇ ಬೇಕಾಗಿತ್ತು. ತಾನು ಇದುವರೆಗೆ ಅವಿವಾಹಿತ ಕನ್ಯೆಯಾಗಿದ್ದಂತೆ ಈಗ ಗೋವಿಂದರಾಜನನ್ನು ಕಾಯಾವಾಚ ಮನಸಾ ತನ್ನ ಆರಾಧ್ಯದೇವನೆಂದು ವರಿಸಿದ ಮೇಲೆ ಬೇರೆ ಪುರುಷರನ್ನು ತಾನು ಕಣ್ಣೆತ್ತಿ ನೋಡುವುದಿಲ್ಲವೆಂಬುದನ್ನು ಈಗಲೇ ಸ್ಪಷ್ಟವಾಗಿ ತಿಳಿಸಬೇಕೆಂದು

ಅವಳಿಗೆ ಅನಿಸಿತು. ಇದನ್ನು ಹೇಗೆ ತಿಳಿಸುವುದೆಂಬುದನ್ನು ತಿಳಿಯದೆ, ಬಾಲೆಯು ಸಹಜನಾಚಿಕೆಯಿಂದ ಸುಮ್ಮನಿದ್ದಳು.

"ಏನು, ನೀವು ರಾಜಧಾನಿಯನ್ನು ಇಷ್ಟುಬೇಗ ಬಿಟ್ಟು ಹೋಗಬೇಕೆ? ಇಲ್ಲಿಗೆ ಬಂದು ಕೆಲವು ದಿನಗಳೂ ಆಗಿಲ್ಲ—ಆಗಲೇ ಹೊರಡುವ ಮಾತು ಹೇಳುತ್ತಿದ್ದೀರಲ್ಲ. ಏಕೆ ನಮ್ಮ ರಾಜಧಾನಿ ನಿಮಗೆ ಸೇರಲಿಲ್ಲವೆ?" ಎಂದು ಪ್ರಶ್ನಿಸಿದ—ಬೇರೇನೂ ಮಾತನಾಡಲು ತೋರದೆ ವಿಜಯಭದ್ರ.

"ಇಂತಹ ವೈಭವವಾದ, ಅಮರಾವತಿಗೆ ಎರಡನೆಯದಾದ ಪಟ್ಟಣ ವನ್ನು ನಾವೆಂದಿಗೂ ನೋಡಿಯೇ ಇಲ್ಲ. ಆದರೂ—ನಮ್ಮ ಮನೆಮಠಗಳು ಇರುವುದು ಎಲ್ಲ ಶ್ರೀರಂಗಪಟ್ಟಣದಲ್ಲಿ. ನಾವು ಇಲ್ಲಿಗೆ ಕೇವಲ ಕ್ಷೇತ್ರ ಯಾತ್ರಿಗಳಾಗಿ ಬಂದಿದ್ದೇವೆ—ಯಾತ್ರಿಕರಿಗೆ ಉದ್ದಿಶ್ಯ ಸಾಧನೆಯಾದ ಮೇಲೆ ಹೊರಡಲೇಬೇಕಲ್ಲ! ಆದರೂ ನಾವು ಈಗಲೇ ರಾಜಧಾನಿಯನ್ನು ಬಿಟ್ಟು ಹೊರಡುವುದಿಲ್ಲ. ಇನ್ನೂ ಮಹಾಪ್ರಭುಗಳನ್ನು ಭೇಟಿಮಾಡಿಲ್ಲ. ಅವರನ್ನು ಭೇಟಿ ಮಾಡಿದರೆ ನಮ್ಮ ಇಲ್ಲಿನ ಎಲ್ಲ ಕೆಲಸಗಳೂ ಮುಗಿದಂತೆ."

"ಮಹಾಪ್ರಭುಗಳ ಭೇಟಿಯನ್ನು ಮಾಡಿಸಿಕೊಡುವ ಜವಾಬ್ದಾರಿ ನನಗೆ ಇರಲಿ. ತಮ್ಮ ಅಮೋಘ ನೃತ್ಯ ಪ್ರಭುಗಳ ಸಮ್ಮುಖದಲ್ಲಿ ಒಮ್ಮೆ ಆಗಲೇಬೇಕು. ಪ್ರಭುಗಳಿಗೆ ತಮ್ಮ ಕಲೆ ತುಂಬಾ ಪ್ರಿಯವಾಗುವುದರಲ್ಲಿ ನನಗೆ ಎಳ್ಳಷ್ಟೂ ಸಂಶಯವಿಲ್ಲ. ಒಮ್ಮೆ ಪ್ರಭುಗಳ ಕೃಪಾಕಟಾಕ್ಷ ತಮ್ಮ ಮೇಲೆ ಬೀಳಲಿ. ತಾವು ಇಲ್ಲಿಂದ ಹೇಗೆ ತಪ್ಪಿಸಿಕೊಂಡು ಹೋಗುತ್ತೀರೋ ನಾನು ನೋಡುತ್ತೇನೆ." ಎಂದು ನಗುತ್ತ ಹೇಳಿದ.

ಈ ನಗೆ ತಿಪ್ಪಾಜಿಯನ್ನು ಪ್ರಿಯಗೊಳಿಸಿತಾದರೂ ಕುಸುಮಾಜಿ ಮಾತ್ರ ಕಡೆದ ವಿಗ್ರಹದಂತೆ ನಿಶ್ಚಲವಾಗಿದ್ದಳು. ಅವಳ ಶ್ರೀಮದ್ಗಾಂಭೀರ್ಯವನ್ನು ಕಂಡು ತುಂಬಾ ನಿರಾಶನಾದ ವಿಜಯಭದ್ರ ತಿಪ್ಪಾಜಿಯ ನೆರವನ್ನು ಅಪೇಕ್ಷಿಸುವವನಂತೆ ಹೇಳಿದ.

"ಕುಸುಮಾಜಿಯವರಿಗೆ ನಮ್ಮಂಥ ಕಲಾಭಿಮಾನಿಗಳ ಮೇಲೆ ಅನುಗ್ರಹ ಉಂಟಾಗಲಿಲ್ಲ! ನೀವಾದರೂ ಅವರ ಪರ ನಾಲ್ಕು ಹೃದಯಸ್ಪರ್ಶಿಯಾದ ಮಾತು ಹೇಳಬಾರದೆ?"

ಈ ಮಾತು ಕೇಳಿ ತಿಪ್ಪಾಜಿಗೆ ಏನು ಹೇಳಬೇಕೋ ತಿಳಿಯದಾಯಿತು.

ಅವಳು ಹುಚ್ಚು ನಗೆ ನಕ್ಕುಬಿಟ್ಟಳು. ವಿಜಯಭದ್ರನ ಸ್ಥಿತಿ ತುಂಬಾ ಶೋಚನೀಯವಾಗಿತ್ತು. ಅದೇ ಅವಳ ನಗುವಿನ ಕಾರಣ.

" ಶ್ರೀಮಂತರ ಮೇಲೆ ಬಡವರ ಅನುಗ್ರಹವೆ ?"

" ಸದ್ಯದ ಸ್ಥಿತಿಯಲ್ಲಿ ಹೀಗೇ ಆಗಿದೆ. ಅರಮನೆಯ ಪರಿಜನರಿಗೆ ಗೊತ್ತು ವಿಜಯಭದ್ರನೆಂದರೆ ಯಾರೆಂದು. ಸಂಸ್ಥಾನಿಕರಿಗೆ ಅಧಿಕಾರವರ್ಗಕ್ಕೆ ತಿಳಿದಿದೆ ವಿಜಯಭದ್ರನ ಪ್ರತಿಷ್ಠೆ ಎಂತಹುದೆಂದು. ಸ್ವಯಂಮಹಾಪ್ರಭುಗಳಿಗೇ ವೇದ್ಯವಾಗಿದೆ ವಿಜಯಭದ್ರನೆಂದರೆ—ಎಂತಹ ಪರಮಾಪ್ತ ಮಿತ್ರನೆಂದು. ಹೀಗಿರುವ ವಿಜಯಭದ್ರ–ಇಡೀ ಸಾಮ್ರಾಜ್ಯವನ್ನು ಮನಸ್ಸು ಮಾಡಿ ಮುಷ್ಟಿಯಲ್ಲಿ ಇಟ್ಟುಕೊಂಡು ಆಳಬಲ್ಲ ವಿಜಯಭದ್ರ—ನಿಮಗೆ ಪ್ರಣಯಾರ್ಥಿಯಾಗಿ ಕಾಲುಕಾಲಿಗೆ ಬೇಡುವ ಸ್ಥಿತಿಯಿಂದಿದೆ. ಇದು ನಿಮ್ಮ ಪುಣ್ಯವೇ ಸರಿ" ಎಂದು ತನ್ನ ಹೆಗ್ಗಳಿಕೆಯನ್ನು ಹೇಳಿಕೊಂಡ.

" ಇಲ್ಲ, ಇದು ನಮ್ಮ ದೌರ್ಭಾಗ್ಯ !" ಎಂದು ಕುಸುಮೆ ಕಂಚಿನ ಧ್ವನಿಯಲ್ಲಿ ಹೇಳಿದಳು.

" ಏಕೆ? "

" ಶ್ರೀಮಂತರ ಕೃಪೆಗೆ ಪಾತ್ರರಾಗುವ ಸುಯೋಗ ನಮಗೆ ಇಲ್ಲವಾಯಿತಲ್ಲ ಎಂದು."

" ಹಾಗೆಂದರೆ? "

ವಿಷಯವೇನೆಂದು ಹೇಳಲು ಕುಸುಮೆ ಸಂಕೋಚಪಡುವುದನ್ನು ಅರಿತು ತಿಪ್ಪಾಜಿ ಹೇಳಿದಳು " ನಮ್ಮ ಕುಸುಮೆಯದು—ವಿವಾಹವಾಗಿದೆ—ಅವಳು ದೈವಸಾಕ್ಷಿಯಾಗಿ ವೀರಪುರುಷನೊಬ್ಬನನ್ನು ವಿವಾಹವಾಗಿದ್ದಾಳೆ."

" ಎಂದು ಮದುವೆಯಾಯಿತು ? ಯಾರನ್ನು ಮದುವೆಯಾಗಿದ್ದಾಳೆ ? ಎಲ್ಲವೂ ವಿಚಿತ್ರವಾಗಿದೆಯಲ್ಲ ! " ಎಂದ.

ಅವನು ಸಂಗ್ರಹಿಸಿಕೊಂಡಿದ್ದ ಅಂಶಗಳ ಮೇಲೆ ಕುಸುಮೆ ವೇಶ್ಯಾಪುತ್ರಿ ಎಂದೂ, ಇನ್ನೂ ಕುಮಾರಿಯಾಗಿಯೇ ಇರುವಳೆಂದೂ ಕೇಳಿದ್ದ. ಮೊದಲ ಆಹ್ವಾನ ತನ್ನದೇ ಆದುದಕ್ಕೆ ಅವನು ತುಂಬಾ ಹಿಗ್ಗಿಹಿರಿದಿದ್ದ. ಆದರೆ ಈಗ ತಿಪ್ಪಾಜಿಯ ಮಾತು ಕೇಳಿ ಅವನ ಉತ್ಸಾಹಕ್ಕೆ ತಣ್ಣೀರು ಎರಚಿದಂತೆ ಆಯಿತು.

ತಿಪ್ಪಾಜಿ ನಿರುದ್ವೇಗದಲ್ಲಿ ಕುಸುಮೆ ಗೋವಿಂದರಾಜನನ್ನು ಗಾಂಧರ್ವ ರೀತಿಯಾಗಿ ವರಿಸಿದ ಕಥೆಯನ್ನು ಹೇಳಿದಳು. ಇನ್ನಾದರೂ—ಪೀಡೆ ಕಳೆಯಲೆಂದು. ಇದರಿಂದ ವಿಜಯಭದ್ರನು ಇನ್ನಷ್ಟು ಸಿಟ್ಟಿಗೆ ಕೆರಳಿ ಕುಣಿದನೇ ಹೊರತು ಸುಮ್ಮನೆ ಹೊರಡಲಿಲ್ಲ.

ಈ ಗಡಿಬಿಡಿಯಲ್ಲಿ ವಿಜಯಭದ್ರನ ರಣಗರ್ಜನೆಯನ್ನು ಕೇಳಿ, ಏನು ಸಂಗತಿಯೋ ಎಂದು ಗೋವಿಂದರಾಜನೇ ಉಪ್ಪರಿಗೆಯಿಂದ ಕೆಳಗೆ ಬಂದು ನೋಡುತ್ತಾನೆ. ಎದುರಿಗೆ ತನ್ನ ಪ್ರಬಲ ಶತ್ರುವಾಗಿ, ತನ್ನ ಕೀರ್ತಿ ಉತ್ಕರ್ಷಗಳನ್ನು ಕಂಡು ಅಸೂಯೆಪಡುತ್ತಿದ್ದ, ದುರ್ಗರಕ್ಷಕನ ಸ್ಥಾನಕ್ಕೆ ಹೊಂಚುಹಾಕಿ, ಸಿಕ್ಕದೇ ನಿರಾಶನಾಗಿ ತನ್ನ ಮೇಲೆ ವೈರ ಸಾಧಿಸುತ್ತಿದ್ದ ವಿಜಯಭದ್ರ! ಕೋಪದಿಂದ ಕೆರಳಿ ನಿಂತಿದ್ದಾನೆ! ಅವನನ್ನು ಕಂಡು ನಡೆದಿರುವ ವಿದ್ಯಮಾನವೆಲ್ಲ ನಿಮಿಷಾರ್ಧದಲ್ಲಿ ಗೋವಿಂದರಾಜನಿಗೆ ತಿಳಿಯಿತು. ಅವನ ನಡತೆ ಏನೆಂದು ಮೊದಲಿಂದ ತಿಳಿದಿದ್ದ ಗೋವಿಂದರಾಜನಿಗೆ ವಿಜಯಭದ್ರನ ಈಚಿನ ಸಂಚು ಏನೆಂದು ತಿಳಿಯದೆ ಹೋಗಲಿಲ್ಲ. ವಿಷಯಲಂಪಟನೂ, ದುರ್ವ್ಯಸನಿಯೂ, ಕ್ರೂರಿಯೂ ಆಗಿದ್ದ ವಿಜಯಭದ್ರ ಅಧಿಕಾರ ಅಂತಸ್ತುಗಳಿಂದ, ತನ್ನನ್ನು ಪ್ರತಿಭಟಿಸುವವರು ಯಾರೂ ಇಲ್ಲ, ತನ್ನ ಕೈಗೆ ಇದಿರಿಲ್ಲವೆಂದು ಸೊಕ್ಕಿ ಮದಿಸಿದ ಗೂಳಿಯಂತೆ ಇದ್ದನು. ಅವನಿಂದ ಹಾಳಾದ ಮನೆಮಠಗಳೆಷ್ಟು? ಪ್ರಾಣತ್ಯಾಗ ಮಾಡಿಕೊಂಡ ಪ್ರತಿವ್ರತೆಯರೆಷ್ಟು? ಅವನ ಅಂತಃಪುರದಲ್ಲಿ ಗುಲಾಮರಂತೆ ಸಹಸ್ರ ಸಂಖ್ಯೆಯಲ್ಲಿ ನರಳುತ್ತಿರುವ ನಿರ್ಭಾಗ್ಯಭಗಿನಿಯರೆಷ್ಟು? ಇವುಗಳ ಇತಿಹಾಸವನ್ನು ಬಲ್ಲ ಗೋವಿಂದರಾಜನಿಗೆ ವಿಜಯಭದ್ರನ ಇಂದಿನ ಕಲಾಸನ್ಮಾನದ ನೆಪದ ಹಿಂದೆ ಅಡಗಿರುವ ದುರಾಲೋಚನೆ ಏನೆಂಬುದೂ ತಿಳಿಯಿತು. ಅದಕ್ಕೆ ಸೊಪ್ಪು ಹಾಕದೆ ಇರುವುದರಿಂದಲೇ ಈಗ ಇವರಿಬ್ಬರ ಮೇಲೆ ಹೀಗೆ ಹುರಿಹಾಯುತ್ತಿರುವುದು, ಎಂದುಕೊಂಡನು.

ವಿಜಯಭದ್ರನು ಗೋವಿಂದರಾಜನನ್ನು ನೋಡುತ್ತಲೇ ಕ್ಷಣಕಾಲ ತತ್ತರಿಸಿದ. ಅವನು ಈ ವೇಳೆಯಲ್ಲಿ ಇಲ್ಲಿರಬಹುದೆಂದು ಅವನು ಖಂಡಿತ ತಿಳಿದಿರಲಿಲ್ಲ. ಅವನು ಒಳಗೆ ಇರುವನೆಂದೇ ಈ ತಾಯಿಮಕ್ಕಳು ತನ್ನ ಅಧಿಕಾರವನ್ನು ಧಿಕ್ಕರಿಸಿ ಮಾತನಾಡುತ್ತಿರುವುದು. ಹಾಗಾದರೆ ಅವರಿಗೆ

ವಿಜಯಭದ್ರನ ಕೈಯನ್ನೊಮ್ಮೆ ತೋರಿಸಲೇಬೇಕು. ಇಂತಹ ನ
ಗೋವಿಂದರಾಜರು ಎದುರು ನಿಂತರೂ ಅವರನ್ನೆಲ್ಲ ಆಪೋಶನ ತೆಗೆದುಕೊ
ಬಲ್ಲ ಶಕ್ತಿ ತನಗೆ ಇವೆ ಎಂಬುದನ್ನು ಇವರಿಬ್ಬರಿಗೆ ತೋರಿಸಬೇಕು—ಎನ
ಹಠ ಅವನಿಗೆ ಉಂಟಾಯಿತು.

"ಶ್ರೀಮಂತರ ಅಟ್ಟಹಾಸವೇಕೋ ಹಠಾತ್ತನೆ ನಿಂತುಹೋಯಿ
ಕೇವಲ ಹೆಂಗಸರ ಮುಂದೆ ಕೊಚ್ಚುತ್ತಿದ್ದ ಬಡಾಯಿ, ತೋರಿಸುತ್ತಿ
ಶೌರ್ಯಪ್ರದರ್ಶನ ಏಕೋ ನಿಂತುಹೋಯಿತು. ಸಾಗಲಿ....ವಿಜಯಭ
ಪ್ರತಾಪ. ಇವರ ಮುಂದೆ ಸಾಗದೇ ಇನ್ನು ಯಾರ ಮುಂದೆ ಸಾಗಬೇಕು

—-ಎಂದು ಜರೆದು ವ್ಯಂಗ್ಯವಾಗಿ ಹೇಳಿದ ಗೋವಿಂದರಾಜ.

"ಗೋವಿಂದರಾಜ ನಿನಗೆ ಪ್ರಾಣದ ಮೇಲೆ ಆಸೆ ಇದ್ದರೆ ನಾಲಗೆಯ
ಬಿಗಿಹಿಡಿದು ಮಾತನಾಡು."

"ನಿನ್ನಂಥ ರಣಹೇಡಿಯ ಮುಂದೆ ಮಾತನಾಡಲು ನಾಲಗೆಯಲ್ಲ
ಆಯುಧ—ಕತ್ತಿ! ಧೈರ್ಯವಿದ್ದರೆ ಕತ್ತಿಹಿರಿದು ಮಾತನಾಡು. ಸುಮ
ಹೆಂಗಸರನ್ನು ಹೆದರಿಸುವಂತೆ ಗೋವಿಂದರಾಜನನ್ನು ಹೆದರಿಸಲು ಬರಬೆ
ನಿನ್ನ ಯೋಗ್ಯತೆ ಏನೆಂದು ನನಗೆ ತಿಳಿದಿದೆ. ಅವರಿಗೆ ನಿನ್ನ ಯೋ
ಏನೆಂದು ತಿಳಿಯದೆ ಗೌರವ ಕೊಟ್ಟು ಮಾತನಾಡಿಸಿದ್ದಾರೆ.
ಯೋಗ್ಯತೆಯನ್ನು ಉಳಿಸಿಕೊಂಡು ಇಲ್ಲಿಂದ ಹೊರಡುವ ಆಲೋ
ಮಾಡು."

"ಇಲ್ಲಿಂದ ನಾನು ಹೊರಡಬೇಕೋ ನೀನು ಹೊರಡಬೇಕೋ
ಯುವುದು ಈಗಲ್ಲ....ನಾಳೆ....ನಾಳೆ!" ಎಂದು ಅಲ್ಲಿಂದ ಹೊರ
ಪ್ರಯತ್ನ ಮಾಡಿದ. ಹೋಗುತ್ತಾ ಅಲ್ಲೇ ನಿಂತಿದ್ದ ಕುಸುಮಾಜಿಯ
ದಿಟ್ಟಿಸಿ ನೋಡಿ ಹೇಳಿದ.

"ಗೋವಿಂದರಾಜ, ಇವಳೇ ನಮ್ಮಿಬ್ಬರ ಪಣವೆಣ್ಣು. ಬದುಕಿ
ನಮ್ಮಿಬ್ಬರಲ್ಲಿ ಒಬ್ಬರು ಬದುಕಿರಬೇಕು. ಅವರಿಗೆ ಮಾತ್ರ ಇವಳು ಮುಡಿ
ಇದನ್ನುರಕ್ತದಲ್ಲಿ ಬರೆದಿಟ್ಟುಕೋ; ಈ ಹೋರಾಟ ನಮ್ಮಿಬ್ಬರ ಶಕ್ತಿಸಾಮ
ಗಳ ಪರೀಕ್ಷೆ! ಇದರಲ್ಲಿ ನೀನು ಮಡಿಯಬೇಕು; ಇಲ್ಲ ನಾನು ಮಡಿ
ಬೇಕು."

ಎಂದು ಹೇಳಿ ಅಲ್ಲಿಂದ ಬಿರಬಿರನೆ ಹೆಜ್ಜೆ ಹಾಕಿಕೊಂಡು ಗಾಳಿಯ ವೇಗದಲ್ಲಿ ಹೊರಟುಹೋದ. ಸೇವಕರು ಮಾತಿಲ್ಲದೆ ತಮ್ಮ ದಣಿಯನ್ನು ಹಿಂಬಾಲಿಸಿ ನಡೆದರು.

ಗೋವಿಂದರಾಜ, ತಿಪ್ಪಾಜಿ ಕುಸುಮೆಯರು ಕ್ಷಣಕಾಲ ವಿಗ್ರಹದಂತೆ ಅಚಲಿತರಾಗಿ ನಿಂತರು.

ವಿಜಯಭದ್ರ ಕಣ್ಮರೆಯಾದುದನ್ನು ಕಂಡು ತಿಪ್ಪಾಜಿ

"ಸದ್ಯ ತೊಲಗಿತು ಶನಿ!" ಎಂದಳು. ಆದರೆ ಈ ಶನಿಯ ಕಾಟ ಅಂದಿನಿಂದಲೇ ಆರಂಭವಾಯಿತೆಂದು ಅವಳಿಗೆ ಮಾತ್ರ ತಿಳಿದಿರಲಿಲ್ಲ.

೪

ಕುಸುಮಾಜಿಯ ಎದುರಿಗೆ ಅಪಮಾನಿತನಾಗಿ ಮನೆಗೆ ತೆರಳಿದ ವಿಜಯಭದ್ರನಿಗೆ ಬಹಳ ಕಾಲ ಮನಶ್ಶಾಂತಿ ಇರಲಿಲ್ಲ. ಅವನಿಗೆ ಕುಸುಮಾಜಿಯ ಮೇಲೂ, ಅವಳನ್ನು ತನ್ನವಳನ್ನಾಗಿ ಮಾಡಿಕೊಳ್ಳುವ ಕಾರ್ಯದಲ್ಲಿ ಕಂಟಕನಾಗಿ ನಿಂತ ಗೋವಿಂದರಾಜನ ಮೇಲೂ ಬಹಳ ಕೋಪ ಉಂಟಾಗಿತ್ತು. ಅವರನ್ನು ಕೇವಲ ತನ್ನ ಕೋಪಮಾತ್ರದಿಂದಲೇ ದಹಿಸುವಂತೆ ಇದ್ದರೆ ಈ ವೇಳೆಗೆ ಎಂದೋ ಅವರನ್ನು ದಗ್ಧಗೊಳಿಸುತ್ತಿದ್ದ. ಆದರೆ ಗೋವಿಂದರಾಜನ ಮುಂದೆ ವಿಜಯಭದ್ರನ ಆಟ ನಡೆಯುತ್ತಿರಲಿಲ್ಲ. ಇದಕ್ಕೆ ಕುಸುಮಾಜಿಯ ಮನೆಯ ಪ್ರಕರಣವೇ ಸಾಕ್ಷಿಯಾಗಿತ್ತು.

ಗೋವಿಂದರಾಜನ ಮೇಲೆ ವಿಜಯಭದ್ರನಿಗೆ ಬಹುಕಾಲದ ಹಗೆತನ ಹೆಪ್ಪುಕಟ್ಟಿತ್ತು. ಕೃಷ್ಣದೇವರಾಯನ ದಿಗ್ವಿಜಯಗಳಲ್ಲಿ ರಾಯನ ಬಲಭುಜದಂತೆ, ಗೋವಿಂದರಾಜನು ನಿಂತು, ಅನೇಕ ವಿಜಯಗಳನ್ನು ಸಂಪಾದಿಸಿಕೊಟ್ಟು ಅವನ ಅನುಗ್ರಹಕ್ಕೆ ಪಾತ್ರನಾಗಿದ್ದ. ರಾಯಚೂರು ಯುದ್ಧದಲ್ಲಿ ಗೋವಿಂದರಾಜ ಬಹಳ ಪರಾಕ್ರಮದಿಂದ ಕಾದಾಡಿ ಎಲ್ಲರಿಂದ ಮನ್ನಣೆಯನ್ನು ಪಡೆದಿದ್ದ. ಅವನ ಶಕ್ತಿಸಾಮರ್ಥ್ಯಗಳಲ್ಲಿ ರಾಯನಿಗೆ ಎಷ್ಟು ನಂಬಿಕೆ ಇತ್ತೆಂದರೆ ಗೋವೆಯ ಯುದ್ಧದ ಸಮಸ್ತ ಜವಾಬ್ದಾರಿಯನ್ನೂ ಗೋವಿಂದರಾಜನಿಗೇ ವಹಿಸಲ್ಪಟ್ಟಿತ್ತು. ಈ ಯುದ್ಧದಲ್ಲಿ ಗೋವಿಂದರಾಜನು ಪ್ರಚಂಡ ವಿಜಯವನ್ನು ಸಂಪಾದಿಸಿ ತನ್ನ ಶಕ್ತಿಸಾಮರ್ಥ್ಯಗಳನ್ನು ಜಗತ್ತಿಗೆ ತೋರ್ಪಡಿಸಿದ್ದ. ಇದರಿಂದ ಸುಪ್ರಸನ್ನನಾದ ರಾಯನು ಗೋವಿಂದರಾಜನಿಗೆ ಅನೇಕ ಬಹುಮಾನಗಳನ್ನು ಇತ್ತುದಲ್ಲದೆ ಅವನನ್ನು ದುರ್ಗಾಧಿಪತಿಯನ್ನಾಗಿ ಮಾಡಿ ಗೌರವಿಸಿದ್ದ. ಈ ಸ್ಥಾನಕ್ಕೆ ಬರಬೇಕೆಂದು ವಿಜಯಭದ್ರನೂ ಬಹಳ ದಿನಗಳಿಂದ ಹೊಂಚುಹಾಕಿದ್ದ. ಆದರೆ ವಿಜಯಭದ್ರ ಬಂಧುವೆಂದು ಮಾರುಹೋಗದೆ, ರಾಯನು ಕೇವಲ ಯೋಗ್ಯತೆಗೇ ಮನ್ನಣೆ ಕೊಟ್ಟದ್ದುದು ವಿಜಯಭದ್ರನಿಗೆ ಗೋವಿಂದರಾಜನ ಮೇಲೆ ಅಪಾರ ಅಸೂಯೆ, ಹೊಟ್ಟೆಕಿಚ್ಚು ಉಂಟುಮಾಡಿತ್ತು. ಈಗ ಕುಸುಮಾಜಿಯನ್ನು

ಗೋವಿಂದರಾಜನು ತನ್ನವಳನ್ನಾಗಿ ಮಾಡಿಕೊಂಡಮೇಲಂತೂ ವಿಜಯ ಭದ್ರನ ಪ್ರಪ್ರಥಮಶತ್ರು ಗೋವಿಂದರಾಜನಾದ. ಹೇಗಾದರೂ ಮಾಡಿ ಗೋವಿಂದರಾಜನ ಕೈಯಿಂದ ಕುಸುಮಾಜಿಯನ್ನು ಅಪಹರಿಸಬೇಕು! ಒಮ್ಮೆ ಕುಸುಮೆ ತನ್ನ ಕೈಗೆ ಸಿಕ್ಕಿಬಿದ್ದಳೆಂದರೆ ಅಲ್ಲಿಗೆ ಗೋವಿಂದರಾಜನ ಸೊಕ್ಕೂ ದುರಹಂಕಾರವೂ ಅಡಗಿದಂತೆ. ಆದುದರಿಂದ ಕುಸುಮೆಯನ್ನು ಹೇಗಾದರೂ ಮಾಡಿ ತನ್ನವಳನ್ನಾಗಿ ಮಾಡಿಕೊಂಡು ಆ ಮೂಲಕ ಗೋವಿಂದರಾಜನ ಮೇಲೆ ಸೇಡು ತೀರಿಸಿಕೊಳ್ಳಬೇಕೆಂದು ನಿರ್ಧರಿಸಿದ ವಿಜಯಭದ್ರ.

ಈ ನಿರ್ಧಾರವನ್ನು ಕಾರ್ಯಗತಮಾಡಲು ತನ್ನ ವಿಶ್ವಾಸದ ಸೇವಕ ರಾಗಿದ್ದ ಭರಮನಾಯಕ, ಕೊರಮನಾಯಕರನ್ನು ಬರಮಾಡಿಕೊಂಡು ಅವ ರೊಡನೆ ಆಪ್ತಾಲೋಚನೆ ನಡಸಿದ.

ಭರಮನಾಯಕ, ಕೊರಮನಾಯಕರು ಅಣ್ಣತಮ್ಮಂದಿರು ಇವರು ಕೃಷ್ಣದೇವರಾಯನ ಊಳಿಗದಲ್ಲಿದ್ದ ಅಡಿವಪ್ಪನಾಯಕನ ಮಕ್ಕಳು. ಇವರ ಬಾಲ್ಯದಿಂದಲೂ ತಮ್ಮ ಪುಂಡಾಟಕ್ಕೆ ಪ್ರಸಿದ್ಧರಾಗಿದ್ದರು. ಅಂತಲೇ ಇವರು ವಿಜಯಭದ್ರನ ಅಚ್ಚುಮೆಚ್ಚಿನ ಭಂಟರಾಗಿದ್ದರು. ವಿಜಯಭದ್ರನು ಯಾವ ಕೆಲಸವಾದರೂ ಇವರೊಡನೆ ಆಪ್ತಾಲೋಚನೆ ಮಾಡದೆ ಮುಂದಡಿ ಇಡುತ್ತಿರಲಿಲ್ಲ. ಪುಂಡಾಟಗಳಿಗೆಂತೋ ಅಂತೇ ಕುಟಿಲ ನೀತಿಗಳಿಗೂ ಈ ಸೋದರರು ಪ್ರಸಿದ್ಧರಾಗಿದ್ದರು. ಅವರು ತನ್ನ ಭಂಟರಾಗಿರುವ ತನಕ ಈ ರಾಜಧಾನಿಯಲ್ಲಿ ತನಗೆ ಇದಿರಿಲ್ಲ ಎನ್ನುವ ನಂಬಿಕೆ ವಿಜಯಭದ್ರನದು. ಅಷ್ಟು ನಂಬಿಕೆಯಾದ, ಶಕ್ತಿ ಸಾಮರ್ಥ್ಯ ಉಳ್ಳ ಭಂಟರಾಗಿದ್ದರು—ಅವರು.

"ಆ ಒಂದು ಹೆಣ್ಣಿಗಾಗಿ ತಾವು ಇಷ್ಟು ಆತಂಕಗೊಳ್ಳಬೇಕೆ ಒಡೆಯ? ಅವಳನ್ನು ತಮ್ಮ ಪದರಿನಲ್ಲಿ ತಂದು ಹಾಕುವುದು ಅದೊಂದು ದೊಡ್ಡ ಸಾಹಸವೆ? ತಮ್ಮ ಕೃಪೆಗಾಗಿ ಹಂಬಲಿಸುವ ಸಾವಿರ ಹೆಣ್ಣುಗಳ ಕಡೆ ಕಣ್ಣೆತ್ತಿ ನೋಡದ ತಾವು ಆ ಹೆಣ್ಣಿಗೆ ಮನಸೋತುದೇ ಅವಳ ಪುಣ್ಯ. ತಾನಾಗಿ ಬಂದು ತಮ್ಮ ಕಾಲು ಹಿಡಿಯಬೇಕಾದ್ದು ಅವಳ ಧರ್ಮ. ಅವಳಿಗೆ ತಮ್ಮ ವಿಷಯ ಬಹುಶಃ ತಿಳಿದಿರಲಾರದು. ಅಂತಲೇ ಅವಳು ತಮ್ಮ ಕೃಪಾ ಕಟಾಕ್ಷವನ್ನು ಹೀಗೆ ತಿರಸ್ಕರಿಸಿರುವುದು....ಅವಳನ್ನು ತಮ್ಮ ಚರಣದಾಸಿ ಯನ್ನಾಗಿ ಮಾಡುವುದು ಎಷ್ಟು ಹೊತ್ತಿನ ಕೆಲಸ? ಪ್ರಭುಗಳಿಗೆ ಸಮಾನರಾ

ಗಿರುವ ತಮ್ಮ ಹೆಗ್ಗಳಿಕೆಯು ಅವಳಿಗೆ ತಿಳಿಯಿತೆಂದರೆ ಅವರು ತನ್ನ ಕೃತ್ಯಕ್ಕಾಗಿ ಪರಿತಪಿಸಿ, ತಾನಾಗಿ ಬಂದು ತಮ್ಮ ಕಾಲು ಹಿಡಿಯುತ್ತಾಳೆ. ಇದಕ್ಕಾಗಿ ತಾವು ಇಷ್ಟು ಚಿಂತಿಸಬೇಕೇ"

—ಎಂದು ಭರಮನಾಯಕ ಸಂತೈಸಿದ.

"ಭರಮನಾಯಕ, ನೀನು ಇಲ್ಲೇ ತಪ್ಪುಮಾಡುತ್ತಿರುವುದು. ಅವಳು ಎಲ್ಲರಂತೆ ಅಲ್ಲ—ಅವಳನ್ನು ಎಲ್ಲರೂ ತಿಳಿದಿರುವಂತೆ ಸಾಮಾನ್ಯ ವೇಶ್ಯಾಪುತ್ರಿಯಲ್ಲ. ಕಲೆಯಲ್ಲಿ, ರೂಪ, ಗುಣ ನಡವಳಿಕೆಗಳಲ್ಲಿ ಅವಳು ದೇವಾಂಗನೆಯೇ ಸರಿ. ಅವಳನ್ನು ಅಧಿಕಾರ ಶ್ರೀಮಂತಿಕೆಗಳ ಪ್ರಲೋಭಕ್ಕಾಗಲೀ, ಇನ್ನು ಬೇರೆಯ ರೀತಿಯ ಆಕರ್ಷಣೆಗಳಿಗಾಗಲೀ ಒಡ್ಡಿ ಒಲಿಸಿಕೊಳ್ಳುವುದು ಖಂಡಿತ ಸಾಧ್ಯವಿಲ್ಲ. ಅವಳು ಈಗಾಗಲೇ ಗೋವಿಂದರಾಜನ ಹೃದಯೇಶ್ವರಿಯಾಗಿದ್ದಾಳೆ. ಗೋವಿಂದರಾಜನ ರಕ್ಷಣೆಯಲ್ಲಿ ಇರುವ ಅವಳನ್ನು ನಮ್ಮ ಕೈವಶಮಾಡಿಕೊಳ್ಳುವುದೆಂದರೆ ಮಕ್ಕಳಾಟಿಕೆಯಲ್ಲ. ಅವಳ ಮೇಲೆ ಕೈಮಾಡುವುದೆಂದರೆ ಹುತ್ತಕ್ಕೆ ಕೈಹಾಕಿ ಕಾಳಿಂಗನ ಹೆಡೆಯನ್ನು ಹಿಡಿದಂತೆ. ಅಷ್ಟು ಅಪಾಯಕರ; ಆದುದರಿಂದ ಅವಳನ್ನು ವಶಪಡಿಸಿಕೊಳ್ಳಲು ನಾವು ಬೇರೆ ಯಾವುದಾದರೂ ಹೊಸ ಹಾದಿಯನ್ನೇ ಹಿಡಿಯಬೇಕಾಗಿದೆ" ಎಂದು ಕುಸುಮಾಜಿಯ ಬಗ್ಗೆ ಸೂಕ್ತ ವಿವರಣೆಯನ್ನು ಕೊಟ್ಟ ಮೇಲೆ ಭರಮನಾಯಕನಿಗೆ ಕುಸುಮಾಜಿಯ ಬಗ್ಗೆ ಇದ್ದ ಮೊದಲಿನ ಅಭಿಪ್ರಾಯ ಹಾರಿಹೋಯಿತು. ಅವಳನ್ನು ಉಪಾಯವಾಗಿ ತಮ್ಮ ಸಂಚಿಗೆ ಸಿಕ್ಕಿಸಿ, ಕಾರ್ಯಸಾಧಿಸಬೇಕೇ ಹೊರತು, ದುಡುಕಿದರೆ ಪ್ರಯೋಜನವಿಲ್ಲವೆಂದು ಮನದಟ್ಟಾಯಿತು. ಅವರು ಬಹುಕಾಲ ತಮ್ಮಲ್ಲೇ ಆಲೋಚಿಸಿ, ಕಡೆಗೆ ಯಾವುದೋ ಒಂದು ತಂತ್ರವನ್ನು ಸಿದ್ಧಪಡಿಸಿದರು. ಅದನ್ನು ಕಾರ್ಯಗತಮಾಡುವ ಜವಾಬ್ದಾರಿಯನ್ನು ಆ ಅಣ್ಣತಮ್ಮಂದಿರಿಗೇ ವಹಿಸಿಕೊಡುತ್ತ ವಿಜಯಭದ್ರನು ಹೇಳಿದ. "ಹಣದ ಬಗ್ಗೆ ನೀವು ಆಲೋಚಿಸಬೇಡಿ. ನಿಮ್ಮ ಕೈಗಾವಲಿಗೆಂದು ಸಹಸ್ರ ವರಹಗಳ ಈ ಥೈಲಿಯನ್ನು ಇಟ್ಟುಕೊಂಡಿರಿ. ಬೇರೆ ಹಣ ಬೇಕಾದರೆ ಬಂದು ಭಂಡಾರಿಯಿಂದ ಪಡೆದುಕೊಳ್ಳಿ. ಯಾವುದಕ್ಕೂ ಸಂಕೋಚಪಡಬೇಡಿ. ಹಣ ಎಷ್ಟು ಖರ್ಚಾದರೂ ಚಿಂತೆ ಇಲ್ಲ. ಎಷ್ಟು ಜನ ಸಿಬ್ಬಂದಿ ಬೇಕೋ ಅಷ್ಟು ಜನ ಸಿಬ್ಬಂದಿ

ಯನ್ನು ಕೊಡುತ್ತೇನೆ. ಮುಖ್ಯ ಕೆಲಸ ಸಾಧಿಸಬೇಕು. ಪ್ರಾಣದ ಮೇಲೆ ಆಸೆ ಬಿಟ್ಟು ಕೆಲಸ ಸಾಧಿಸಿಕೊಟ್ಟರೆ ಆಗ ನಿಮಗೆ ಮಾಡುವ ಮರ್ಯಾದೆ, ಕೊಡುವ ಮೆಚ್ಚು, ಸಂಭಾವನೆ—ಮುಂದೆ ನಿಮಗೇ ತಿಳಿಯುತ್ತದೆ. ನೀವು ಆದಷ್ಟು ಎಚ್ಚರಿಕೆಯಿಂದ, ಯಾವ ಗದ್ದಲಕ್ಕೂ ಅವಕಾಶ ಕೊಡದ ರೀತಿಯಲ್ಲಿ ನಿಮ್ಮ ಕೆಲಸ ಸಾಧಿಸಬೇಕು. ಇದರಲ್ಲಿ ನಿಮ್ಮ ಕಾರ್ಯಕುಶಲತೆ, ಜಾಣ್ಮೆಗಳು ತಿಳಿಯುತ್ತದೆ. ಇದರಲ್ಲಿ ನೀವು ಗೆದ್ದು ಬಂದರೆ ನಿಮ್ಮ ಮನೆಗೆ ಹೊನ್ನಿನ ಕೋಡಿಯೇ ಹರಿಯುತ್ತದೆ, ಸೋತು ಬಂದರೆ ನಿಮ್ಮ ತಲೆಗಳು ಉರುಳಿ ನಾಯಿ ನರಿಗಳ ಪಾಲಾಗುತ್ತವೆ. ಇದು ಖಂಡಿತ" ಎಂದು ಹುರಿದುಂಬಿಸಿ, ಎಚ್ಚರಿಸಿ, ಅವರನ್ನು ಕಾರ್ಯಾಚರಣೆಗೆ ಕಳುಹಿಸಿಕೊಟ್ಟು, ಇನ್ನು ಕುಸುಮೆ ತನ್ನವಳಾದಂತೆಯೇ ಸರಿ—ಎಂದುಕೊಳ್ಳುತ್ತಾ ಹಂಸತೂಲಿಕಾತಲ್ಪದ ಮೇಲೆ ಮೈಚಾಚಿದ. ಅವನು ಆ ರಾತ್ರಿಯೆಲ್ಲ ಕುಸುಮೆ ತನ್ನವಳಾದಂತೆಯೇ ಕನಸು ಕಂಡ.

ಭರಮನಾಯಕ ಕೊರಮನಾಯಕರು, ವಿಜಯಭದ್ರನ ಆವಾಸದಿಂದ ಹೊರಬಿದ್ದ ಮೇಲೆ ತಮ್ಮ ಅನುಚರರೊಡನೆ ಕಲೆತು ಮಾತನಾಡಿ, ಆ ದಿನ ರಾತ್ರಿಯೇ ಕುಸುಮಾಜಿಯ ಅಪಹರಣಕ್ಕೆ ಪ್ರಥಮ ಪ್ರಯತ್ನ ನಡಸಬೇಕೆಂದು ನಿರ್ಧರಿಸಿದರು.

ಅದರಂತೆ ಕುಸುಮಾಜಿಯ ಮನೆಯ ಒಳಗೆ ಬಂದಾಗ ಅವರಿಗೆ ತುಂಬ ನಿರಾಶೆಯಾಯಿತು. ಆ ದಿನ ರಾತ್ರಿ ಕುಸುಮಾಜಿಯ ಮನೆಯನ್ನು ಸುಮಾರು ನೂರು ಮಂದಿ ಶಸ್ತ್ರಸಜ್ಜಿತ ಸೈನಿಕರು ಪಹರೆ ಕಾಯುತ್ತಿದ್ದರು. ಅವರ ಮುಂದೆ ತಮ್ಮ ಆಟ ನಡೆಯುವುದಿಲ್ಲವೆಂದು, ಬಂದವರು ಬಂದ ದಾರಿಗೆ ಸುಂಕವಿಲ್ಲವೆಂದು ಹಿಂದಿರುಗಬೇಕಾಯಿತು.

ಕುಸುಮಾಜಿಯ ಮನೆಯನ್ನು ರಾತ್ರಿ ಮುತ್ತುವುದಂತೂ ದೂರ ಸರಿಯಿತು. ಇನ್ನು ಬೇರೆ ದಾರಿಯನ್ನು ಹುಡುಕಿ, ಕುಸುಮೆಯನ್ನು ಹಾರಿಸಲು ಆಲೋಚಿಸಿ ಸದ್ಯಕ್ಕೆ ಸುಮ್ಮನಾಗಬೇಕಾಯಿತು.

ಅಂದು ವಿಜಯಭದ್ರನು ಕುಸುಮೆಯ ಇದಿರಿನಲ್ಲೇ ಪಣವೊಡ್ಡಿ ಪರತ್ತಿನಿಂದ ಹೊರಟುಹೋದಮೇಲೆ ಹೀಗೆಲ್ಲ ಆಗಬಹುದೆಂದು ಈ ಮೊದಲೇ ಆಲೋಚಿಸಿದ್ದ ಗೋವಿಂದರಾಜ ಕುಸುಮೆಯ ರಕ್ಷಣೆಯ ಭಾರವನ್ನು ಮೈ

ಮೇಲೆ ತೆಗೆದುಕೊಂಡಿದ್ದ. ಅದಕ್ಕೆ ಏನೆಲ್ಲ ವ್ಯವಸ್ಥೆ ನಡೆಯಬೇಕೋ ಅಷ್ಟೆಲ್ಲ ವ್ಯವಸ್ಥೆ ನಡಸಿ, ಮುಂಜಾಗ್ರತೆಯ ಕ್ರಮಗಳನ್ನು ತೆಗೆದುಕೊಂಡಿದ್ದ. ಇದರಿಂದಾಗಿ ಕೊರಮನಾಯಕ ಭರಮನಾಯಕರ ಯಾವ ಪ್ರಯತ್ನವೂ ಫಲಕ್ಕಾರಿಯಾಗಲಿಲ್ಲ. ಹೀಗಾಗಿ ಅವರು ಕುಸುಮೆಯನ್ನು ಕೈಸೆರೆ ಹಿಡಿಯುವ ಆಸೆ ತೊರೆಯಬೇಕಾಯಿತು.

ಒಂದು ದಿನ ನಡುಹಗಲಿನಲ್ಲಿ ಕುಸುಮೆಯ ಮನೆಯ ಮುಂದೆ ಸಾಮುದ್ರಿಕ ಶಾಸ್ತ್ರವನ್ನು ಹೇಳುವ ಭೈರಾಗಿಯೊಬ್ಬನು ಬಂದು ನಿಂತ. ಮನೆಯ ಹೊರ ಚಾವಡಿಯಲ್ಲಿದ್ದ ಬಾಗಿಲಾಳಿನೊಂದಿಗೆ ಯಾವುದೋ ಅರ್ಥವಾಗದ ಭಾಷೆಯಲ್ಲಿ ಏನೇನೋ ಒದರುತ್ತಿದ್ದ. ಅವನ ಮಾತುಗಳನ್ನು ಅರ್ಥಮಾಡಿಕೊಳ್ಳಲಾಗದೆ ಪಹರೆಯಾಳು ತನ್ನ ನೆರವಿಗೆ ಬೀದಿಯಲ್ಲಿ ಹೋಗುತ್ತಿದ್ದ ಪಥಿಕನೊಬ್ಬನನ್ನು ಕರೆದು ಕೇಳಬೇಕಾಯಿತು. ಅವನು ಈ ಭೈರಾಗಿಯು ಒಬ್ಬ ಸುಪ್ರಸಿದ್ಧ ವಿದ್ವಾಂಸನೆಂದೂ, ಒಳ್ಳೆ ಹಠಯೋಗಿಯೆಂದೂ, ಅವನು ತ್ರಿಕಾಲ ಜ್ಞಾನಿಯೆಂದೂ, ಭೂತಭವಿಷತ್‌ವರ್ತಮಾನಗಳನ್ನು ಚಾಚೂ ಬಿಡದೆ ಇದ್ದುದನ್ನು ಇದ್ದಂತೆ ಹೇಳುವನೆಂದೂ, ಈ ಮನೆಯೊಡತಿಗೆ ಗ್ರಹಗತಿ ನೆಟ್ಟಗಿಲ್ಲವೆಂದೂ, ಮನೆಯನ್ನು ನೋಡುತ್ತಲೇ ತಿಳಿದುಕೊಂಡು ಅದಕ್ಕೆ ಸೂಕ್ತ ಪರಿಹಾರ ತಿಳಿಸಲು ತಾನು ಬಂದಿರುವುದಾಗಿಯೂ, ಮನೆಯೊಡತಿಯ ಭೇಟಿ ಮಾಡಿಸಬೇಕೆಂದು ಕೋರುತ್ತಿರುವನೆಂದೂ ತಿಳಿಸಿದ.

ಪಹರೆಯಾಳಿಗೆ ಆ ದಾರಿಹೋಕನ ಮಾತಿನಲ್ಲಿ ನಂಬಿಕೆ ಹುಟ್ಟಿತೆಂದು ತೋರುತ್ತದೆ. ಅವನು ಈ ಸಮಾಚಾರವನ್ನು ತನ್ನ ಒಡತಿಗೆ ತಿಳಿಸಲು ಮನೆಯ ಒಳಕ್ಕೆ ಹೋದ. ಒಳಗೆ ಹೋದ ಕೆಲವು ಹೊತ್ತಿನ ಮೇಲೆ, ಭೈರಾಗಿಯನ್ನು ಒಳಗೆ ಕರೆದೊಯ್ಯಲು ದಾಸಿಯೊಂದಿಗೆ ಬಂದು ನೋಡುತ್ತಾನೆ! ಹೊರಗೆ ಯಾರೂ ಕಣ್ಣಿಗೆ ಬೀಳಲಿಲ್ಲ! ಆ ಭೈರಾಗಿ ಎಲ್ಲಿ ಅದೃಶ್ಯನಾದನೆಂದು ವಿಸ್ಮಯವಾಯಿತು. ಅವನು ನಿಜವಾದ ಸನ್ಯಾಸಿಯೇ, ಇಲ್ಲ, ಛದ್ಮವೇಷಧಾರಿಯೇ ಎಂದು ತಿಳಿಯದೆ, ಅವನಿಗಾಗಿ ಹುಡುಕಿದ. ಎಲ್ಲೂ ಆ ಭೈರಾಗಿಯು ಪತ್ತೆಯಾಗಲಿಲ್ಲ. ಯಾರೋ ಸುದ್ದಿ ಕೊಟ್ಟರು. ಆ ಭೈರಾಗಿ ಬೀದಿಯ ಇನ್ನೊಂದು ಕೊನೆಯಲ್ಲಿ ಶಾಸ್ತ್ರ ಹೇಳುತ್ತಿರುವುದನ್ನು ಯಾರೋ ನೋಡಿದರೆಂದು. ಅವನನ್ನು ಮತ್ತೆ ಯಾರು ನೋಡಿದರೆಂಬುದೂ

ತಿಳಿಯಲಿಲ್ಲ. ಎಲ್ಲರೂ ಈ ವಿಷಯವನ್ನು ಕೆಲವು ಕಾಲ ಚರ್ಚಿಸಿ, ಅನಂತರ ಮರೆತುಬಿಟ್ಟರು.

ಆ ದಿನ ರಾತ್ರಿ ಕಳೆದು ಬೆಳಗಾಯಿತು. ಬೆಳಗಿನೊಡನೆ ಭಯಂಕರವಾದ ವಾರ್ತೆಯೂ ಹೊರಬಿತ್ತು. ಕುಸುಮಾಜಿ ಮಲಗುತ್ತಿದ್ದ ಕಿರುಮನೆಯ ಮೇಲ್ಛಾವಣಿಯಿಂದ ಕಳ್ಳರು ಒಳಗೆ ನುಗ್ಗಿ, ಕುಸುಮಾಜಿಯನ್ನು ಬಲಾತ್ಕಾರವಾಗಿ ಎಲ್ಲಿಗೋ ಹೊತ್ತುಕೊಂಡು ಹೋಗಿದ್ದಾರೆ, ಎಂಬ ಸಂಗತಿ ಎಲ್ಲರ ಬಾಯಲ್ಲಿ ಇತ್ತು. ಆಕಸ್ಮಿಕವಾಗಿ ಒದಗಿದ ಈ ಚೌರ್ಯಕ್ಕೂ ಆ ದಿನ ಮಧ್ಯಾಹ್ನ ಬಂದಿದ್ದ ಭೈರಾಗಿಗೂ ಏನೋ ಸಂಬಂಧವಿರಬೇಕೆಂದು ಎಲ್ಲರೂ ಊಹಿಸಿದರು. ಈ ಮಧ್ಯೆ ಕುಸುಮಾಜಿಯ ಸಜ್ಜೆಮನೆಯ ದಾಸಿಯೋರ್ವಳು ಕಣ್ಮರೆಯಾದುದೂ ಹೊರಬಿತ್ತು. ಅವಳೂ, ಈ ಕಪಟ ಭೈರಾಗಿಯೂ ಸೇರಿ ಸಂಚುಮಾಡಿ, ಕುಸುಮಾಜಿಯನ್ನು ಅಪಹರಿಸಿದ್ದಾರೆಂದು ಮನೆಯವರೆಲ್ಲರೂ ತುಂಬಾ ಶೋಕತಪ್ತರಾದರು. ಆದರೆ ತಿಪ್ಪಾಜಿ ಮಾತ್ರ ಮಗಳನ್ನು ಕಳೆದುಕೊಂಡಿದ್ದರೆ ಎಷ್ಟು ದುಃಖಪಡುತ್ತಿದ್ದಳೋ ಅಷ್ಟು ದುಃಖಪಡಲಿಲ್ಲ. ಅವಳು ಮುಗುಡದ ಮೋರೆ ಹೊತ್ತು ಗಂಭೀರವಾಗಿ ಕುಳಿತುಬಿಟ್ಟದ್ದು ಎಲ್ಲರಿಗೂ ವಿಸ್ಮಯಕ್ಕೆ ಕಾರಣವಾಗಿತ್ತು.

ಅವರು ವಿಸ್ಮಯಪಡುವ ಕಾರಣವಿರಲಿಲ್ಲ. ನಿಜವಾದ ಕುಸುಮಾಜಿ ಅಪಹೃತಳಾಗಿದ್ದರೆ ತಾನೇ ತಿಪ್ಪಾಜಿಗೆ ದುಃಖವಾಗಬೇಕಾದರೆ? ನಿಜವಾದ ಕುಸುಮಾಜಿ, ಗೋವಿಂದರಾಜನ ಪ್ರಮೋದಭವನದಲ್ಲಿ ಇದ್ದಳು. ಅವಳು ಈ ಸುದ್ದಿಯನ್ನು ಕೇಳಿ ಕೇಕೆ ಹಾಕಿ ನಕ್ಕಳು. ಈ ಬಗೆಯ ಅಪಹಾರವನ್ನು ಪೂರ್ವಭಾವಿಯಾಗಿ ಕಲ್ಪಿಸಿದ್ದ ಗೋವಿಂದರಾಜನ ಮುಂಜಾಗ್ರತೆಯನ್ನು ಕಂಡು ಅವಳಿಗೆ ಅಚ್ಚರಿಯಾಯಿತು. ಅದೇ ವಿಷಯದ ಬಗ್ಗೆ ಅಲ್ಲಿ ಮಾತು ನಡಸಿರಬೇಕಾದರೆ, ತಿಪ್ಪಾಜಿ ಬಂದು ಅವರ ಮಾತಿಗೆ ಸೇರಿಕೊಂಡಳು. ಅವಳು ಮತ್ತೆ ಕೆಲವು ವಿವರಗಳನ್ನು ಈ ಬಾರಿ ತಂದಿದ್ದಳು.

ಅಪಹೃತಳಾದ ಹೆಣ್ಣು ಕುಸುಮಾಜಿಯಲ್ಲ, ನಗರದ ವೇಶ್ಯೆಯೊಬ್ಬಳು ಎಂಬುದು ಪತ್ತೆಯಾಯಿತಂತೆ. ಅವಳನ್ನು ನಿದ್ರಿಸುತ್ತಿರುವಂತೆಯೇ ಕಣ್ಣಿಗೆ ಬಟ್ಟೆಕಟ್ಟಿ, ಬಾಯಿಗೆ ಬಟ್ಟೆ ತುರುಕಿ ಮನೆಯಿಂದ ಹೊರಗೆ ಸಾಗಿಸಿದ ದುರಾತ್ಮರಲ್ಲಿ ಆ ಮನೆಯಲ್ಲಿ ಕೆಲಸ ಮಾಡುತ್ತಿದ್ದ ಒಬ್ಬ ದಾಸಿ ಮತ್ತು

ಮಧ್ಯಾಹ್ನದಲ್ಲಿ ಬಂದಿದ್ದ ಜೈರಾಗಿ ಇಬ್ಬರೂ ಇದ್ದರಂತೆ. ಅವರುಗಳು ಪೂರ್ವ ಭಾವಿಯಾಗಿ ಸಿದ್ಧಪಡಿಸಿದ್ದ ತಂತ್ರದಂತೆ, ಆ ವೇಶ್ಯೆಯನ್ನು ಕುಸುಮಾಜಿ ಎಂದು ಮೋಸಹೋಗಿ, ಅಪಹರಿಸಿ ವಿಜಯಭದ್ರನಿಗೆ ಒಪ್ಪಿಸಿದರು. ವಿಜಯ ಭದ್ರನು ಕುಸುಮಾಜಿಯನ್ನು ಎರಡು ಬಾರಿ ಚೆನ್ನಾಗಿ ನೋಡಿದ್ದುದರಿಂದ, ಈ ಅಪಹೃತಮಹಿಳೆ ಕುಸುಮಾಜಿಯಲ್ಲವೆಂದೂ, ಯಾರೋ ತಮ್ಮನ್ನು ಮೋಸಪಡಿಸಿರಬೇಕೆಂದೂ ಆರ್ಭಟಿಸಿ, ಅವಳನ್ನು .ತಂದವರನ್ನು ಬೈದು ಹೊರಗೆ ಅಟ್ಟಿದನಂತೆ. ಅನಂತರ, ಆ ನಿರ್ಭಾಗ್ಯ ಹೆಣ್ಣನ್ನೂ ಹೊರಗೆ ದಬ್ಬಿದನಂತೆ. ಈಗ ತಮ್ಮ ಮೋಸಕ್ಕೆ ಪ್ರತಿಯಾಗಿ ನಡೆದ ಮೋಸದಿಂದ ವಿಜಯಭದ್ರನು ತುಂಬಾ ಕ್ಷುಬ್ಧನಾಗಿರುವನೆಂದೂ, ಗೋವಿಂದರಾಜ ಹಾಗೂ ಕುಸುಮೆಯರ ಮೇಲೆ ಹಲ್ಲುಕಡಿಯುತ್ತಲಿರುವನೆಂದೂ ಸುದ್ದಿ ಬಂದಿತ್ತು. ಅದನ್ನು ತಿಳಿಸಲೆಂದೇ ತಿಪ್ಪಾಜಿ ಅಲ್ಲಿಗೆ ಬಂದುದು.

ಪರಸ್ಪರ ವಿಚಾರವಿನಿಮಯವಾದ ಮೇಲೆ ತಿಪ್ಪಾಜಿ ಗೋಪ್ಯವಾಗಿಯೇ ತನ್ನ ಮನೆಗೆ ಹೊರಟುಹೋದಳು.

ಇದರಿಂದ ಒಂದು ವಿಷಯ ನಿರ್ಧಾರವಾಯಿತು. ಗೋವಿಂದರಾಜನು ವೃಥಾ ತಮ್ಮ ರಕ್ಷಣೆಯ ಬಗೆಗೆ ಇಷ್ಟೆಲ್ಲ ತೊಂದರೆ ತೆಗೆದುಕೊಳ್ಳುತ್ತಿರುವನೆಂದು ತಿಪ್ಪಾಜಿ ಕುಸುಮೆಯರು ತಿಳಿದಿದ್ದರು. ಅವುಗಳು ಮುಂಜಾಗ್ರತೆಕ್ರಮಗಳು ಮಾತ್ರವಲ್ಲ. ತಮ್ಮನ್ನು ಶೋಧಿಸಿಕೊಂಡು ಹಿಂದೆ ಬರುತ್ತಿರುವ ವಿಜಯ ಭದ್ರನ ಬೇಟೆನಾಯಿಗಳ ಜಾಡನ್ನು ತಪ್ಪಿಸಲು ಕೈಗೊಂಡಿರುವ ಮಾರ್ಗಗಳು ಇವು ಎನ್ನುವುದೂ ತಿಳಿಯಿತು. ಇದರಿಂದ ಗೋವಿಂದರಾಜನ ವಿಷಯದಲ್ಲಿ ಅವರ ಅಭಿಮಾನ ಗೌರವಗಳು ಇಮ್ಮಡಿಸಿದುವು. ಅವರು ಇನ್ನುಮೇಲೆ ಆದಷ್ಟು ಎಚ್ಚರವಾಗಿರಲು ಪ್ರಯತ್ನಿಸಿದರು.

ವಿಜಯಭದ್ರನಿಗೆ ಈ ಘಟನೆಯಿಂದ ತುಂಬ ನಿರಾಶೆಯಾಗಿತ್ತು. ಕೈಗೆ ಸಿಗುವಂತೆ ಒಮ್ಮೆ ತೋರಿ ಮತ್ತೆ ಪಕ್ಕನೆ ತಪ್ಪಿಸಿಕೊಂಡ ಕುಸುಮೆಯ ಹಾಗೂ ಗೋವಿಂದರಾಜನ ಜಾಣ್ಮೆಯನ್ನು ಪ್ರಶಂಸಿಸುವಂತೆ ಆಯಿತು. ಆದರೂ, ತನ್ನ ಕೋರಿಕೆ ಈಡೇರದೆ ಹೋದುದಕ್ಕಾಗಿ ಅವನಿಗೆ ತುಂಬ ವ್ಯಾಕುಲವುಂಟಾಗಿತ್ತು. ಈಗ ಮತ್ತೊಂದು ಸಮಸ್ಯೆಯುಂಟಾಗಿತ್ತು. ಕುಸು ಮಾಜಿಯ ಮನೆ ಎಂದು ಹೇಳಲಾಗಿದ್ದ ಆ ಮನೆಯಲ್ಲಿ ಈಗ ಕುಸುಮಾಜಿ

ವಾಸಿಸುತ್ತಿಲ್ಲ. ಅವಳು ಬೇರೆಲ್ಲೋ ಇರುವಳೆಂಬುದು ಸ್ಪಷ್ಟವಾಗಿತ್ತು. ಕುಸುಮೆ ಈ ಮನೆಯಲ್ಲಿ ಇಲ್ಲದ ಮೇಲೆ ಅವಳು ಇರುವುದಾದರೂ ಎಲ್ಲಿ? ಎಂಬ ಪ್ರಶ್ನೆ ವಿಜಯಭದ್ರನ ಎದುರು ಬಂದಿತ್ತು. ಅವಳು ಗೋವಿಂದರಾಜನ ಮನೆಯಲ್ಲಿ ಇದ್ದಾಳೋ, ತಿಮ್ಮರಸನ ಮನೆಯಲ್ಲಿ ಇದ್ದಾಳೋ ಇಲ್ಲವೇ ಬೇರೊಂದು ಸುರಕ್ಷಿತವಾದ ಪ್ರದೇಶಕ್ಕೆ ಸಾಗಿಸಲ್ಪಟ್ಟಿರುವಳೋ ಎನ್ನುವುದು ಅವನಿಗೆ ತಿಳಿಯದಾಗಿತ್ತು. ಮೊದಲು ಕುಸುಮೆಯ ನೆಲೆಯನ್ನು ಪತ್ತೆಮಾಡಬೇಕಾಗಿತ್ತು. ಅನಂತರ ಅವಳನ್ನು ತಮ್ಮ ಬಲೆಯಲ್ಲಿ ಕೆಡಹುವ ಕೆಲಸ ಎಂದುಕೊಂಡು, ಭರಮನಾಯಕ, ಕೊರಮನಾಯಕರನ್ನು ಕರೆಸಿ ಕುಸುಮೆಯನ್ನು ಪತ್ತೆಮಾಡಿಕೊಂಡು ಬರಲು ಅಟ್ಟಿದ.

ಕುಸುಮೆಯ ಶೋಧನೆಗೆ ಹೊರಟ ಗುಪ್ತಚಾರರು ಚಿತ್ರವಿಚಿತ್ರವಾದ ಸುದ್ದಿಯನ್ನು ತಂದರು. ಕೆಲವರು ರಾಜಧಾನಿಯಲ್ಲಿ ಕುಸುಮೆ ಇಲ್ಲವೆಂದೂ, ಮತ್ತೆ ಕೆಲವರು ಚಂದ್ರಗಿರಿಯಲ್ಲಿ ಬಚ್ಚಿಡಲ್ಪಟ್ಟಿರುವಳೆಂದೂ, ಮತ್ತೆ ಕೆಲವರು ತಾಯಿ ಮಕ್ಕಳಿಬ್ಬರೂ ವಿಜಯಭದ್ರನ ಉಪಟಳಕ್ಕೆ ಹೆದರಿ ರಾಜಧಾನಿಯನ್ನು ಬಿಟ್ಟು ಹೊರಟುಹೋದರೆಂದೂ ಸುದ್ದಿ ತಂದರು. ಒಟ್ಟಿನಲ್ಲಿ ತಿಪ್ಪಾಜಿ ಕುಸುಮೆಯರು ನಗರವನ್ನು ಬಿಟ್ಟು ತಮ್ಮ ತವರೂರಾದ ಶ್ರೀರಂಗಪಟ್ಟಣಕ್ಕೆ ಪ್ರಯಾಣ ಬೆಳೆಸಿದರೆಂಬುದನ್ನು ಅನೇಕ ಕಡೆಗಳಿಂದ ಬಂದ ವಾರ್ತೆಗಳ ಕ್ರೋಢೀಕೃತ ಅಂಶವಾಗಿತ್ತು. ಹಾಗಾದರೆ ಕುಸುಮಾಜಿ ತನ್ನ ತಾಯಿಯೊಡನೆ ಶ್ರೀರಂಗಪಟ್ಟಣಕ್ಕೆ ಪ್ರಯಾಣ ಬೆಳೆಸಿಬಿಟ್ಟಳೆ? ಎಂದು ವಿಜಯಭದ್ರ ಹಲವು ಬಾರಿ ಪ್ರಶ್ನಿಸಿಕೊಂಡಿದ್ದ. ಅವನಿಗೆ ಹೌದು ಎಂದು ಉತ್ತರ ಕೊಡಲು ಮನಸ್ಸಾಗಲಿಲ್ಲ. ಕುಸುಮೆ ಇನ್ನೂ ನಗರದಲ್ಲಿಯೇ ಇದ್ದುಕೊಂಡು, ತಮ್ಮನ್ನು ದಿಕ್ಕು ತಪ್ಪಿಸಲು ಈ ಸುಳ್ಳು ಸುದ್ದಿಯನ್ನು ಹರಡಿರಬಹುದೇ ಎಂದು ಒಮ್ಮೊಮ್ಮೆ ಸಂದೇಹವಾಗುತ್ತಿತ್ತು. ಈ ವಾರ್ತೆಯ ಮೂಲವನ್ನು ಶೋಧಿಸಲು ವಿಜಯಭದ್ರನೇ ರಂಗಕ್ಕೆ ಇಳಿದ.

ಅವನ ಕುಶಾಗ್ರ ಬುದ್ಧಿಗೆ ತಟ್ಟನೆ ಒಂದು ಆಲೋಚನೆ ಹೊಳೆಯಿತು. ಈ ದಾರಿಯಲ್ಲಿ ಹೋದರೆ ಕುಸುಮಾಜಿಯ ಬಗ್ಗೆ ಖಚಿತವಾದ ಮಾಹಿತಿ ದೊರೆಯುವುದೆಂದು ನಿರ್ಧಾರವಾಯಿತು. ಅವನು ತನ್ನ ಚತುರತೆಯನ್ನು ತಾನೇ ಮೆಚ್ಚಿಕೊಳ್ಳುತ್ತಾ, ನಾಟ್ಯಾಚಾರ್ಯರಾದ ಭರತಾಚಾರ್ಯರನ್ನು

ಹುಡುಕಿಕೊಂಡು ಅವರ ಮನೆಗೆ ಹೊರಟ.

ಅವರನ್ನು ಕುಸುಮೆಯ ಬಗ್ಗೆ ವಿಚಾರಿಸಿದರೆ ಅವಳು ನಗರದಲ್ಲಿ ಇರುವುದೂ ಇಲ್ಲದುದೂ ತಿಳಿಯುವುದೆಂದೂ, ಒಂದು ವೇಳೆ ಅವಳು ನಗರದಲ್ಲಿ ಇರುವುದು ದಿಟವೇ ಆದರೆ, ಅವಳ ವಿಳಾಸವನ್ನು ಅವರಿಂದ ಪತ್ತೆ ಮಾಡಬಹುದೆಂದೂ, ಈ ಗುರುಶಿಷ್ಯರ ಅಪೂರ್ವ ಸಂಬಂಧವನ್ನು ಕಂಡುಕೊಂಡಿದ್ದ ವಿಜಯಭದ್ರನಿಗೆ ಹೊಳೆಯಿತು.

ವಿಜಯಭದ್ರನಿಗೆ ಭರತಾಚಾರ್ಯರ ಪರಿಚಯ ಅಷ್ಟು ಗಾಢವಾಗಿರಲಿಲ್ಲ. ಒಂದೆರಡು ಬಾರಿ ಅವರು ಪರಸ್ಪರ ಭೇಟಿಮಾಡಿದ್ದರೂ, ವಿಜಯಭದ್ರ ಹಿಂದೆಂದೂ ಬಂದಿರಲಿಲ್ಲ. ಅಂತಹ ವಿಶೇಷವಾದ ಸ್ನೇಹ ಅವರಿಬ್ಬರ ನಡುವೆ ಏರ್ಪಡಲು ಕಾರಣವೇ ಇರಲಿಲ್ಲ. ಇಬ್ಬರಿಗೂ ಮುಖಪರಿಚಯವಿತ್ತು ಇಂದು ಅದನ್ನೇ ದೊಡ್ಡದುಮಾಡಿಕೊಂಡು, ವಿಜಯಭದ್ರ ಸ್ವಾರ್ಥಸಾಧನೆಗಾಗಿ ಅವರ ಬಡಕುಟೀರಕ್ಕೆ ಬಂದಿದ್ದ.

ಭರತಾಚಾರ್ಯರು ಸ್ನಾನಸಂಧ್ಯಾವಂದನೆಗಳನ್ನು ಮುಗಿಸಿ, ಯಾವುದೋ ತಾಳೇಗರಿಯ ಗ್ರಂಥವನ್ನು ಓದುತ್ತ ಹಜಾರದಲ್ಲಿ ಕುಳಿತಿದ್ದರು.

ವಿಜಯಭದ್ರನನ್ನು ಕಾಣುತ್ತಲೇ ಓದುವುದನ್ನು ಬಿಟ್ಟೆದ್ದು, "ಓಹೋ ಶ್ರೀಮಂತರ ಸವಾರಿ ಇತ್ತ ದಯಮಾಡಿಸಿದ್ದು. ನಮ್ಮ ಪುಣ್ಯವಿಶೇಷವೇ ಸರಿ ....ಬರಬೇಕು, ಬಡವರ ಮನೆಗೆ ಭಾಗ್ಯದೇವತೆ ಬಂದಂತೆ ಬಂದಿದ್ದೀರಿ" ಎಂದು ಒಳಗೆ ಕರೆದುಕೊಂಡು ಹೋಗಿ, ಉಪಚರಿಸಿ, ಉಚಿತಾಸನದಲ್ಲಿ ಕೂಡಿಸಿ, ಅವನ ಕುಶಲಪ್ರಶ್ನೆ ಮಾಡಿ ಸತ್ಕರಿಸಿ ಅವರ ಆಗಮನ ವೃತ್ತಾಂತವನ್ನು ವಿಚಾರಿಸಿದರು.

ವಿಜಯಭದ್ರನು ಕಪಟವಿಶ್ವಾಸವನ್ನೂ ಗುರುಭಕ್ತಿಯನ್ನೂ ನಟಿಸುತ್ತ ನೇರ ವಿಷಯಪ್ರಸ್ತಾಪಕ್ಕೆ ಬಂದ.

"ಹೌದೇ ಗುರುಗಳೇ? ಕುಸುಮಾಜಿ ಮಹಾಪ್ರಭುಗಳನ್ನು ಸಂದರ್ಶಿಸದೆ ಶ್ರೀರಂಗಪಟ್ಟಣಕ್ಕೆ ಹೊರಟುಹೋದಳಂತೆ. ಹೌದೆ?"

ಈ ಮಾತು ಕೇಳಿ ಗುರುಗಳು ಕ್ಷಣಕಾಲ ಬೆರಗಾಗಿ, ಅನಂತರ ನಗುತ್ತ ಹೇಳಿದರು. "ಈ ಸುಳ್ಳು ಸುದ್ದಿಯನ್ನು ನಿಮಗೆ ಯಾರು ಹೇಳಿದರು?"

"ಏನು ಇದು ಸುಳ್ಳುಸುದ್ದಿಯೆ?"

"ಸುಳ್ಳಲ್ಲದೆ ಮತ್ತೇನು ? ನಾನು ನಿನ್ನೆಯಷ್ಟೇ ಕುಸುಮಾಜಿಯನ್ನು ೋಡಿಕೊಂಡು ಬಂದೆ. ಅವಳು ಹೊರಡುವ ವಿಷಯವನ್ನೇ ನನ್ನೊಡನೆ ೇಳಲಿಲ್ಲ ?"

"ಹಾಗಾದರೆ...."ಎಂದು ರಾಗ ಎಳೆಯುತ್ತ ಹೇಳಿದ...."ಹಾಗಾದರೆ ುಸುಮಾಜಿಯವರು ರಾಜಧಾನಿಯಲ್ಲೇ ಇರುವುದು ನಿಜ. ಹಾಗಿ ್ದರೆ ತುಂಬಾ ಸಂತೋಷ. ನನಗೆ ಅವರು ಹೊರಟು ಹೋದರೆಂದು ಾಳೀವರ್ತಮಾನ ಬಂತು. ಹೌದೇನೋ ಎಂದು ತಮ್ಮನ್ನು ವಿಚಾರಿಸಿ ೊಂಡು ಹೋಗಲು ಬಂದೆ."

"ಶ್ರೀಮಂತರು ಕುಸುಮಕ್ಕನ ವಿಷಯದಲ್ಲಿ ತುಂಬಾ ಆಸಕ್ತಿ ವಹಿಸಿ ಂತೆ ಇದೆ" ಎಂದರು ವಿನೋದವಾಗಿ.

"ಹೌದು ಗುರುಗಳೇ, ಆ ದಿನ ವಿಜಯವಿಠಲ ದೇವಾಲಯದಲ್ಲಿ ಅವಳ ರ್ತನವನ್ನು ನೋಡಿದ ಲಾಗಾಯಿತು ಅಂತಹ ಕಲಾವತಿಯನ್ನು ನಾನು ದುವರೆಗೆ ನೋಡಿಲ್ಲ, ಎಂದು ಮನಗೊಂಡೆ. ಅದೇನು ಅವಳ ಕಲಾ ್ರೌಢಿಮೆ ! ಅದೇನು ಅವಳ ಅಭಿನಯ, ಭಾವ ಭಂಗಿ! ನನಗಂತೂ, ಸ್ವರ್ಗ ೋಕದ ರಂಭೆಯೋ ಊರ್ವಸಿಯೇ ಧರೆಗಿಳಿದು ಬಂದಂತೆ ಭಾಸವಾಯಿತು. ಂತಹ ಉತ್ಕೃಷ್ಟ ಕಲಾವಿದೆಯನ್ನು ಕಂಡ ಮೇಲೆ ಅವಳಲ್ಲಿ ಯಾರಿಗೆ ತಾನೇ ಸಕ್ತಿಯಿರುವುದಿಲ್ಲ. ಅವಳ ಎಷ್ಟು ಪ್ರದರ್ಶನಗಳನ್ನು ನೋಡಿದರೂ ನನಗೆ ್ರಪ್ತಿಯಾಗುವುದಿಲ್ಲ. ನಾನು ಅವಳ ಕಲೆಗಾರಿಕೆಗೆ ಅಷ್ಟು ಹುಚ್ಚನಾಗಿ ್ದೇನೆ....."

"ಅವಳ ಕಲೆ ನಿಜವಾಗಿಯೂ ದೈವದತ್ತವಾಗಿ ಬಂದಿದೆ. ಇಲ್ಲದೆ ದ್ದರೆ ಈ ವಯಸ್ಸಿಗೆ ಇಷ್ಟು ಪ್ರೌಢಿಮೆ ಸಿದ್ಧಿಗೊಳಿಸಲು ಸಾಧ್ಯವೇ ಇಲ್ಲ. ವಳು ನಾಟ್ಯಸ್ವರಸ್ವತಿಯೇ ಸರಿ!"

ಗುರುಗಳು ಅಭಿವಮಾನದಿಂದ ನುಡಿದರು.

"ಏಕೆ ಗುರುಗಳೇ. ಅವಳು ಈಚೆಗೆ ಎಲ್ಲಿಯೂ ಪ್ರದರ್ಶನವನ್ನೇ ೊಟ್ಟಿಲ್ಲ. ಅವಳು ಮನೆಯನ್ನು ಬಿಟ್ಟು ಬೇರೆಲ್ಲಿಗೂ ಹೋಗುವುದಿಲ್ಲವೆಂದು ಾಣುತ್ತೆ. ಅಂತೂ, ಆ ಪ್ರದರ್ಶನದನಂತರ ನಾನು ಅವಳನ್ನು ನೋಡಿಯೇ ಇಲ್ಲ."

"ಹೌದು ಕುಸುಮೆ ಈಚಿನ ದಿನಗಳಲ್ಲಿ ಹೊರಗಡೆ ಎಲ್ಲೂ ಪ್ರದರ್ಶನ ಕೊಟ್ಟಿಲ್ಲ."

"ಏಕೆ ಗುರುಗಳೆ?"

"ಕುಸುಮಕ್ಕ ಎಲ್ಲರಂತೆ ಅಲ್ಲ. ಅವಳು ಹುಟ್ಟಿದ ಕುಲ ಡೊಂಕಾದರೂ ಅವಳೊಬ್ಬಳು ವಿದೂಷಿ, ವಿದ್ಯಾಧರೆ, ಒಳ್ಳೆ ಪರಿಪಾಕಗೊಂಡ, ಸುಸಂಸ್ಕೃತವಾದ ಜೀವ. ಅವಳಿಗೆ ದೇವರಲ್ಲಿ ಗುರುಹಿರಿಯರಲ್ಲಿ ಅನನ್ಯ ಭಕ್ತಿ ಇದೆ. ಅವಳ ಸದ್ಗುಣಗಳನ್ನು ವರ್ಣಿಸುತ್ತ ಹೋದರೆ ಇಡೀ ದಿನ ಬೇಕಾದೀತು. ಇಷ್ಟಾದರೂ ಅವಳಲ್ಲಿ ಕೆಲವು ವಿಚಿತ್ರ ನಡವಳಿಕೆ ಇದೆ. ಅವಳು ಯಾವ ಕಾರಣಕ್ಕೋ ಒಂದು ಪ್ರತಿಜ್ಞೆ ಮಾಡಿದ್ದಾಳೆ ಅವಳು ಅರಮನೆ, ಗುರುಮನೆ, ದೇವಾಲಯಗಳಲ್ಲಿ ಅಲ್ಲದೆ ಬೇರೆಲ್ಲೂ ತನ್ನ ನರ್ತನಪ್ರದರ್ಶನ ಮಾಡುವುದಿಲ್ಲವಂತೆ. ಅದಕ್ಕೋಸ್ಕರ ಅವಳು ಬೇರೆಲ್ಲೂ ನೃತ್ಯಪ್ರದರ್ಶನವನ್ನೇ ಒಪ್ಪಿಕೊಂಡಿಲ್ಲ."

"ನನಗೆ ಮಹಾಪ್ರಭುಗಳ ಸಮ್ಮುಖದಲ್ಲಿ ಅವಳ ನೃತ್ಯವನ್ನು ಏರ್ಪಡಿಸಿ, ಅವಳನ್ನು ಆಸ್ಥಾನದ ಕಲಾವಿದೆಯಾಗಿ ಇಲ್ಲಿಯೇ ಉಳಿಸಿಕೊಳ್ಳುವ ಆಸೆಯಿದೆ."

"ಪ್ರಭುಗಳ ಸಮ್ಮುಖದಲ್ಲಿ ನೃತ್ಯ ಮಾಡಲು ಬಹುಶಃ ಒಪ್ಪುವಳೆಂದು ಕಾಣುತ್ತದೆ. ಆದರೆ ಅವಳು ಇಲ್ಲೇ ಆಸ್ಥಾನದ ನರ್ತಕಿಯಾಗಿ ಮಾತ್ರ ಏನು ಮಾಡಿದರೂ ಉಳಿಯಲಾರಳು. ಇದು ಖಂಡಿತ."

ಏಕೆಂದು ವಿಜಯಭದ್ರ ಕೆದಕಿ ಕೇಳಲಿಲ್ಲ. ಏಕೆಂಬುದು ಅವನಿಗೆ ತಿಳಿದಿತ್ತೇನೋ. ವಿಷಯ ಬದಲಿಸಿ ಕೇಳಿದ—

"ಹಾಗಾದರೆ ಪ್ರಭುಗಳ ಸಮ್ಮುಖದಲ್ಲಿ ನೃತ್ಯವೇರ್ಪಡುವ ತನಕ ಅವರ ನೃತ್ಯವನ್ನು ನೋಡುವ ಭಾಗ್ಯ ನಮಗೆ ಇಲ್ಲವೆನ್ನುತ್ತೀರಾ?"

"ಹಾಗೇನೂ ಇಲ್ಲ. ಶ್ರೀಮಂತರಿಗೆ ಕುಸುಮಕ್ಕನ ನೃತ್ಯ ಮನಸ್ಸಿಗೆ ಬಂದಿದ್ದರೆ ನಮಗೆ ಹೇಳಿ. ನಾನು ಅವಳ ನೃತ್ಯ ನೋಡುವ ಅವಕಾಶ ಕಲ್ಪಿಸಿಕೊಡುತ್ತೇನೆ. ಇಂದು ಗುರುವಾರ. ನಾಳೆ ಅವಳ ಮನೆಯಲ್ಲಿ ವಾರದ ವಿಶೇಷ ಪೂಜೆ ನಡೆಯುತ್ತದೆ. ಸಂಜೆಯ ವೇಳೆಗೆ ಸರ್ವಮಂಗಳೆಯ ಪ್ರೀತ್ಯರ್ಥವಾಗಿ ನಾಟ್ಯಸೇವೆಯೂ ನಡೆಯುತ್ತದೆ. ನೀವು ನನ್ನೊಡನೆ

ಬರುವುದಾದರೆ ಅಲ್ಲಿಗೆ ಕರೆದೊಯ್ಯುತ್ತೇನೆ. ಈಗ ಮನೆಯನ್ನು ಬೇರೆ ಕಡೆಗೆ ಬದಲಾಯಿಸಿಬಿಟ್ಟಿದ್ದಾರೆ. ಅಲ್ಲದೆ ಅಲ್ಲಿಗೆ ಇಷ್ಟಮಿತ್ರರೇ ಸಾಮಾನ್ಯವಾಗಿ ಬರುವುದು. ಹೊರಗಿನ ಜನಕ್ಕೆ ಅಷ್ಟಾಗಿ ಪ್ರವೇಶವಿಲ್ಲ."

"ಗುರುಗಳು ನನ್ನ ಮೇಲೆ ಇದೇ ವಿಧವಾದ ಶಿಷ್ಯವಾತ್ಸಲ್ಯವನ್ನಿಟ್ಟುಕೊಂಡಿರಬೇಕು. ತಮ್ಮ ಕೃಪೆಯಿಂದ ನಾನು ತುಂಬ ಉಪಕೃತನಾಗಿದ್ದೇನೆ." ಎಂದು ಹೇಳಿ ಗುರುಗಳಿಗೆ ವಂದಿಸಿ, ಮಾರನೆಯ ದಿನ ಮಧ್ಯಾಹ್ನ ಬಂದು ನೋಡುವುದಾಗಿ ಹೇಳಿ ಅಲ್ಲಿಂದ ಹೊರಟುಹೋದ.

ಮಾರನೆಯ ದಿನ ವಿಜಯಭದ್ರ ಹೇಳಿದ್ದ ಸಮಯಕ್ಕೆ ಸರಿಯಾಗ್ಗಿ ಬಂದು ಗುರುಗಳನ್ನು ಕೂಡಿಕೊಂಡ. ಅವನ ಅಂದಿನ ಉಡಿಗೆಯನು ಕಂಡು ಗುರುಗಳಿಗೆ ವಿಸ್ಮಯವೇ ಆಯಿತು. ವಿಜಯಭದ್ರನು ಗುರುತೇ ಸಿಕ್ಕದಷ್ಟು ಸರಳವಾದ ಉಡಿಗೆಯಲ್ಲಿ ಬಂದಿದ್ದ. ಈ ಬಗ್ಗೆ ಭರತಾಚಾರ್ಯರಿಗೆ ಕುತೂಹಲ ಉಂಟಾದರೂ—ಅವರು ಕೆದಕಿ ಪ್ರಶ್ನಿಸಲಿಲ್ಲ. ಕೆದಕಿ ಪ್ರಶ್ನಿಸುವ ಪ್ರವೃತ್ತಿ ಅವರದಲ್ಲ. ಅವರು ದೇವಾಲಯಕ್ಕೆ ಹೋಗುವ ಯಾತ್ರಿಕನಂತೆ ವಿಜಯಭದ್ರನು ಸರಳ ಉಡಿಗೆಯಿಂದ ಬಂದಿರಬಹುದೆಂದು ಸುಮ್ಮನಾದರು. ಆದರೆ ಅವನು ವೇಷ ಮರೆಸಿ ಬಂದುದರ ಉದ್ದೇಶವೇ ಬೇರೆಯಾಗಿತ್ತು. ತಾನು ವಿಜಯಭದ್ರನೆಂದು ಕುಸುಮೆಗಾಗಲೀ ತಿಪ್ಪಾಜಿಗಾಗಲಿ ತಿಳಿಯಬಾರದೆಂದು ಹಾಗೆ ಬಂದಿದ್ದ.

ಇಂದು ವಿಜಯಭದ್ರ ಬೇಕೆಂದೇ ತಡಮಾಡಿ ಕುಸುಮೆಯ ಮನೆಗೆ ಹೋಗುವಂತೆ ಮಾಡಿದ್ದ. ನಸುಕಿನಲ್ಲಿ—ತನ್ನ ಗುರುತು ಅವರಿಗೆ ಸಿಗದಿರಲೆಂದು ಮುಂಚಿತವಾಗಿ ಹೋದರೆ ಪರಸ್ಪರ ಪರಿಚಯದ ಗೊಂದಲವೇಳುವುದೆಂದು. ಇವುಗಳನ್ನು ತಪ್ಪಿಸಲು — ನೃತ್ಯಪ್ರದರ್ಶನ ಆರಂಭವಾದ ಹೊತ್ತನ್ನು ನೋಡಿಗೊಂಡೇ, ಅವರ ಮನೆಯನ್ನು ಪ್ರವೇಶಮಾಡಿದ್ದ. ಅವನಿಗೆ ಬೇಕಾಗಿದ್ದುದು ಕುಸುಮೆಯ ನೃತ್ಯವಲ್ಲ. ಕುಸುಮೆಯ ಮನೆಯ ಶೋಧನೆ.

ಸಾಮಾನ್ಯವಾಗಿ ಪ್ರತಿ ಶುಕ್ರವಾರವೂ ಕುಸುಮಾಜಿ ತನ್ನ ಆರಾಧ್ಯ ದೈವವಾದ ಸರ್ವಮಂಗಳೆಗೆ ವಿಶೇಷ ಪೂಜೆ ಮಾಡುತ್ತಿದ್ದಳು. ಬೆಳಗಿನಿಂದ ಸಂಜೆಯ ತನಕ, ದೇವತಾರ್ಚನೆ, ಪಾರಾಯಣ, ಭಜನೆಗಳಿಂದ ಕೂಡಿರು

ತ್ತಿತ್ತು. ಅಂದು ಅವಳು ಉಪವಾಸದಿಂದ ಇದ್ದು ರಾತ್ರಿ ಪೂಜೆಯಾಗಿ, ಪ್ರಸಾದ ಸ್ವೀಕರಿಸಿದನಂತರವೇ ಭೋಜನ ಮಾಡುತ್ತಿದ್ದಳು. ಈ ವಿಶೇಷ ಪೂಜೆಯಲ್ಲಿ ಅಷ್ಟು ನಿಷ್ಠೆ. ಅಷ್ಟು ನೇಮ ಆಚರಿಸುತ್ತಿದ್ದಳು.

ಕುಸುಮಾಜಿಯನ್ನು ನೋಡಿದರೆ ಅವಳು ತನ್ನ ವಯಸ್ಸಿಗೆ ಮೀರಿದ ವೈರಾಗ್ಯ ತಾಳಿರುವಳೆಂದೇ ಹೇಳಬೇಕು. ಸುಖದ ಸುಪ್ಪತ್ತಿಗೆಯಲ್ಲಿ ಬೆಳೆದ ಅವಳು ತನ್ನ ಯೌವನದ ಈ ವಸಂತ ಮಾಸದಲ್ಲಿ ಕಠೋರಸಂಯಮದ ಉಗ್ರ ತಪಸ್ಸು ಕೈಗೊಂಡಿರುವುದು ಏಕೆಂದು ಎಲ್ಲರಿಗೂ ಅಚ್ಚರಿಯಾಗುತ್ತಿತ್ತು. ಅವಳ ದೈವಭಕ್ತಿ—ವಿರಕ್ತಿ ಭಾವ, ಸರಳ ಜೀವನಗಳನ್ನು ಕಂಡವರೆಲ್ಲರಿಗೂ ಕುಸುಮೆಯ ವಿಷಯದಲ್ಲಿ ಗೌರವ ಬುದ್ಧಿಯುಂಟಾಗುತ್ತಿತ್ತು. ಅವಳ ಜೀವನದಲ್ಲಿ ಯೋಗಭೋಗಗಳ ಮಧುರವಾದ ಸಮನ್ವಯವಿತ್ತು. ಅವಳು ಯೋಗಿನಿಯಾಗಿದ್ದುಕೊಂಡೇ ಭೋಗಿಯಾಗಿರುತ್ತಿದ್ದಳು; ಭೋಗಿಯಾಗಿ ಇದ್ದುಕೊಂಡೇ ಯೋಗಿನಿಯಾಗಿ ಇರುತ್ತಿದ್ದಳು. ಅಂತಲೇ ಅವಳ ಜೀವನ ದಲ್ಲಿ ಸದಾ ಶಾಂತಿ, ತೃಪ್ತಿಗಳು ನೆಲೆಸಿರುತ್ತಿದ್ದುವು.

ಕುಸುಮೆಗೆ ಸರ್ವಮಂಗಳೆಯ ಹುಚ್ಚು ಹಿಡಿದುದೂ ಒಂದು ಕಥೆ. ಕುಸುಮೆ ಹದಿನಾಲ್ಕನೆಯ ವಯಸ್ಸಿನಲ್ಲಿ ತುಂಬ ಕಾಹಿಲೆ ಬಿದ್ದಳು. ಅವಳು ಇನ್ನು ಬದುಕುವುದಿಲ್ಲವೆಂದು ಎಲ್ಲರೂ ಅವಳ ಕೈ ಬಿಟ್ಟುಬಿಟ್ಟಿದ್ದರು. ಇನ್ನು ಕೆಲವೇ ಗಂಟೆಗಳಲ್ಲಿ ಅವಳ ಪ್ರಾಣಪಕ್ಷಿ ಹೊರಟುಹೋಗುವುದೆಂದು ತಿಳಿದು, ಅವಳನ್ನು ಹೊರಗಡೆ ತಂದು ಇಟ್ಟಿದ್ದರು. ಇಂತಹ ವಿಷಮ ವೇಳೆಯಲ್ಲಿ ದೈವಾನುಗ್ರಹವಾದಂತೆ ಕಾಷಾಯವಸ್ತ್ರಧಾರಿಯೂ, ರುದ್ರಾಕ್ಷಿ ಕಮಂಡಲ ಗಳಿಂದ ಕೂಡಿದವನೂ ಆದ ಒಬ್ಬ ಯತೀಶ್ವರನು ಅಲ್ಲಿ ಕಾಣಿಸಿಕೊಂಡನು. ಅವನು ನರಳುತ್ತಾ ಬಿದ್ದಿದ್ದ ಕುಸುಮೆಯನ್ನು ನೋಡಿದ. ಅವನಿಗೆ ಅದೇ ನೆನಿಸಿತೋ ತನ್ನ ಜೋಳಿಗೆಯಿಂದ ಒಂದು ಗಡ್ಡೆ ವಿಭೂತಿಯನ್ನು ತೆಗೆದು ತಿಪ್ಪಾಜಿಯ ಕೈಗೆ ಕೊಟ್ಟ; "ಇದು ನಂಜುಂಡೇಶ್ವರನ ಪ್ರಸಾದ. ಇದನ್ನು ಪುಡಿಮಾಡಿ ಶರೀರದ ಕಾವು ಆರದಂತೆ ಉಜ್ಜುತ್ತ ಬನ್ನಿ. ನಿಮ್ಮ ಮಗಳಿಗೆ ಗುಣವಾಗುವುದು—" ಎಂದು ಹೇಳಿ, ರುದ್ರಾಕ್ಷಿಯಿಂದ ಅವಳ ತಲೆಯನ್ನು ಮೂರು ಬಾರಿ ಮುಟ್ಟಿ, ಏನೋ ಮಂತ್ರ ಗೊಣಗುಟ್ಟಿ, ಅವಳ ಬಾಯಿಗೆ ಕೊಂಚ ತೀರ್ಥ ಹಾಕಿ, ಅಲ್ಲಿಂದ ಹೊರಟುಹೋದ. ಈ ಸನ್ಯಾಸಿ ಹೇಳಿ

ದ್ದಂತೆ ಮಾಡಲಾಗಿ, ಕುಸುಮೆಯು ಉಳಿದುಕೊಂಡಳು. ಅವಳು ಗಂಡಾಂತರದಿಂದ ಪಾರಾದಳು. ಅವಳು ಕಾಲಕ್ರಮದಲ್ಲಿ ಗುಣ ಹೊಂದಿ ಮೊದಲಿನಂತೆಯೇ ಆದಳು.

ಒಂದು ದಿನ ಕುಸುಮೆಯ ಕನಸಿನಲ್ಲಿ ಸರ್ವಮಂಗಳೆ ಕಾಣಿಸಿಕೊಂಡು, ಸನ್ಯಾಸಿಯ ಮೂಲಕ ತಾನೇ ಕುಸುಮೆಯ ಪ್ರಾಣ ಉಳಿಸಿದುದಾಗಿ ತಿಳಿಸಿ, ಅವಳು ಪ್ರತಿ ಶುಕ್ರವಾರ ತನ್ನನ್ನು ನಾಟ್ಯಸೇವೆಯಿಂದ ಪ್ರಸನ್ನಗೊಳಿಸಬೇಕೆಂದು ಹೇಳಿದಂತೆ ಆಯಿತು. ಇದೇ ವಿಧವಾದ ಕನಸು ತಿಪ್ಪಾಜಿಗೂ ಅದೇ ದಿನ ಬಿದ್ದು ಸರ್ವಮಂಗಳೆಯ ಬಗ್ಗೆ ತಾಯಿಮಕ್ಕಳಿಗೆ ಅಮಿತವಾದ ಭಕ್ತಿಯುಂಟಾಯಿತು. ಅವರು ಶ್ರೀರಂಗಪಟ್ಟಣದಲ್ಲಿ ಇದ್ದಷ್ಟು ದಿನ ತಿಂಗಳಿಗೊಮ್ಮೆ—ಎರಡು ತಿಂಗಳಿಗೊಮ್ಮೆ ನಂಜನಗೂಡಿಗೆ ಹೋಗಿ ನಂಜುಂಡೇಶ್ವರನನ್ನೂ ಸರ್ವಮಂಗಳೆಯನ್ನೂ ದರ್ಶನಮಾಡಿ ನಾಟ್ಯಸೇವೆ ಸಲ್ಲಿಸಿ ಬರುತ್ತಿದ್ದರು. ಉಳಿದ ವೇಳೆಯಲ್ಲಿ ತಮ್ಮ ಮನೆಯಲ್ಲಿ ಸರ್ವಮಂಗಳೆಯ ಪುತ್ಥಳಿಯನ್ನು ನಿರ್ಮಿಸಿಕೊಂಡು, ತಮ್ಮ ಹರಕೆಯನ್ನು ಸಲ್ಲಿಸುತ್ತಿದ್ದರು. ಆ ದಿನದಿಂದ ಇಲ್ಲಿಯ ತನಕ ಸರ್ವಮಂಗಳೆಯ ಪೂಜೆ—ನಾಟ್ಯಸೇವೆಗಳು ತಪ್ಪದೆ ನಡೆದುಕೊಂಡು ಬಂದಿತ್ತು. ಕುಸುಮೆ ರಾಜಧಾನಿಗೆ ಬಂದಾಗಲೂ ತನ್ನ ನಿತ್ಯಪೂಜಾವಿಧಿಯನ್ನು ಚಾಚೂ ತಪ್ಪಿಸಿರಲಿಲ್ಲ. ಎಲ್ಲವೂ ಯಥಾವಿಧಿಯಾಗಿ ನಡೆದುಬಂದಿತ್ತು.

ಇಂದಿನ ವಿಶೇಷ ಪೂಜೆಗೆ ಹೆಚ್ಚು ಮಂದಿ ಬಂದಿರಲಿಲ್ಲ. ಸುಮಾರು ಇಪ್ಪತ್ತು ಮೂವತ್ತು ಮಂದಿ ಗಂಡಸರು, ಹೆಂಗಸರು ಮಕ್ಕಳು ನೆರೆದಿದ್ದರು.

ಭರತಾಚಾರ್ಯ, ವಿಜಯಭದ್ರರು ಹೆಚ್ಚಿನ ಗದ್ದಲವಿಲ್ಲದೆ, ತಡಮಾಡಿ ಬಂದುದರಿಂದ ಕೊನೆಯ ಆಸನಗಳಲ್ಲಿ ಕುಳಿತುಕೊಂಡರು.

ಈ ವೇಳೆಗೆ ಕುಸುಮಾಜಿಯ ನೃತ್ಯ ಆರಂಭವಾಗಿ ಕೊಂಚ ಹೊತ್ತಾಗಿತ್ತು. ಅವಳ ದೃಷ್ಟಿ ದೇವಿಯಲ್ಲಿ ನೆಟ್ಟುದರಿಂದಲೂ, ತಿಪ್ಪಾಜಿ, ಪೂಜೆಯ ಗಡಿಬಿಡಿಯಲ್ಲಿ ಇದ್ದುದರಿಂದಲೂ, ಗುರುಗಳ ಕಡೆ ಅವರಿಬ್ಬರ ನೋಟ ಹರಿಯಲಿಲ್ಲ. ಇದು ಒಂದು ರೀತಿಯಾಗಿ ಒಳ್ಳೆಯದೇ ಆಯಿತು. ಆದರೆ ಒಮ್ಮೆ ಕುಸುಮಾಜಿ ನೃತ್ಯ ಮಾಡುತ್ತ ಮಾಡುತ್ತ, ದೂರದಲ್ಲಿ ಕುಳಿತಿದ್ದ ಗುರುಗಳನ್ನು ಗುರುತಿಸಿದಳು. ಅನಂತರ ನಿಧಾನವಾಗಿ, ಜೊತೆಗೆ ಬಂದಿದ್ದ

ಆ ಆಗಂತುಕನನ್ನು ನೋಡಿದಳು. ಅವನನ್ನು ನೋಡುತ್ತಲೇ ಅವನು ಬೇರಾರೂ ಅಲ್ಲ—ವಿಜಯಭದ್ರನೆಂದೂ ಗುರುತಿಸಿದಳು. ಅವಳಿಗೆ ಕೂಡಲೇ ಎಚ್ಚರತಪ್ಪಿ, ಬೀಳುವಂತೆ ಆಯಿತು. ವಿಜಯಭದ್ರ ತನ್ನ ಮನೆಯಲ್ಲಿ! ಆದರೂ ಕುಸುಮಾಜಿ ಚೀರಲಿಲ್ಲ, ಅಧೈರ್ಯ ಪಡಲಿಲ್ಲ. ಎಲ್ಲ ದುಗಡವನ್ನೂ ಸರ್ವಮಂಗಳೆಗೆ ವಹಿಸಿ, ದೇವಿಯ ಧ್ಯಾನಮಾಡಿದಳು. ಮತ್ತೆ ಅವಳು ಕಣ್ಣು ಬಿಟ್ಟು ನೋಡುವಾಗ ಆ ಜಾಗದಲ್ಲಿ ಕೇವಲ ಗುರುಗಳು ಮಾತ್ರ ಇದ್ದರು. ಅವರ ಜೊತೆಯಲ್ಲಿ ಬಂದಿದ್ದ ವಿಜಯಭದ್ರನು ಅಲ್ಲಿಂದ ಯಾವ ಮಾಯದಲ್ಲೋ ತಪ್ಪಿಸಿಕೊಂಡು ಹೋಗಿದ್ದ. ಅವನು ಯಾವಾಗ ಎದ್ದು ಹೋದ, ಎಲ್ಲಿಗೆ ಹೋದ ಎಂಬುದು ಯಾರೂ ಹೇಳದಾದರು. ಕುಸುಮೆಗಂತೂ ಇದೊಂದು ವಿಸ್ಮಯಸಂಗತಿ. ಗುರುಗಳೊಂದಿಗೆ ವಿಜಯಭದ್ರನ ಆಗಮನ, ಆಕಸ್ಮಿಕ ನಿರ್ಗಮನ! ಈ ಬಗ್ಗೆ ಗುರುಗಳಿಗೇನಾದರೂ ತಿಳಿದಿದೆಯೋ, ಎಂದುಕೊಂಡು, ತನ್ನ ಪೂಜೆ ಎಲ್ಲ ಮುಗಿಯುವ ತನಕ ಸುಮ್ಮನಿದ್ದು, ಪ್ರಸಾದವಿನಿಯೋಗವಾದ ಮೇಲೆ ಗುರುಗಳನ್ನು ಈ ಬಗ್ಗೆ ಪ್ರಶ್ನಿಸಿದಳು.

"ಗುರುಗಳೇ, ನಿಮ್ಮ ಜೊತೆಗೆ ಬಂದಿದ್ದ ಆಗಂತುಕನು ಯಾರು?"

"ಯಾಕೆ, ಅವರ ಪರಿಚಯ ನಿನಗೆ ಇಲ್ಲವೆ? ಅವರೇ ಮಹಾಪ್ರಭುಗಳ ಸಮೀಪದ ಬಂಧುಗಳಾದ ಶ್ರೀಮಂತ ವಿಜಯಭದ್ರರೆನ್ನುವವರು. ಒಳ್ಳೇ ಕಲಾಭಿಮಾನಿ. ಅವರ ಪರಿಚಯ ನಿನಗೆ ಮಾಡಿಸಿಕೊಡಲೆಂದೇ ಕರೆತಂದೆ. ಆದರೆ ಅದೇನು ಕಾರಣವೋ ನನಗೆ ತಿಳಿಯದಂತೆ, ಅವರು ಇಲ್ಲಿಂದ ಯಾವ ಗಳಿಗೆಯಲ್ಲೋ ಹೊರಟುಹೋಗಿದ್ದಾರೆ."

"ಹಾಗಾದರೆ ಅವರನ್ನು ಕರೆದುತಂದವರು ನೀವೇ ತಾನೆ?" ವಿಷಾದವಾಗಿ ಕೇಳಿದಳು ಕುಸುಮಾಜಿ.

"ಹೌದು. ಯಾಕೆ?"

"ಅವರನ್ನು ನೀವು ಇಲ್ಲಿಗೆ ಕರೆತರಬಾರದಾಗಿತ್ತು. ಅವರನ್ನು ಕರೆತರದೇ ಇದ್ದಿದ್ದರೆ ಚೆನ್ನಾಗಿತ್ತು. ಅದೊಂದು ಕೆಟ್ಟ ಹುಳ" ಎಂದಳು.

ಮುಂದೆ ತಿಪ್ಪಾಜಿಯಿಂದ ವಿಜಯಭದ್ರನ ವಿಷಯಕವಾದ ಎಲ್ಲ ಸಂಗತಿ ಸವಿಸ್ತಾರವಾಗಿ ಭರತಾಚಾರ್ಯರು ಕೇಳಿದರು. ತಾವು ತಿಳಿಯದೆ ಮಾಡಿದ ಕೆಲಸಕ್ಕಾಗಿ ಅವರು ತುಂಬ ವಿಷಾದಿಸಿದರು. ತಾವು ಎಂತಹ ಕೆಲಸ

ಮಾಡಿವೆ ಎಂದು ತುಂಬಾ ಪೇಚಾಡಿಕೊಂಡರು. ವಿಜಯಭದ್ರನ ಸಂಗತಿ ಅವರಿಗೆ ಈ ಮೊದಲೇ ತಿಳಿದಿದ್ದರೆ ಅವರು ಅವನನ್ನು ಹತ್ತಿರ ಸೇರಿಸುತ್ತಿರಲಿಲ್ಲ. ಅವರಿಗೆ ತಿಳಿಯದೆ ನಡೆಯಬಾರದ ಅಚಾತುರ್ಯ ನಡೆದುಹೋಗಿತ್ತು. ಕುಸುಮಾಜಿಯೇ ಗುರುಗಳನ್ನು ಸಮಾಧಾನಪಡಿಸಬೇಕಾಯಿತು.

ಅಂತೂ ಇಂತು, ಅವರು ಅನೇಕ ದಿನಗಳಿಂದ ಕಾಯ್ದುಕೊಟ್ಟಿದ್ದ ಗುಟ್ಟು ರಟ್ಟಾಯಿತು. ವಿಜಯಭದ್ರ ಕುಸುಮಾಜಿಯ ವಾಸಗೃಹವನ್ನು ಕಡೆಗೂ ಶೋಧಿಸಿಯೇಬಿಟ್ಟ !

ಇನ್ನು ಅವನಿಂದ ತನಗೆ ಯಾವ ವಿಪತ್ತು ಕಾದಿವೆಯೋ ಎಂದು ಕುಸುಮೆ ಹೆದರಿದಳು. ಅವಳು ಇದೇ ರಾತ್ರಿ ವಿಪತ್ ಪರಿಹಾರಕ್ಕಾಗಿ ದೇವಿಯನ್ನು ಅನನ್ಯ ಭಕ್ತಿಯಿಂದ ಪ್ರಾರ್ಥಿಸಿದಳು. ಪ್ರಾರ್ಥಿಸುತ್ತಿರುವಂತೆಯೇ, ದಿನವೆಲ್ಲ ದಣಿದಿದ್ದ ಅವಳು—ಹಾಗೆಯೇ ಮಲಗಿ ನಿದ್ರೆಹೋದಳು. ಅವಳಿಗೆ ಎಚ್ಚರವಾದಾಗ, ಮನೆಯ ಮುಂದೆ ವಿಶೇಷ ಗದ್ದಲವಾದಂತೆ ತೋರಿತು. ಏನೆಂದು ವಿಚಾರಿಸಲಾಗಿ, ರಾತ್ರಿ ಸುಮಾರು ಹನ್ನೆರಡು ಗಂಟೆಯ ಸುಮಾರಿನಲ್ಲಿ—ಸುಮಾರು ಹತ್ತಿಪ್ಪತ್ತು ಮಂದಿ ಕುಡಿದು ಮತ್ತೇರಿದ ಕುಡುಕರು, ಮನೆಯನ್ನು ನುಗ್ಗಲು ಪ್ರಯತ್ನಿಸಿರದಂತೆ. ಆ ವೇಳೆಯಲ್ಲಿ, ಆಕಸ್ಮಾತ್ ಆ ಕಡೆಯಿಂದ ಪಹರೆ ಸೈನಿಕರ–ಕುಡುಕರನ್ನು ಹೊಡೆದು ಓಡಿಸಿದರಂತೆ. ಕೆಲವರನ್ನು ಸೆರೆಯಲ್ಲಿ ಇಟ್ಟಿರುವರಂತೆ, ಎನ್ನುವ ಸುದ್ದಿ ಕಿವಿಗೆ ಬಿತ್ತು. ದೇವಿಯಲ್ಲಿ ತಾನು ಮಾಡಿದ ಪ್ರಾರ್ಥನೆ ವಿಫಲವಾಗಲಿಲ್ಲ. ಸರ್ವಮಂಗಳೆಯೇ ತನ್ನನ್ನು ಇಂದು ಕುಡುಕರ ಧಾಳಿಯಿಂದ ಪಾರುಮಾಡಿದಳು ಎಂದುಕೊಂಡಳು ಕುಸುಮೆ. ಅವಳು ದೇವಿಯ ಎದುರು ಮತ್ತೆರಡು ತುಪ್ಪದ ದೀಪಗಳನ್ನು ಹಚ್ಚಿ ದೀರ್ಘದಂಡ ನಮಸ್ಕಾರ ಮಾಡಿದಳು.

# ೫

ಕುಸುಮಾಜಿ ಏನನ್ನೋ ಆಲೋಚಿಸುತ್ತಾ ಮೇಲುಪ್ಪರಿಗೆಯಲ್ಲಿ ಕುಳಿತಿದ್ದಳು. ಆ ದಿನ ಗೋವಿಂದರಾಜನು ಕುಸುಮಾಜಿಯನ್ನು ನೋಡಲು ಇನ್ನೂ ಬಂದಿರಲಿಲ್ಲ. ಏಕೆ ವಿಳಂಬವಾಯಿತೆಂದು ಆಲೋಚಿಸುತ್ತಾ, ಹಾಗೆಯೇ ದೃಷ್ಟಿಯನ್ನು ಹೊರಳಿಸಿ ಹೊರಗೆ ನೋಡುತ್ತಾ ಕುಳಿತಿದ್ದಳು.

ಸಂಜೆಯ ಮಬ್ಬು ಬೆಳಕು ಎಲ್ಲೆಲ್ಲೂ ಹರಡಿತ್ತು. ಆಗತಾನೇ ದಿನ ಕರನು ಪಡುಗಡಲ ಮನೆಯನ್ನು ಸೇರಿ ವಿಶ್ರಾಂತಿ ಪಡೆಯುತ್ತಿದ್ದ. ಹಕ್ಕಿ ಗಳು, ದನಕರುಗಳು, ಗೂಡು ಸೇರುವ ಹೊತ್ತಾಗಿತ್ತು. ದಿನದ ಕೆಲಸ ದಿಂದ ದಣಿದಿದ್ದ ಶ್ರಮಜೀವಿಗಳು ಮನೆಗೆ ಹೊರಟಿದ್ದರು. ರಸ್ತೆಗಳು ಜನ ರಹಿತವಾಗಲು ತೊಡಗಿತ್ತು. ದೀಪದಮಲ್ಲಿಗಳು, ರಸ್ತೆಗಳ ದೀವಿಗೆಯನ್ನು ಸರಿಪಡಿಸುವ ಕೆಲಸದಲ್ಲಿ ತೊಡಗಿದ್ದರು. ದೂರದ ದೇವಾಲಯಗಳಿಂದ ಗಂಟಾನಾದವು ಅಲೆಅಲೆಯಾಗಿ ಕೇಳಿಸುತ್ತಿತ್ತು.

ಕುಸುಮೆ ಇವುಗಳನ್ನು ಶೂನ್ಯದೃಷ್ಟಿಯಲ್ಲಿ ನೋಡುತ್ತಾ ಬಹಳ ಹೊತ್ತು ಹಾಗೆಯೇ ಕುಳಿತಿದ್ದಳು.

ಅನಂತರ ಅದೇನು ಅನಿಸಿತೋ ಹೋಗಿ ಕನ್ನಡಿಯ ಮುಂದೆ ನಿಂತು ಕೊಂಡು ತನ್ನ ರೂಪವನ್ನು ನೋಡಿಕೊಂಡಳು. ಕೆದರಿದ್ದ ತಲೆಯನ್ನು ಸರಿಪಡಿಸಿಕೊಂಡು, ಹಣೆಯ ತಿಲಕವನ್ನು ಮತ್ತೆ ಇಟ್ಟುಕೊಂಡಳು. ತನ್ನ ರೂಪಕ್ಕೆ ತಾನೇ ಮರುಳಾದಂತೆ, ಒಮ್ಮೆ ನಸುನಕ್ಕಳು. ಮರುಗಳಿಗೆಯಲ್ಲಿ ಯಾರೋ ಬಂದದ್ದನ್ನು ಕೇಳಿ ಬಾಗಿಲತನಕ ಓಡಿ ಹೋಗಿ, ಯಾರೂ ಇಲ್ಲ ದುದರಿಂದ ನಿರಾಶಳಾಗಿ ತನ್ನ ಮೊದಲಿನ ಸ್ಥಳದಲ್ಲಿ ಬಂದು ಕುಳಿತುಕೊಂಡು ಮೊದಲಿನಂತೆಯೇ ತುಪ್ಪಳದ ಮೃದುಹಾಸಿಗೆಯಲ್ಲಿ ತನ್ನ ಕೋಮಲವಾದ ದೇಹವನ್ನು ಚೆಲ್ಲಿ, ದಿಂಬುಗಳ ಮೇಲೆ ಮೊಳಕೈಗಳನ್ನು ಊರಿ, ಗಲ್ಲಕ್ಕೆ ಕೈ ಯಿಟ್ಟುಕೊಂಡು ಯೋಚಿಸುತ್ತಾ ಮಲಗಿದಳು. ಅವಳು ಹಾಗೆಯೇ ತನ್ನ ಹಾಗೂ ಗೋವಿಂದರಾಜನ ಒಲವು ಮೂಡಿದ ಬಗೆಯನ್ನು ಮತ್ತೆ ಮೆಲುಕು ಹಾಕತೊಡಗಿದಳು....

ಅವಳು ಎಲ್ಲಿಂದಲೋ ಹಾರಿಬಂದ ಹಕ್ಕಿ. ಈ ನಗರದಲ್ಲಿ ಇದ್ದ ಅಲ್ಪಕಾಲದಲ್ಲಿ ಅವಳ ಜೀವನದಲ್ಲಿ ಮಹತ್ಪೂರಿತ ಘಟನೆಯೊಂದು ನಡೆದು ಹೋಗಿತ್ತು. ಕೇವಲ ಆಜೀವಪರ್ಯಂತ ಕುಮಾರಿಯಾಗಿಯೇ ಉಳಿಯುವ ನಿರ್ಧಾರ ಇಲ್ಲಿ ವ್ಯರ್ಥವಾಗಿತ್ತು. ಕುಸುಮೆಯ ಚೆಲುವನ್ನು ಆಶಿಸಿ ಬಂದ ರಸಿಕರು ಸಹಸ್ರಾರು ಮಂದಿ. ಅವಳ ಕಲೆಯನ್ನು ಮೆಚ್ಚಿ ಬಂದವರ ಸಂಖ್ಯೆಯೂ ಕಡಮೆಯಿಲ್ಲ. ಆದರೆ ಅವಳ ಸುಸಂಸ್ಕೃತ ಮನಸ್ಸಿನ ಸೊಬಗಿಗೆ ಮಾರುಹೋಗಿ ಬಂದ ವ್ಯಕ್ತಿಗಳು ಮಾತ್ರ ಅತಿವಿರಳ. ಅಂಥವರ ಪೈಕಿ ಗೋವಿಂದರಾಜ ಒಬ್ಬ. ಅವನಿಗೆ ಕುಸುಮೆಯ ಚೆಲುವಿಗಿಂತಲೂ, ಅವಳ ಕಲಾಪ್ರತಿಭೆಗಿಂತಲೂ, ಅವಳ ಸ್ನೇಹಮಯ ನಡೆನುಡಿ, ನಿರ್ಮಲಾಂತಃಕರಣ, ದೈವಭಕ್ತಿ—ಗುರುಹಿರಿಯರಲ್ಲಿನ ನಯವಿನಯಗಳೇ ಮೊದಲಾದ ಗುಣಗಳನ್ನು ನೋಡಿ ಅವಳನ್ನು ತನ್ನ ಆರಾಧ್ಯದೇವಿಯಾಗಿ ಮಾಡಿಕೊಂಡಿದ್ದ.

ಗೋವಿಂದರಾಜನು ಬಾಲ್ಯದಲ್ಲಿಯೇ ಪತ್ನಿಯನ್ನು ಕಳೆದುಕೊಂಡಿದ್ದ ವಿಧುರ. ಹದಿನೆಂಟನೆಯ ವಯಸ್ಸಿನಲ್ಲೇ ಅವನಿಗೆ ಮದುವೆಯಾಗಿತ್ತು. ಸ್ಫುರದ್ರೂಪಿಯುಳ್ಳ, ಸುಸಂಸ್ಕಾರವುಳ್ಳ ಆಚಾರಶೀಲ ಮನೆತನದ ಹುಡುಗಿಯೊಂದಿಗೆ ವಿವಾಹವಾಗಿತ್ತು. ಅವಳೊಡನೆ ಮೂರು ವರ್ಷ ಕೂಡಾ ಅವನು ದಾಂಪತ್ಯ ಸುಖ ಅನುಭವಿಸಲಿಲ್ಲ. ಗೋವಿಂದರಾಜನು ಕೃಷ್ಣದೇವರಾಯನೊಡನೆ ಉತ್ಕಲದ ದಂಡಯಾತ್ರೆಯಲ್ಲಿ ಪಾಲುಗೊಳ್ಳಬೇಕಾಯಿತು. ಅನಂತರ ಯುದ್ಧದ ಮೇಲೆ ಯುದ್ಧ ! ಯುದ್ಧರಂಗದಿಂದ ಮನೆಗೆ ಹಿಂದಿರುಗುವ ವೇಳೆಗೆ ನಾಲ್ಕೈದು ವರ್ಷಗಳು ಕಳೆದುಹೋಗಿತ್ತು. ಈ ವೇಳೆಯಲ್ಲಿ ಅವನ ಪತ್ನಿ ಯಾವುದೋ ಕೆಟ್ಟ ಕಾಹಿಲೆಗೆ ತುತ್ತಾಗಿ ಕೈಹಿಡಿದ ಪತಿಯನ್ನು ಏಕಾಂಗಿಯನ್ನಾಗಿ ಮಾಡಿ, ಇಹಲೋಕದ ಕೋಟಲೆಗಳಿಂದ ಪಾರಾಗಿದ್ದಳು. ಯುದ್ಧದಿಂದ ಹಿಂದಿರುಗಿದ ಗೋವಿಂದರಾಜನಿಗೆ ಮನೆ ಬರಿದಾಗಿ ಕಂಡಿತು, ಹೃದಯವೂ ಬರಿದಾಗಿ ಕಂಡಿತು. ಮನೆಯಲ್ಲಿ ಹಿರಿಯರು—ಬಂಧುಗಳು ಸ್ನೇಹಿತರು ಬಹಳ ಬಲವಂತಮಾಡಿದರು—ಮತ್ತೆ ಮದುವೆಯಾಗಲು. ಆದರೆ ಸದಾ ಯುದ್ಧರಂಗದಲ್ಲಿ ಆಯುಸ್ಸನ್ನು ಕಳೆಯಬೇಕಾಗಿದ್ದ ತನ್ನಂಥವನು ಮದುವೆಯಾದರೆ ತನ್ನನ್ನು ಕೈಹಿಡಿದವಳಿಗೆ ದ್ರೋಹ ಬಗೆದಂತೆಯೇ ಎನ್ನುವ

ತರ್ಕಕ್ಕೆ ಬಲಿಬಿದ್ದು ಅವನು ಮತ್ತೆ ಮದುವೆಯಾಗಿರಲಿಲ್ಲ. ಅವನು ಯಾರ ಮಾತನ್ನೂ ಕಿವಿಗೆ ಹಾಕದೆ. ಮತ್ತೆ ಯುದ್ಧರಂಗಕ್ಕೆ ಹೊರಟುಬಿಟ್ಟಿದ್ದ. ಈಗ ಮತ್ತೆ ಐದಾರು ವರ್ಷಗಳು ಯುದ್ಧರಂಗದಲ್ಲಿ ಕಳೆದಿತ್ತು. ಬಿಜಾಪುರದ ದಂಡಯಾತ್ರೆ ಮುಗಿದು ಗೋವೆಯ ವಿಜಯದೊಂದಿಗೆ ಕೃಷ್ಣದೇವರಾಯನ ದಿಗ್ವಿಜಯವು ಕೊನೆಗೊಂಡನಂತರ ಗೋವಿಂದರಾಜನು ರಾಜಧಾನಿಗೆ ಹಿಂದಿರುಗಿದ್ದ. ಇಲ್ಲಿ ಅವನಿಗೆ ಒಮ್ಮೆಲೇ ತನ್ನ ಏಕಾಂಗಿತನದ ಅರಿವಾಯಿತು. ಗೃಹಶಾಂತಿ ಇಲ್ಲವೆ ಚಿತ್ತಶಾಂತಿಯೂ ಇಲ್ಲವಾಯಿತು. ಇಂತಿರುವಾಗಲೇ ಅವನ ಜೀವನದಲ್ಲಿ ಹಸಿರಿನ ಸೆಲೆಯಾಗಿ ಕುಸುಮೆ ಕಾಣಿಸಿಕೊಂಡು, ತನ್ನ ಅಮೃತ ಸ್ನೇಹದಿಂದ ಅವನ ಬರಡು ಬಾಳನ್ನು ಬೆಳಗಿದ್ದಳು. ಇಂದು ಗೋವಿಂದರಾಜನು ಸುಖಿ! ಆದರೂ ವಿಜಯಭದ್ರನು ಬದುಕಿರುವ ತನಕ ತನ್ನ ಸುಖ ಅಖಂಡವೆಂದು ಅವನು ತಿಳಿಯುವಂತೆ ಇಲ್ಲ. ವಿಜಯಭದ್ರನಿಂದ ಕುಸುಮೆಗೆ ಯಾವ ಘಳಿಗೆಯಲ್ಲಿ ಯಾವ ವಿಪತ್ತು ಬರುವುದೋ ಎಂದು ಸದಾ ಅವನ ಮನಸ್ಸು ತಳಮಳಗೊಳ್ಳುತ್ತಿತ್ತು. ಅವನು ತನ್ನ ಅನುದಿನದ ಕೆಲಸಕಾರ್ಯಗಳು ಮುಗಿದೊಡನೆಯೇ ಕುಸುಮೆಯ ಬಳಿಗೆ ಬಂದುಬಿಡುತ್ತಿದ್ದ. ಇಂದು ಮನೆಗೆ ಬರುವ ವೇಳೆಯಾಗಿದ್ದರೂ ಅವನು ಬರದೇ ಹೋದುದು ಕುಸುಮೆಯ ಕಳವಳಕ್ಕೆ ಕಾರಣವಾಗಿತ್ತು.

ಹೀಗೆ ಅನ್ಯಮನಸ್ಕಳಾಗಿ ಆಲೋಚಿಸುತ್ತಾ ಮಲಗಿದ್ದ ಕುಸುಮೆ ಹೊರಗಡೆ ಗದ್ದಲವಾದುದನ್ನು ಕೇಳಿ ಗೋವಿಂದರಾಜನೇ ಬಂದಿರಬೇಕೆಂದು ಥಂಗನೆ ಎದ್ದುಹೋಗಿ ಬಾಗಿಲಿಗೆ ಬಂದಳು. ಅವಳಿಗೆ ತುಂಬಾ ನಿರಾಶೆಯಾಯಿತು. ಬಂದವರು ಗೋವಿಂದರಾಜನಲ್ಲ. ಒಬ್ಬ ಸೇವಕ. ಅವನು ಗುರುಗಳು ಕೊಟ್ಟಿದ್ದ ಪತ್ರವನ್ನು ಕುಸುಮೆಗೆ ತಲುಪಿಸಲು ಬಂದಿದ್ದ.

ಸೇವಕನು ಪತ್ರವನ್ನು ಕುಸುಮೆಯ ಕೈಗಿತ್ತು ಉತ್ತರಕ್ಕಾಗಿ ಅಲ್ಲೇ ಕಾದುನಿಂತ.

ಕುಸುಮೆ ಲಗುಬಗೆಯಿಂದ ಪತ್ರವನ್ನು ಓದಿಕೊಂಡಳು. ಮಗು ಕುಸುಮಾ, ನಿನಗೆ ಈ ಹಿಂದೆ ತಿಳಿಸಿದ್ದಂತೆ ನಿಮ್ಮ ತಾಯಿಯೊಂದಿಗೆ ನಾನು ಮಹಾರಾಣೀ ತಿರುಮಲಾದೇವಿಯವರನ್ನು ಈ ಸಂಜೆ ನೋಡಬೇಕೆಂದು ನಿರ್ಧರಿಸಿದ್ದೆ. ಆದರೆ ಹೊರಡುವ ಗಳಿಗೆಯಲ್ಲಿ ಮಹಾರಾಣಿಯವರು

ನಿನ್ನನ್ನೂ ನೋಡಲು ಬಯಸಿರುವರೆಂಬ ಸಂಗತಿಯನ್ನು ತಿಳಿದು ಈ ಪತ್ರ ಬರೆದಿದ್ದೇನೆ. ನೀನು ಈ ಪತ್ರ ಕಂಡಕೂಡಲೇ ತಡಮಾಡದೆ ಈ ಪತ್ರ ವಾಹಕನ ಜೊತೆಗೆ ಕಳುಹಿಸಿಕೊಟ್ಟಿರುವ ಮೇನೆಯಲ್ಲಿ ಇಲ್ಲಿಗೆ ಒಬ್ಬಳೇ ಹೊರಟು ಬಾ. ನೀನು ಇಲ್ಲಿಗೆ ಬಂದಮೇಲೆ ನಾವೆಲ್ಲ ಕೂಡಿ, ಮಹಾರಾಣಿಯವರನ್ನು ನೋಡಲು ಹೋಗೋಣ.

ಹೆಚ್ಚಿನ ವಿಷಯ ನೀನು ಇಲ್ಲಿಗೆ ಬಂದನಂತರ.

ಇಂತಿ ಆಶೀರ್ವಾದಗಳು.

ಭರತಾಚಾರ್ಯ

ಈ ಪತ್ರವನ್ನು ಓದಿ ಏನು ಮಾಡಬೇಕೆಂದು ಕುಸುಮೆಗೆ ತೋರಲಿಲ್ಲ. ಅವಳಿಗೆ ಈ ಪತ್ರವನ್ನು ಭರತಾಚಾರ್ಯರೇ ಬರೆದಿರುವುದರ ಬಗ್ಗೆ ಸಂಶಯವಿರಲಿಲ್ಲ. ಈ ಪತ್ರದ ಸಂದೇಶದಂತೆ ಅವರ ಮನೆಗೆ ತಾನು ಹೊರಟುಹೋದರೆ, ಗೋವಿಂದರಾಜನು ಮನೆಗೆ ಬರುವ ವೇಳೆಯಲ್ಲಿ ತಾನು ಮನೆಯಲ್ಲಿ ಇಲ್ಲದಿದ್ದರೆ ಹೇಗೆ? ಇದರಿಂದ ಅವನ ಮನಸ್ಸು ಬೇಸರವಾಗದೆ? ಈ ಪತ್ರವನ್ನು ನಿರ್ಲಕ್ಷಿಸಿ ಇಲ್ಲೇ ಇದ್ದುಬಿಟ್ಟರೆ ತನಗಾಗಿ ತನ್ನ ತಾಯಿ ಮತ್ತು ಗುರುಗಳು ಅಲ್ಲಿ ಕಾಯುತ್ತಾ ಕುಳಿತಿದ್ದಾರೆ! ಅವರು ಒಂದು ಮಹತ್ತ್ವಾರಿತ ಸಂಗತಿಯನ್ನು ಮಹಾರಾಣೀ ತಿರುಮಲಾದೇವಿಯವರೊಂದಿಗೆ ಚರ್ಚಿಸಿ ತೀರ್ಮಾನಕ್ಕೆ ಬರಲು ಹೊರಟಿದ್ದಾರೆ. ಪೂರ್ವಭಾವಿಯಾಗಿ ಈ ಭೇಟಿಯನ್ನು ಸಿದ್ಧಗೊಳಿಸಿಕೊಳ್ಳಲಾಗಿದೆ. ಅವರನ್ನು ನಿರಾಶೆಗೊಳಿಸುವುದು ಸಮಂಜಸವಲ್ಲ. ಅಲ್ಲದೆ ಮಹಾರಾಣಿಯವರು ತನ್ನನ್ನು ನೋಡಬಯಸಿರುವುದರಿಂದ, ತಮ್ಮ ಪ್ರಯಾಣವನ್ನು ನಿಲ್ಲಿಸಿ ತನಗಾಗಿ ಕಾಯುತ್ತಿದ್ದಾರೆ. ಇಂತಿರುವಲ್ಲಿ ತಾನು ಪತ್ರವಾಹಕನ ಹಿಂದೆ ಮೇನೆಯಲ್ಲಿ ಹೋಗಬೇಕೆ? ಬಿಡಬೇಕೆ? ಯಾವುದನ್ನೂ ನಿರ್ಧರಿಸಲಾರದೆ ಕೆಲಕಾಲ ಆತಂಕಗೊಂಡಳು ಕುಸುಮ.

ಪತ್ರವಾಹಕನು ಗಡಿಬಿಡಿಮಾಡಿದ. ಕೂಡಲೇ ಯಾವುದೂ ಇತ್ಯರ್ಥವಾಗಬೇಕಾಯಿತು. ಮನೆಯಲ್ಲಿ ಬೇರೆ ಯಾರೂ ಇರಲಿಲ್ಲ—ಜತೆಯಲ್ಲಿ ಕರೆದೊಯ್ಯಲು. ಅಲ್ಲದೆ ತಾನು ಹೋಗುವುದಾದರೂ ತನ್ನ ಗುರುಗಳ ಮನೆಗೆ. ಅಲ್ಲಿ ತನ್ನ ತಾಯಿ ತನಗಾಗಿ ಕಾಯುತ್ತಿದ್ದಾರೆ. ಅಲ್ಲದೆ ತಾವು

ಹೋಗುತ್ತಿರುವುದಾದರೂ ತನ್ನ ಭವಿಷ್ಯದ ಬಗ್ಗೆ ಮಹಾರಾಣಿಯವರೊಂದಿಗೆ ಪ್ರಸ್ತಾಪಮಾಡಿ ಒಂದು ಇತ್ಯರ್ಥಕ್ಕೆ ಬರಲು.

ಹಿಂದೆ ವಿಜಯಭದ್ರನೊಡನೆ ಕುಸುಮಾಜಿಯ ಮನೆಗೆ ಬಂದಾಗ, ವಿಜಯಭದ್ರನ ನಿಜವಾದ ಯೋಗ್ಯತೆ ಏನೆಂದು ಭರತಾಚಾರ್ಯರಿಗೆ ತಿಳಿಯಿತು. ಕುಸುಮೆಯ ಜೀವನ ಗಂಡಾಂತರದಲ್ಲಿ ಇದೆ ಎಂದು ಅವರಿಗೆ ಖಚಿತವಾಯಿತು. ಅವಳನ್ನು ವಿಜಯಭದ್ರನಿಂದ ರಕ್ಷಿಸಬೇಕಾದರೆ ಮಹಾಪ್ರಭುಗಳಿಂದಲ್ಲದೆ ಬೇರೆಯವರಾರಿಂದಲೂ ಅಸಾಧ್ಯವೆಂದು ಅವರು ಅರಿತಿದ್ದರು. ವಿಜಯಭದ್ರನಿಂದ ಕುಸುಮಾಜಿಗೆ ಒದಗುತ್ತಿರುವ ಕಿರುಕುಳ, ತೊಂದರೆಗಳನ್ನು ಮಹಾರಾಣಿ ತಿರುಮಲದೇವಿಯವರ ಮೂಲಕ ಮಹಾಪ್ರಭುಗಳಿಗೆ ತಿಳಿಸಿ, ಅವರು ಕುಸುಮೆಯ ರಕ್ಷಣೆಯ ವಿಷಯದಲ್ಲಿ ಒಂದು ನಿರೂಪ ಹೊರಡಿಸುವಂತೆ ಮಾಡಬೇಕೆಂದು, ಅದಕ್ಕಾಗಿ ಮಹಾರಾಣಿಯವರೊಂದಿಗೆ ಮಾತನಾಡಲು ಈ ದಿನವನ್ನು ಗೊತ್ತುಮಾಡಿದ್ದರು. ಇಂತಿರುವಲ್ಲಿ ಈ ಸದವಕಾಶವನ್ನು ಕುಸುಮಾಜಿ ತಪ್ಪಿಸಿಕೊಳ್ಳಬಲ್ಲಳೆ? ಅವಳು ಗೋವಿಂದರಾಜನು ಬಂದ ಕೂಡಲೇ ಅವನಿಗೆ ತಾನು ಗುರುಗಳ ಮನೆಗೆ ಹೊರಟಿರುವ ವಿಷಯವನ್ನು ತಿಳಿಸಬೇಕೆಂದು ಜೇಟಿಯೋರ್ವಳಿಗೆ ತಿಳಿಸಿ, ಪತ್ರವಾಹಕನೊಡನೆ ಬಂದಿದ್ದ ಮೇನೆಯಲ್ಲಿ ಕುಳಿತು ಹೊರಟಳು. ಬೋಯಿಗಳು ಮೇನೆಯನ್ನು ಹೊತ್ತು ನಡೆದರು.

ಕುಸುಮೆ ಮನೆಯಿಂದ ಹೊರಟುಹೋದ ಸುಮಾರು ಅರ್ಧತಾಸು ಕಳೆದಿರಬೇಕು. ತಿಪ್ಪಾಜಿ ಮನೆಗೆ ಬಂದಳು. ಅವಳನ್ನು ಕಾಣುತ್ತಲೇ ಮನೆಯ ಆಳುಗಳಿಗೆ ತುಂಬ ವಿಸ್ಮಯವಾಯಿತು. ಈಗಷ್ಟೇ ಮಹಾರಾಣಿಯವರನ್ನು ಭೇಟಿಮಾಡಿಸಲು ಹೊರಟಿದ್ದ ತಿಪ್ಪಾಜಿಯೇಕೆ ಮನೆಗೆ ಹಠಾತ್ತನೆ ಹಿಂದಿರುಗಿ ಬಂದಳೆಂದು ತಿಳಿಯದಾಯಿತು. ಅವರು ಬೆರಗಾಗಿ ಅವಳನ್ನು ನೋಡುತ್ತ ನಿಂತರು.

ತಿಪ್ಪಾಜಿ ಬಂದವಳೇ ನಿಮಿಷಕಾಲ ವಿಶ್ರಾಂತಿ ತೆಗೆದುಕೊಳ್ಳದೆ ಕುಸಮಾಜಿಯನ್ನು ಅರಸಿಕೊಂಡು ಮೇಲುಪ್ಪರಿಗೆಗೆ ಹೋದಳು. ಅಲ್ಲಿ ಕುಸುಮೆ ಇಲ್ಲದುದನ್ನು ಕಂಡು ಅವಳು ಬಗ್ಗೆ ವಿಚಾರಿಸಲಾಗಿ, ಕುಸುಮೆ ಗುರುಗಳ ಕಾಗದದಂತೆ ಮೇನೆಯಲ್ಲಿ ಅವರ ಮನೆಗೆ ಹೊರಟಳೆಂದು ಹೇಳಿ, ಪತ್ರ

ನ್ನು ತಿಪ್ಪಾಜಿಯ ಕೈಗೆ ಕೊಟ್ಟಳು ಸೇವಕಿ.

ಈ ಪತ್ರ ಕಂಡೇ ತಿಪ್ಪಾಜಿಯ ಎದೆಧಸಕ್ ಎಂದಿತು. ಅದನ್ನು ದಿಕೊಂಡೊಡನೆ ಆ ಪತ್ರದ ಇತಿಗತಿಗಳೊಂದೂ ತಿಳಿಯಲಿಲ್ಲ. ಆದರೆ ೋಟಕ್ಕೆ ಅದು ಭರತಾಚಾರ್ಯರೇ ಬರೆದಿದ್ದ ಪತ್ರ. ಅವರ ಅಕ್ಷರ, ಹಿ ಎಲ್ಲವೂ ಪರಿಚಯವಾದವುಗಳೇ. ಈ ಪತ್ರವನ್ನು ಅವರು ಯಾವಾಗ ರೆದರೆಂಬುದು ಅವಳಿಗೆ ಅರ್ಥವಾಗಲಿಲ್ಲ. ಇದನ್ನು ಅವರೇ ಬರೆದಿರುವ ರೋ ಇಲ್ಲವೋ ಎನ್ನುವುದೂ ಅನುಮಾನವಾಯಿತು. ಏಕೆಂದರೆ ಂಜೆ ಗೊತ್ತುಪಡಿಸಿದ್ದ ಕಾರ್ಯಕ್ರಮದಂತೆ ಮಹಾರಾಣಿಯವರನ್ನು ಭೇಟಿ ಾಡಲು, ಭರತಾಚಾರ್ಯರ ಮನೆಗೆ ಐದು ಗಂಟೆಗೆ ತಿಪ್ಪಾಜಿ ಬರಬೇಕಾ ತ್ತು. ಅದರಂತೆ ತಿಪ್ಪಾಜಿ ನಾಲ್ಕು ಗಂಟೆಗೇ ಮನೆ ಬಿಟ್ಟು ಐದು ಗಂಟೆಗೆ ರುಗಳ ಮನೆಯನ್ನು ತಲುಪಿದ್ದಳು. ಗುರುಗಳು ಆಚೆಗೆಲ್ಲೋ ಹೋಗಿರುವ ಂದೂ, ಮನೆಯಲ್ಲಿ ಅವರಿಗಾಗಿ ಕೆಲಹೊತ್ತು ಕಾದರೆ ಅವರು ಬರುವರೆಂದೂ, ನೆಯ ಸೇವಕರು ತಿಳಿಸಿದರು. ಅದರಂತೆ ತಿಪ್ಪಾಜಿ, ಗುರುಗಳು ಬಂದಾ ಂದು — ಅಲ್ಲಿಯ ತನಕ ಏಳು ಗಂಟೆಯ ತನಕ ಕಾದಿದ್ದಳು. ಅವರ ಳಿವು ಸಿಗಲಿಲ್ಲ. ಬಹುಶಃ ಬೇರೆ ಕೆಲಸಕಾರ್ಯಗಳೇನಾದರೂ ದ್ದಿರಬಹುದು – ಇಂದಿನ ಭೇಟಿಯನ್ನು ಕಾರಣಾಂತರಗಳಿಂದ ಮುಂದಕ್ಕೆ ಾಕಿರಬಹುದು, ಅಥವಾ ವಯೋಗುಣದಂತೆ ಇಂದಿನ ಕಾರ್ಯಕ್ರಮವನ್ನೇ ರೆತುಬಿಟ್ಟಿರಬೇಕು. ಎಂದುಕೊಂಡು, ತಿಪ್ಪಾಜಿ ನೇರ ಮನೆಗೆ ಬಂದಿದ್ದಳು. ನೆಯಲ್ಲಿ ನೋಡಿದರೆ ಇಲ್ಲಿ ಒಂದು ನಾಟಕವೇ ನಡೆದಿತ್ತು !

ಆ ಪತ್ರವನ್ನು ಮತ್ತೊಮ್ಮೆ ಓದಿಕೊಂಡಳು. ತಿಪ್ಪಾಜಿ ಅದರಲ್ಲಿ ಕುಸು ಾಜಿಯನ್ನು ತನ್ನ ಮನೆಗೆ ಬರಲು ಗುರುಗಳು ಸ್ಪಷ್ಟವಾಗಿ ಬರೆದಿದ್ದರು. ದರೆ ಕಾಗದದಲ್ಲಿ, ಅವರು ತನ್ನೊಂದಿಗೆ ತಿಪ್ಪಾಜಿ ಇರುವಳೆಂದೂ, ತಾವಿ ಬ್ಬರೂ ಕುಸುಮಾಜಿಗಾಗಿ ಕಾಯುತ್ತಿರುವುದಾಗಿಯೂ ಏಕೆ ಸುಳ್ಳು ಬರೆದಿರು ರು ? ಎಂಬುದು ತಿಳಿಯದಾಯಿತು. ಇಂದಿನ ಕಾರ್ಯಕ್ರಮದಂತೆ ಪ್ಪಾಜಿ ಮಾತ್ರ ಗುರುಗಳ ಮನೆಗೆ ಹೋಗಬೇಕಾಗಿತ್ತು. ಈಗ ಕುಸು ಾಜಿಯನ್ನೂ ಮನೆಗೆ ಬರಹೇಳಿದ್ದಾರೆ. ಹೀಗೆ ಬರಹೇಳಲು ಕಾರಣ ಹಾರಾಣಿಯವರಿಂದ ಬಂದ ಈಚಿನ ಸುದ್ದಿಯಂತೆ. ಅದು ಯಾವ

ಸುದ್ದಿಯೋ ದೇವರೇ ಬಲ್ಲ. ಅಂತೂ ಇದರಲ್ಲಿ ಯಾವುದೋ ಮೋಸ ಅಡಗಿದೆ. ತಿಳಿಯದೆ ಕುಸುಮೆ ಈ ಕಾಗದವನ್ನು ಗುರುಗಳ ಕಾಗದವೆಂದು ನಂಬಿ ಮೋಸಹೋಗಿ ಶತ್ರುಗಳು ಒಡ್ಡಿದ ಬಲೆಗೆ ಬಿದ್ದಿದ್ದಾಳೆ. ಇದು ಖಂಡಿತ ಎಂದುಕೊಂಡವಳೇ ಮನೆಯಲ್ಲಿ ನಿಲ್ಲಲು ಮನಸ್ಸಿಲ್ಲದೆ, ಕೂಡಲೇ ಗೋವಿಂದ ರಾಜನನ್ನು ಕರೆತರಲು ಸೇವಕರನ್ನು ಅಟ್ಟಿದಳು.

ಸೇವಕನು ಮನೆಯನ್ನು ಬಿಟ್ಟು ಹೊರಡುವುದಕ್ಕೂ ಗೋವಿಂದರಾಜನು ಮನೆಗೆ ಬರುವುದಕ್ಕೂ ಸರಿಹೋಯಿತು. ಬಾಗಿಲಿಗೆ ಬರುತ್ತಿದ್ದಂತೆ ತಿಪ್ಪಾಜಿ ಕುಸುಮೆಯ ಸುದ್ದಿಯನ್ನೆಲ್ಲ ಗಾಬರಿಗೊಂಡ ಧ್ವನಿಯಲ್ಲಿ ಹೇಳಿ ಅವಳ ಶೋಧನೆಗೆ ಚಡಪಡಿಸಿದಳು. ಈ ಸುದ್ದಿಯನ್ನು ಕೇಳಿ ಗೋವಿಂದರಾಜನಿಗೆ ಎದೆ ಪುಟಪುಟನೆ ಹಾರಿತು. ಕುಸುಮೆಯು ಶತ್ರುಗಳು ಒಡ್ಡಿರುವ ಮೋಸದ ಬಲೆಯಲ್ಲಿ ಸಿಕ್ಕಿ ಬಿದ್ದಿರುವಳೆಂಬುದರ ಬಗ್ಗೆ ಅವನಿಗೆ ಸಂಶಯ ಉಳಿಯಲಿಲ್ಲ. ತಾವು ಇಷ್ಟು ಮುಂಜಾಗ್ರತೆ ವಹಿಸಿದ್ದರೂ ಇಷ್ಟೆಲ್ಲಾ ರಕ್ಷಣಾವ್ಯವಸ್ಥೆ ಮಾಡಿದ್ದರೂ—ಕಡೆಗೂ ಶತ್ರುಗಳ ಒಳಸಂಚೇ ಫಲಕಾರಿಯಾಯಿತಲ್ಲ ಎಂದು ಏಕಕಾಲದಲ್ಲಿ ಅವನಿಗೆ ನಿರಾಶೆ, ದುಃಖ, ದುಗುಡ, ಎಲ್ಲವೂ ಉಂಟಾಯಿತು. ಅವನಿಗೆ ಏನುಮಾಡಲು ಚಣಕಾಲ ತೋರದೆ ಹೋಯಿತು. ವೇಳೆ ಮೀರಿದರೆ ಕುಸುಮೆಯ ಪ್ರಾಣಕ್ಕೆ ಗಂಡಾಂತರ ಖಂಡಿತವೆಂದು ತಿಳಿದು ಕೂಡಲೇ ಕುದುರೆಯನ್ನು ಹತ್ತಿ ಕುಸುಮೆಯ ಶೋಧನೆಗೆ ಹೊರಟ. ತನ್ನ ಹತ್ತಾರು ಮಂದಿ ಸಂಗಡಿಗರನ್ನು ಈ ಪತ್ತೆಯ ಕಾರ್ಯದಲ್ಲಿ ನಿಯೋಜಿಸಿದ.

ಅತ್ತ ಗೋವಿಂದರಾಜನು ಹೊರಟುಹೋದ ಮೇಲೆ ಮನೆಯಲ್ಲಿ ಕುಸುಮೆಯಿಲ್ಲದೆ ಇರಲು ಮನವರಿಯದೆ ತಿಪ್ಪಾಜಿಯು—ಕುಸುಮೆಯ ಪತ್ರದಂತೆ, ಗುರುಗಳ ಮನೆಗೆ ಹೋಗಿ ಅಲ್ಲಿ ತನಗಾಗಿ ಕಾಯುತ್ತಿರುವಳೇನೋ ಎಂಬುದನ್ನು ನೋಡಲು ಅವಳು ತಡಮಾಡದೆ ಗುರುಗಳ ಮನೆಗೆ ಹೊರಟಳು.

ಅವಳು ಗುರುಗಳ ಮನೆಗೆ ಬರುವ ವೇಳೆಗೆ ಸಂಜೆಯ ಸಂಚಾರದಿಂದ ಗುರುಗಳು ಇನ್ನೂ ಮನೆಗೆ ಬಂದಿರಲಿಲ್ಲ. ಆಗ ಹೋಗಿದ್ದವರು ಇನ್ನೂ ಮನೆಗೆ ಹಿಂದಿರುಗಿಲ್ಲವೆಂದು ಮನೆಯ ಸೇವಕನಿಂದ ತಿಳಿಯಿತು. ಅಲ್ಲದೆ ಅಲ್ಲಿಗೆ ಕುಸುಮೆಯಾಗಲೀ, ಮೇನೆಯಾಗಲೀ ಯಾವುದೂ ಬರಲಿಲ್ಲವೆಂದೂ

ತಿಳಿಸಿದರು. ಈ ಸುದ್ದಿಯನ್ನು ಕೇಳಿ ತಿಪ್ಪಾಜಿಯ ಎದೆ ಒಡೆದುಹೋಯಿತು. ಅವಳು ಅಲ್ಲೇ ಕುಸಿದು ಕುಳಿತಳು. ಹೀಗೇ ಅದೆಷ್ಟು ಹೊತ್ತು ಜ್ಞಾನ ತಪ್ಪಿ ಬಿದ್ದಿದ್ದಳೋ ಅವಳಿಗೆ ತಿಳಿಯದು. ಅವಳು ಎಚ್ಚತ್ತಾಗ, ಗೋವಿಂದರಾಜ ತನ್ನನ್ನು ಶುಶ್ರೂಷೆಮಾಡುತ್ತಿರುವುದು ತಿಳಿಯಿತು. ಅನಂತರ ತಿಳಿವು ಮೂಡಿದಂತೆ, ಕುಸುಮೆಯ ಬಗ್ಗೆ ಯಾವ ಸುದ್ದಿಯೂ ತಿಳಿಯದುದರಿಂದ, ತಿಪ್ಪಾಜಿ, ಎದೆ ಬಿರಿಯುವಂತೆ ಅತ್ತಳು. ತನ್ನ ಮಗಳನ್ನು ನೆನಸಿಕೊಂಡು, ಅವಳ ಕ್ಷೇಮಕ್ಕಾಗಿ ಕಂಡಕಂಡ ದೇವರನ್ನು ಮೊರೆಹೊಕ್ಕಳು. ಅವಳು ಕುಸುಮೆಗಾಗಿ ಹುಚ್ಚಿಯಂತೆ ಆಗಿದ್ದಳೆಂದರೂ ಸರಿ.

ಗೋವಿಂದರಾಜನಿಗೂ ಅಷ್ಟೇ ದುಃಖ ಉಂಟಾಗಿದ್ದರೂ ಅದು ದುಃಖಿಸುತ್ತಾ ಕೂಡುವ ವೇಳೆಯಲ್ಲವೆಂದು ಅವನು ಹೃದಯವನ್ನು ಕಲ್ಲುಮಾಡಿಕೊಂಡು, ಮೈಮೇಲೆ ಎಚ್ಚರವಿಲ್ಲದೆ ಕುಸುಮೆಗಾಗಿ ಬೀದಿ ಬೀದಿಗಳನ್ನು ಶೋಧಿಸುತ್ತಾ ನಡೆದಿದ್ದ.

ಸೇವಕರು ತಿಪ್ಪಾಜಿಯನ್ನು ಮೇನೆಯಲ್ಲಿ ಹೊತ್ತು ಮನೆಯನ್ನು ತಲುಪಿಸಿದರು. ತಿಪ್ಪಾಜಿಗೆ ದುಃಖದ ಆವೇಗದಿಂದ ಒಮ್ಮೊಮ್ಮೆ ಪ್ರಜ್ಞೆ ತಪ್ಪುತ್ತಿತ್ತು. ಮತ್ತೆ ತಿಳಿವು ಬಂದಾಗ ಮಗಳಿಗಾಗಿ ಹಂಬಲಿಸುತ್ತಿದ್ದಳು. ಅದೊಂದು ಕರುಣಾಜನಕವಾದ ನೋಟ. ಕಂಡಕಂಡವರನ್ನು, ಮಗಳನ್ನು ಕಂಡಿರಾ, ಎಂದು ಕೇಳುತ್ತಿದ್ದಳು. ಇದಕ್ಕೆ ಯಾರೂ ಸಮಾಧಾನಕರವಾದ ಉತ್ತರ ಕೊಡುವ ಸ್ಥಿತಿಯಲ್ಲಿ ಇರಲಿಲ್ಲ. ಎಲ್ಲರಿಗೂ ಒಂದೇ ಪ್ರಶ್ನೆ ಭಾದಿಸುತ್ತಿತ್ತು. ಮನೆಯನ್ನು ಬಿಟ್ಟು ಹೊರಟ ಕುಸುಮೆ ಎಲ್ಲಿಗೆ ಹೋದಳು? ಅವಳನ್ನು ಯಾರು ಅಪಹರಿಸಿಕೊಂಡು ಹೋದರು?

ಈ ಪ್ರಶ್ನೆಗೆ ಕುಸುಮೆಯೇ ಉತ್ತರ ಹೇಳಬೇಕಾಗಿತ್ತು. ಆದರೆ ಉತ್ತರ ಹೇಳುವ ಸ್ಥಿತಿಯಲ್ಲಿ ಅವಳು ಇರಲಿಲ್ಲ. ಅಂತಹ ವಿಚಿತ್ರ ಅವಸ್ಥೆ ಅವಳಿಗೇ ಉಂಟಾಗಿತ್ತು.

ಮೇನೆಯನ್ನು ಕಳುಹಿಸಿಕೊಟ್ಟು, ಕುಸುಮೆಯನ್ನು ಕರೆತರಲು ಕಾಗದ ಬರೆದವರೇನೋ ಭರತಾಚಾರ್ಯರೇ. ಆದರೆ ಆ ಕಾಗದವನ್ನು ಬರೆಸಿದವನು ಮಾತ್ರ ವಿಜಯಭದ್ರ.

ಭರತಾಚಾರ್ಯರು ಆ ದಿನ ಗೊತ್ತುಪಡಿಸಿದ್ದ ಕಾರ್ಯಕ್ರಮದಂತೆ,

ಮಹಾರಾಣಿಯವರ ಭೇಟಿಗೆ ಸಿದ್ಧರಾಗಿ, ಮನೆಯಲ್ಲಿ ತಿಪ್ಪಾಜಿಗೆ ಕಾಯುತ್ತ ಕುಳಿತಿದ್ದರು. ಅಷ್ಟರಲ್ಲಿ ಯಾರೋ ಗುರುಗಳನ್ನು ಅರಸಿಕೊಂಡು ಬಂದರು. ಅವರೊಡನೆ ಹೊರಗೆ ಹೊರಟ ಗುರುಗಳು ಮತ್ತೆ ಮನೆಯನ್ನೇ ಸೇರಲಿಲ್ಲ.

ಗುರುಗಳನ್ನು ಅರಸಿಕೊಂಡು ಬಂದವನು ವಿಜಯಭದ್ರನ ಅನುಚರನೊಬ್ಬ. ವಿಜಯಭದ್ರನ ಬಹಳ ದಿನಗಳ ಆಲೋಚನೆ ಇಂದು ಫಲಿಸಿತ್ತು. ಈ ಗುರುಗಳನ್ನು ಸಂಚಿಗೆ ಒಳಪಡಿಸಿಕೊಂಡು, ಅವರ ಮೂಲಕ ಕುಸುಮಾಜಿಯನ್ನು ಸೆರೆಹಿಡಿಯಬೇಕೆಂಬ ವಿಜಯಭದ್ರನ ಬಹಳ ದಿನಗಳ ಯೋಜನೆ ಅಂದು ಈಡೇರಿತ್ತು. ಅದಕ್ಕೆ ತಕ್ಕ ಸನ್ನಿವೇಶವೂ ಒದಗಿ ಬಂದಿತ್ತು. ಆ ದಿನ ಮಹಾರಾಣಿಯವರನ್ನು ಭೇಟಿಮಾಡಲು ತಿಪ್ಪಾಜಿ, ಹಾಗೂ ಗುರುಗಳು ಹೋಗುವರೆಂದು—ಪೂರ್ವಭಾವಿಯಾಗಿ, ವಿಜಯಭದ್ರನಿಗೆ ಗುಪ್ತಚಾರರ ಮೂಲಕ ತಿಳಿಯಿತು. ಇದೇ ಅವಕಾಶವನ್ನು ಉಪಯೋಗಿಸಿಕೊಂಡು ಮೀನನ್ನು ಬಲೆಯಲ್ಲಿ ಕೆಡವಿಕೊಳ್ಳಬೇಕೆಂದು ಆಲೋಚಿಸಿ, ತನ್ನ ಅನುಚರನನ್ನು ಅಟ್ಟಿ ಭರತಾಚಾರ್ಯರನ್ನು ಅವರ ಮನೆಯಿಂದ ಹೊರಗೆ ಬರುವಂತೆ ಮಾಡಿದ. ಅವರು ಮನೆಯಿಂದ ಹೊರಬಿದ್ದೊಡನೆಯೇ ಅವರ ಮೇಲೆ ನಾಲ್ಕಾರು ಜನ ಶಕ್ತರಾದ ಧಾಂಡಿಗರು ಬಿದ್ದು, ಅವರ ಕೈಕಾಲುಗಳನ್ನು ಕಟ್ಟಿ ಬಾಯಿಗೆ ಬಟ್ಟೆ ತುರುಕಿ, ಮೇನೆಯಲ್ಲಿ ಹೊತ್ತುಕೊಂಡು ಹೋಗಿ ವಿಜಯಭದ್ರನ ಕಾರ್ಯಭವನಕ್ಕೆ ತಂದುಬಿಟ್ಟರು. ಅಲ್ಲಿ ವಿಜಯಭದ್ರ ಅವರನ್ನು ಬಂಧಮುಕ್ತಗೊಳಿಸಿ, ಅವರೊಡನೆ ಸ್ನೇಹಪರ ಮಾತುಗಳನ್ನಾಡುತ್ತ, ಬಲಾತ್ಕಾರದಲ್ಲಿ ನಡೆದ ಅಕೃತ್ಯಕ್ಕೆ ಕ್ಷಮೆಯನ್ನು ಯಾಚಿಸಿದ. ಅನಂತರ ಹೇಳಿದ:

“ನಿರ್ವಾಹವಿಲ್ಲದೆ ತಮಗೆ ಈ ತೊಂದರೆ ಕೊಡಬೇಕಾಗಿ ಬಂತು. ತಮ್ಮನ್ನು ಇಲ್ಲಿಗೆ ಹೊತ್ತು ತಂದಿದ್ದರೂ ತಮ್ಮ ಪ್ರಾಣಕ್ಕೆ ಯಾವ ಭಯವಿಲ್ಲ. ತಾವು ಇಲ್ಲಿ ಯಾವುದಕ್ಕೂ ಆತಂಕ ಪಡುವ ಕಾರಣವಿಲ್ಲ. ನಾನು ವಿಜಯಭದ್ರ—ತಮ್ಮ ಪಾದ ಸೇವೆಗೆ ಸಿದ್ಧನಾಗಿದ್ದೇನೆ” ಎಂದು ಗುರುಗಳಿಗೆ ಉಪಚಾರ ಹೇಳಿ, ಅವರ ಅಸಮಾಧಾನ ಕಳೆಯಲು ಪ್ರಯತ್ನಿಸಿದ. ಇದರಿಂದ ಗುರುಗಳ ಸಿಟ್ಟು ಕಡಮೆಯಾಗಲಿಲ್ಲ. ಅವರು ವಿಜಯಭದ್ರನಂತಹ ನೀಚನೊಂದಿಗೆ ಮಾತು ಹಾಗಿರಲಿ—ತಲೆಯೆತ್ತಿ ನೋಡಬಾರದೆಂದೂ ನಿರ್ಧರಿಸಿ,

ಅವನನ್ನು ದಿಟ್ಟಿಸದೆ ಕಣ್ಣು ಮುಚ್ಚಿ ಕುಳಿತಿದ್ದರು. ಆದರೂ ಮುಖ ರೋಷದಿಂದ ಉರಿಯುತ್ತಿತ್ತು.

ಅವರ ಕೋಪ ಶಮನವಾಗದೆ ಇರುವುದನ್ನು ಕಂಡು ವಿಜಯಭದ್ರನೇ ಹೇಳಿದ.

"ನಮ್ಮ ಅಪಚಾರವನ್ನು ಕ್ಷಮಿಸಬೇಕೆಂದು ಸ್ನೇಹಧರ್ಮದಲ್ಲಿ ಬೇಡಿಕೊಂಡೆವು. ತಮ್ಮ ಚಿತ್ತಕ್ಕೆ ಬರಲಿಲ್ಲ. ಚಿಂತೆ ಇಲ್ಲ. ಈಗ ಯಾವುದನ್ನೂ ಮುಚ್ಚುಮರೆಮಾಡಿ ಪ್ರಯೋಜನವಿಲ್ಲ. ನೇರವಿಷಯ ಪ್ರಸ್ತಾಪಕ್ಕೆ ಬರೋಣ. ತಮ್ಮನ್ನು ಬಲವಂತವಾಗಿ ಹೊತ್ತು ತಂದ ಕಾರಣ ಇದು.... ತಮ್ಮಿಂದ ನಮಗೆ ಆಗಬೇಕಾದ ಉಪಕಾರ ಇದು........"

ಎಂದು ತಮ್ಮ ಎಲ್ಲ ಹಂಚಿಕೆಯನ್ನೂ ಗುರುಗಳ ಮುಂದೆ ಇಟ್ಟನು. ಭರತಾಚಾರ್ಯರಿಗೆ ತಮಗೆ ಈ ವಿಶ್ವಾಸ ಘಾತಕ ವಿದ್ಯೆಯನ್ನು ಬೋಧಿಸಲು ಬರುತ್ತಿರುವ ವಿಜಯಭದ್ರನ ನಮ್ರತೆಯನ್ನು ಕಂಡು ಮೈ ಕಿಡಿಕಿಡಿಯಾಯಿತು. ಅವರು ಆರ್ಭಟಿಸಿದರು. "ಹತ್ತಿರ ಸರಿಯಬೇಡ ನಾಯಿ! ದೂರ ತೊಲಗು!"

ಈ ಮಾತನ್ನು ಕೊಂಚವೂ ಕಿವಿಯ ಮೇಲೆ ಹಾಕಿಕೊಳ್ಳದ ವಿಜಯಭದ್ರ ಹೇಳಿದ.

"ತಾವು ಹಿರಿಯರು, ನಮ್ಮ ಶ್ರೇಯಾಕಾಂಕ್ಷಿಗಳೆಂದು ಇಷ್ಟೆಲ್ಲ ಮರ್ಯಾದೆ ಕೊಟ್ಟು ನಡೆದುಕೊಂಡೆವು. ತಮ್ಮಲ್ಲಿ ನಮ್ಮ ಮರ್ಯಾದೆಗೆ ಬೆಲೆಯಿಲ್ಲವೆಂದು ತಿಳಿದ ಮೇಲೆ ನಾವು ತಮ್ಮನ್ನು ಯಾವ ರೀತಿಯಲ್ಲಿ ನಡಸಿಕೊಳ್ಳಬೇಕೆಂಬುದು ತಿಳಿದಿದೆ" ಎಂದು ಸಜ್ಞೆಮಾಡಿ ಅಲ್ಲೇ ಇದ್ದ ಭರಮನಾಯಕನನ್ನು ಕರೆದು ಹೇಳಿದ. "ಈ ಹಾರುವಯ್ಯ ಒಳ್ಳೆಯ ಮಾತಿಗೆ ನಾವು ಹೇಳಿದಂತೆ ಕೇಳುವುದಿಲ್ಲವೆಂದು ಕಾಣುತ್ತೆ. ಇವನನ್ನು ಆ ಕಂಬಕ್ಕೆ ಬಿಗಿದು ಆ ಛಡಿಯಿಂದ ನಾಲ್ಕು ಬಾರಿಸು. ಅನಂತರ ಇವನು ಏನಾದರೂ ಹೇಳುವುದಿದ್ದರೆ ನಮಗೆ ಸುದ್ದಿ ತಿಳಿಸು" ಎಂದು ಹೇಳಿ ಅಲ್ಲಿಂದ ಹೊರಟುಹೋದನು.

ಭರಮನಾಯಕನು ಒಡೆಯನ ಅಪ್ಪಣೆಯನ್ನು ಪಾಲಿಸುವುದರಲ್ಲಿ ಅತಿ ಸ್ವಾಮಿಭಕ್ತ ಸೇವಕ. ಅವನಿಗೆ ಅಷ್ಟು ಹೇಳಿದುದೇ ಸಾಕು. ಆದರ

ನೂರ್ಮಡಿ ಶಿಕ್ಷೆಯನ್ನು ವಿಧಿಸುವ ಅಧಿಕಾರ ಅವನಿಗೆ ಕೊಟ್ಟಂತೆ ಆಗುತ್ತಿತ್ತು. ಅವನು ದಯಾಶೂನ್ಯನಾಗಿ, ವಯಸ್ಸಿನ ಭಾರದಿಂದ ಕುಗಿದ್ದ, ಜೀರ್ಣ ಶರೀರಿಯಾದ ಆ ಭರತಾಚಾರ್ಯರನ್ನು ದರದನೆ ಎಳೆದುಕೊಂಡು ಹೋಗಿ, ಅಲ್ಲಿ ಇದ್ದ ಕಂಭಕ್ಕೆ ಬಿಗಿದು ಕಟ್ಟಿದ. ಅನಂತರ ಛಡಿಯನ್ನು ಹದಗೊಳಿಸಿ, ಅವರ ಮುಖವನ್ನು ದುರದುರನೆ ನೋಡಿದ.

"ಈಗ ಏನು ಹೇಳುತ್ತೀರಿ? ನಾವು ಹೇಳಿದಂತೆ ಕೇಳುತ್ತೀರೋ, ಇಲ್ಲ ಈ ಛಡಿಯ ಸುಖವನ್ನು ಅನುಭವಿಸುತ್ತಾ ಪ್ರಾಣ ಬಿಡುತ್ತೀರೋ?" ಎಂದು ಗಹಗಹಿಸಿ ನಕ್ಕ.

"ನಾನು ಸತ್ತರೂ ನನ್ನ ಮನಸ್ಸಾಕ್ಷಿ ಒಪ್ಪದ ಹೇಯವಾದ ಕೆಲಸ ಮಾಡಲಾರೆ" ಎಂದರು ಭರತಾಚಾರ್ಯರು ಕಠೋರವಾಗಿ.

ಭರಮನಾಯಕ ಛಡಿಯನ್ನು ಎತ್ತಿ ಇನ್ನೇನು ಒಂದೇಟು ಹೊಡೆಯಬೇಕು ಎನ್ನುವಷ್ಟರಲ್ಲಿ ಅಲ್ಲಿ ವಿಜಯಭದ್ರನು ಕಾಣಿಸಿಕೊಂಡು ಭರಮನಾಯಕನನ್ನು ಒಂದು ನಿಮಿಷ ತಡೆಯಲು ಹೇಳಿದ.

"ಇನ್ನೂ ನಿಮ್ಮ ಸೊಕ್ಕು ಇಳಿಯಲಿಲ್ಲವೆ? ವೃಥಾ ಛಡಿ ಏಟುಗಳಿಂದ ಏಕೆ ಸಾಯುತ್ತೀರಿ ಇದರಿಂದ—ಯಾವ ಪುರುಷಾರ್ಥ ಸಿದ್ಧಿಯಾದಂತೆ ಆಗುತ್ತದೆ? ಸುಮ್ಮನೆ ಪ್ರಾಣ ಒಪ್ಪಿಸುವ ಬದಲು, ನಾವು ಹೇಳಿದಂತೆ ಕೇಳಿದರೆ, ನಮ್ಮ ಸರ್ವ ಕೋರಿಕೆಯನ್ನೂ ನೆರವೇರಿಸಿಕೊಟ್ಟರೆ, ತಮ್ಮನ್ನು ಈಗಲೇ ಬಿಡುಗಡೆ ಮಾಡುವುದು ಮಾತ್ರವಲ್ಲ, ನಮ್ಮಿಂದ ಆಗಿರಬಹುದಾದ ಎಲ್ಲ ಅಪಚಾರಕ್ಕೆ ಪ್ರಾಯಶ್ಚಿತ್ತ ರೂಪದಲ್ಲಿ ತಾವು ಬಯಸಿದಷ್ಟು ಸಂಭಾವನೆ ಕೊಡುತ್ತೇವೆ. ಇದರಿಂದ ನೀವು ಮುಂದೆ ಸಾಯುವ ತನಕ ನೆಮ್ಮದಿಯಾಗಿ ಇರುಬಹುದು. ಸುಮ್ಮನೆ ಇಲ್ಲದ ಧರ್ಮಜಿಜ್ಞಾಸೆಗೆ ಬಿದ್ದ ತಮ್ಮ ಅಮೂಲ್ಯವಾದ ಆಯುಸ್ಸನ್ನೇಕೆ ವ್ಯರ್ಥಮಾಡಿಕೊಳ್ಳುತ್ತೀರಿ........ಯೋಚಿಸಿ ನೋಡಿ...." ಎಂದು ಹೇಳಿದ.

ಭರತಾಚಾರ್ಯರೂ ಆಲೋಚಿಸಿದರು. ಮುಪ್ಪಾದ ಶರೀರಕ್ಕೆ ಛಡಿ ಏಟನ್ನು ನೆನೆದು ಹೆದರಿಕೆಯಾಯಿತೋ ಅಥವಾ ಅವರ ಮನಸ್ಸಿನಲ್ಲಿ ಬೇರೊಂದು ಉಪಾಯ ಹೊಳೆಯಿತೋ ಅಂತೂ ಅವರು "ನನ್ನಿಂದ ಆಗಬೇಕಾಗಿರುವ ಕೆಲಸವಾದರೂ ಏನು?" ಎಂದು ಕೇಳಿದರು.

" ತಾವು ಕುಸುಮಾಜಿಗೆ ಒಂದು ಪತ್ರವನ್ನು ಬರೆಯಬೇಕು."

" ಏನೆಂದು ?"

" ತಮ್ಮ ಮನೆಗೆ ಕೂಡಲೇ ಹೊರಟುಬರಬೇಕೆಂದು."

" ಹೊರಟುಬಂದು ನಿಮ್ಮ ಕೈಗೆ ಸಿಕ್ಕಿಬೀಳಲಿ ಎಂದೇ? ಆಗದು. ಖಂಡಿತ ನಾನು ಬರೆಯಲಾರೆ.... ನೀವು ಏನು ಶಿಕ್ಷೆ ಕೊಟ್ಟರೂ ನಾನು ಬರೆಯಲಾರೆ."

" ಹಾಗಾದರೆ ಛಡಿ ಏಟುಗಳಿಂದ ಸಾಯವುದೇ ಯೋಗ್ಯವೆಂದು ನೀವು ತೀರ್ಮಾನಿಸಿದಂತಾಯಿತು.

ಕೆಲವು ಕಾಲ ಭರತಾಚಾರ್ಯರು ಆಲೋಚಿಸಿದರು. 'ಈ ದುಷ್ಟರು ಹೇಳಿದಂತೆ ಕೇಳದೆ ಹೋದರೆ ತನ್ನ ಮೇಲೆ ಕರುಣೆಯಿಲ್ಲದೆ ಹಿಂಸಿಸಿ ಕೊಲ್ಲುತ್ತಾರೆ. ನಾನು ಸಾಯುವುದಂತೂ ಖಂಡಿತ. ಆದರೆ ಇಷ್ಟು ವರ್ಷ ಕಾಲ ಆಚಾರಸಂಪನ್ನನಾಗಿ, ವೇದಾಧ್ಯಯನ ಮಾಡಿದವನಿಗೆ ಈ ಬಗೆಯ ಸಾವೇ! ಇನ್ನು ತನ್ನ ದೇಹಕ್ಕೆ ದೊರೆಯುವ ಶವಸಂಸ್ಕಾರ?' ಅದನ್ನು ನೆನೆದು ಅವರ ಎದೆ ಗಡಗಡ ನಡುಗಿತು. ಅವರಿಗೆ ಸಾಯಲು—ಈ ಸ್ಥಿತಿಯಲ್ಲಿ ಕಾಗೆ ಹದ್ದುಗಳಂತೆ ಸಾಯಲು – ಅಂಜಿಕೆಯಾಯಿತು. ಅವರು ಆಲೋಚಿಸಿ ಒಂದು ನಿರ್ಧಾರಕ್ಕೆ ಬಂದು ಮುಟ್ಟಿದರು. ಇವರು ತಮ್ಮಿಂದ ಪತ್ರವನ್ನು ಬರೆಯಲು ಅಪೇಕ್ಷಿಸುತ್ತಿದ್ದಾರೆ. ಈ ಪತ್ರದಲ್ಲಿ ಕುಸುಮಾಜಿಗೆ ತಿಳಿಯುವಂತೆ, ಅಪಾಯದ ಸೂಚನೆಯೊಂದನ್ನು ಹೇಗಾದರೂ ಮಾಡಿಕೊಟ್ಟರೆ ಅವಳು ಈ ಪತ್ರ ಕಂಡು ಮೋಸಹೋಗುವುದಿಲ್ಲ. ಅವಳು ಬರದೇ ನಿಂತರೆ, ತಾನೂ ಉಳಿದುಕೊಂಡಂತೆ, ಅವಳೂ ಉಳಿದುಕೊಂಡಂತೆ ಆಗುತ್ತದೆ. ತಾನು ಉಳಿದುಕೊಂಡ ಮೇಲೆ ವಿಜಯಭದ್ರನ ದುರ್ನಡತೆಗಳನ್ನು ಮಹಾಪ್ರಭುಗಳ ಗಮನಕ್ಕೆ ತಂದು ತಕ್ಕ ಶಿಕ್ಷೆ ವಿಧಿಸಬೇಕು. ಎಂದುಕೊಂಡು, ಅವರು ಪತ್ರ ಬರೆದುಕೊಡಲು ಒಪ್ಪಿಕೊಂಡರು.

ಅದರಂತೆ, ಭರತಾಚಾರ್ಯರಿಗೆ ಬರೆಯುವ ಸಾಮುಗ್ರಿಗಳನ್ನು ತಂದು ಕೊಡಲಾಯಿತು. ಆದರೆ, ಬರವಣಿಗೆಯ ಸ್ವಾತಂತ್ರ್ಯ ತಮಗೆ ಇಲ್ಲವೆಂದು ತಿಳಿದಾಗ ಅವರಿಗೆ ಮತ್ತೆ ನಿರಾಶೆಯಾಯಿತು. ವಿಜಯಭದ್ರನು ಹೇಳಿದಂತೆ ತಾವು ಬರೆಯಬೇಕೆಂದು ತಿಳಿದಾಗ ಅವರಿಗೆ ತುಂಬ ವಿಷಾದವಾಯಿತು.

ದೇವರ ಮೇಲೆ ಭಾರಹಾಕಿ ಅವನು ಹೇಳಿದ್ದಂತೆ ಪತ್ರ ಬರೆದು ಸಿದ್ಧಗೊಳಿಸಿ, ನಡುಗುತ್ತಿರುವ ಕೈಯಿಂದ ಸಹಿಯನ್ನು ಹಾಕಿ, ಅವನ ವಶಕ್ಕೆ ಕೊಟ್ಟರು. ಅವರಿಗೆ ಈಗ ಒಂದೇ ಒಂದು ಸಮಾಧಾನ. ಕುಸುಮೆ ಬುದ್ಧಿವಂತಳಾದರೆ, ಖಂಡಿತ ಈ ಕಾಗದದಿಂದ ಅವಳು ಇದು ತಾನು ಸಹಜವಾಗಿ ಬರೆಯುವ ಪತ್ರವಲ್ಲವೆಂದು ಶಂಕಿಸಹುದು. ಅಲ್ಲದೆ, ಒಬ್ಬಳೇ ಹೊರಟು ಬಾ ಎನ್ನುವ ಒಬ್ಬಳೇ ಎನ್ನುವುದನ್ನು ನಡುಗಿಸಿ ಬರೆದು, ಅದಕ್ಕೆ ವಿಪರೀತಾರ್ಥ ಬರುವಂತೆ ಮಾಡಿದ್ದರು. ತನ್ನ ಜೀವ ಸುರಕ್ಷಿತವಾಗಿಲ್ಲವೆಂಬುದನ್ನು ಕುಸುಮೆ ತಿಳಿದಿದ್ದರೆ, ಅವಳು ಎಂದೂ ಒಂಟಿಯಾಗಿ ಮೇನೆಯಲ್ಲಿ ಹೊರಟುಬರುವುದಿಲ್ಲ, ಎಂದು ಅವರು ತರ್ಕಿಸಿದರು. ಆದರೆ ವಿಧಿವಿಲಾಸದ ಮುಂದೆ ಅವರ ತರ್ಕವಿತರ್ಕಗಳು ನಡೆಯಲಿಲ್ಲ.

ಈ ಪತ್ರವನ್ನು ಒಯ್ದು ಹೊರಟ ಭಂಟ ಕುಸುಮೆಯನ್ನು ತಲುಪಿ, ಕಾಗದವನ್ನು ಕೈಗೆ ಕೊಟ್ಟ. ಅದನ್ನು ಓದಿಕೊಂಡು, ಅದರಲ್ಲಿ ಯಾವ ಬಗೆಯ ವಿಶೇಷಾರ್ಥವನ್ನೂ ಕಾಣದೆ ಸರಳಮನಸ್ಸಿನ ಕುಸುಮೆ ತನ್ನಂತೆಯೇ ಇತರರೆಂದು ನಂಬಿ, ವಿಜಯಭದ್ರನ ಕಡೆಯವರು ತಂದಿದ್ದ ಮೇನೆಯಲ್ಲಿ ಬಂದು ಕುಳಿತಳು. ಇದು ಅವಳ ದೌರ್ಭಾಗ್ಯವೇ ಸರಿ.

ಮೇನೆಯಲ್ಲಿ ಕುಳಿತ ಕುಸುಮೆಗೆ ತಾನು ತಾಯಿಯನ್ನು ಎಷ್ಟು ಬೇಗ ಸೇರುವೆನೋ ಎನ್ನುವ ತವಕದಿಂದ, ದಾರಿ ಸವೆಯುವುದನ್ನು ನೋಡುತ್ತ ನಡೆದಿದ್ದಳು. ಅವಳಿಗೆ, ಮೇನೆಯು ಹೋಗುತ್ತಿದ್ದ ತೀವ್ರಗತಿಯಿಂದ ಆನಂದವೇ ಆಗಿತ್ತು. ಮೇನೆ ಮೊದಲು ಅವಳಿಗೆ ಚೆನ್ನಾಗಿ ಪರಿಚಯವಿದ್ದ ಬೀದಿಗಳಲ್ಲಿ ಹೋಯಿತು. ಅನಂತರ ಅವಳಿಗೆ ಅಪರಿಚಯವಾದ ಬೀದಿಗಳಲ್ಲಿ ತಿರುಗಿದಾಗ, ಆ ದಿಕ್ಕಿನಲ್ಲಿ ಗುರುಗಳ ಮನೆಯಿಲ್ಲವೆಂಬುದನ್ನು ಅರಿತು, ಮೇನೆಯವರಿಗೆ ಗುರುಗಳ ಮನೆ ತಿಳಿದಿದೆಯೋ ಇಲ್ಲವೋ ಎಂದು ಅನುಮಾನವಾಗಿ ಪ್ರಶ್ನಿಸಿದಳು. ಈ ದಾರಿಯಲ್ಲಿ ಹೋದರೆ ಹತ್ತಿರವಾಗುವುದೆಂದು ಅವರಿಂದ ಉತ್ತರ ಬಂತು. ಇದನ್ನು ಅವಳು ನಂಬದೆ ತನಗೆ ಪರಿಚಯವಾಗಿದ್ದ ದಾರಿಯಲ್ಲಿ ಕರೆದೊಯ್ಯಲು ಹೇಳಿದಳು. ಆದರೆ ಅವಳ ಮಾತನ್ನು ಲೆಕ್ಕಿಸದೆ ಮೇನೆಯನ್ನು ಹೊತ್ತಿದ್ದ ಬೋಯಿಗಳು ತಮ್ಮಪಾಡಿಗೆ ತಾವು ತಮ್ಮ ಮನಸ್ಸಿಗೆ ಬಂದ ದಾರಿಯಲ್ಲೇ ಹೊರಟುದನ್ನು ಕಂಡು,

ಕುಸುಮಾಜಿಗೆ ಯಾಕೋ ಅವರ ನಡವಳಿಕೆಯಿಂದ ಅನುಮಾನವಾಗಿ, ಅವಳ ಹೃದಯದಲ್ಲಿ ಮೊದಲ ಬಾರಿಗೆ ಹೆದರಿಕೆಯಾಯಿತು. ಈ ಮೇನೆಯನ್ನು ಹೊತ್ತಿರುವ ಜನ, ಜತೆಯಲ್ಲಿ ಬಂದಿರುವ ಸೇವಕರು ಹೊಸಬರು—ಇವರು ವಿಜಯಭದ್ರನ ಅನುಚರರೇ ಆಗಿದ್ದರೆ ಗತಿ ?

ಕುಸುಮಾಜಿ, ಮೇನೆಯ ದಿಕ್ಕನ್ನು ಬದಲಿಸಲು ಪ್ರತಿಭಟಿಸಿದಳು. ಅವಳ ಮಾತನ್ನು ಅವರು ಲಕ್ಷಿಸಲಿಲ್ಲ. ಇದನ್ನು ನೋಡಿ ಅವಳು ಮೇನೆಯಿಂದ ತಪ್ಪಿಸಿಕೊಂಡು ಹೋಗಲು ಪ್ರಯತ್ನಿಸಿದಳು. ಆಗ ಮೇನೆಯ ಪಕ್ಕದಲ್ಲಿ ಬರುತ್ತಿದ್ದ ಸೇವಕನು ಅವಳ ಮೇಲೆ ಬಿದ್ದು, ಅವಳ ಬಾಯಿ, ಕಣ್ಣುಗಳಿಗೆ ಬಟ್ಟೆಯನ್ನು ಕಟ್ಟಿ, ಕೈಕಾಲು ಹಗ್ಗ ಬಿಗಿದು ಅವಳನ್ನು ಮೇನೆಯಲ್ಲಿ ಹಾಕಿದ. ಅನಂತರ ಅವರು ತಮ್ಮ ಗಮ್ಯಸ್ಥಳಕ್ಕೆ ಹೊರಟರು.

ಮುಂದೆ ಕುಸುಮಾಜಿ ಕಣ್ಣು ತೆರೆಯಲು ಸಾಧ್ಯವಾದಾಗ ಅವಳು ಒಂದು ಕತ್ತಲಕೋಣೆಯಲ್ಲಿ ಇದ್ದಳು.

ಅವಳು ಇದ್ದ ಕೋಣೆ ಯಾವ ಶ್ರೀಮಂತಿಕೆಯ ಆಡಂಬರವನ್ನೂ ಮೆರೆದಿರಲಿಲ್ಲ. ಆದರೂ ಅಲ್ಲಿ ಎಲ್ಲ ಬಗೆಯ ಭೋಗವಸ್ತುಗಳೂ ಅಣಿಗೊಳಿಸಲ್ಪಟ್ಟಿದ್ದುವು. ಕುಸುಮೆ ತನಗೆ ಸ್ವಾತಂತ್ರ್ಯ ದೊರೆತ ಸಂತೋಷದಲ್ಲಿ ಸುತ್ತಲೂ ನೋಡಿದಳು. ಅವಳ ಕಣ್ಣಿಗೆ ಮುಂಕಾಗಿ ಉರಿಯುತ್ತಿದ್ದ ದೀಪದ ಬೆಳಕಿನಲ್ಲಿ ಒಂದು ತಟ್ಟೆಯಲ್ಲಿ ಇದ್ದ ಹಾಲು ಹಣ್ಣುಗಳೂ, ಮತ್ತೊಂದರಲ್ಲಿ ಇದ್ದ ಇತರ ಪಾನೀಯಗಳೂ ಕಾಣಿಸಿದುವು. ಅವಳು ತನ್ನ ಅಡಿಯ ಹಾಸಿಗೆಯನ್ನು ಮುಟ್ಟಿ ನೋಡಿದಳು. ಅದು ಯಾರದೋ—ಎಷ್ಟು ಕಾಲದ್ದೋ. ಒಂದು ಬಗೆಯ ಮಣಕುವಾಸನೆ ಬರುತ್ತಿತ್ತು. ಅದರಿಂದ ಥಂಗನೆ ಸಿಡಿದು ದೂರ ಬಂದಳು. ಆದರೆ ಹೋಗುವುದಾದರೂ ಎಲ್ಲಿಗೆ? ಅವಳನ್ನು ಬಂಧಮುಕ್ತಗೊಳಿಸಿ, ಆ ಕೋಣೆಯಲ್ಲಿ ಹಾಕಿ ಬೀಗ ಹಾಕಿಕೊಂಡು ಕೊರಮನಾಯಕ ವಿಜಯಭದ್ರನಿಗೆ ಸುದ್ದಿ ತಿಳಿಸಲು ಹೋಗಿದ್ದ. ಕುಸುಮೆ ಕೋಣೆಯಿಂದ ತಪ್ಪಿಸಿಕೊಂಡು ಹೋದಾಳೆಂದು ಶಸ್ತ್ರಸಜ್ಜಿತರಾದ ಸುಮಾರು ಹತ್ತಿಪ್ಪತ್ತು ಮಂದಿ ಸೈನಿಕರು ಕೋಣೆಯನ್ನು ಕಾಯುತ್ತ ಕುಳಿತಿದ್ದರು. ಕುಸುಮೆ ಕೋಣೆಯ ಬಾಗಿಲಿನ ಸಣ್ಣ ಕಿಂಡಿಯಿಂದ ಇದನ್ನು ನೋಡಿ ತನ್ನ ಮೇಲೆ ಸರ್ಪಕಾವಲು ಇದೆ

ಎಂದು ಅರಿತುಕೊಂಡಳು.

ಕುಸುಮೆ ಈ ಘಾತುಕರ ಕೈಗೆ ಸಕ್ಕಿಬಿದ್ದ ತನ್ನ ದುರ್ವಿಧಿಯನ್ನು ಹಳಿದುಕೊಂಡು ಅತ್ತಳು. ತನ್ನ ಚಿಂತೆಯಲ್ಲಿ ಕೊರಗಿ ಕಂಗಾಲರಾಗಿ ಕುಳಿತ ಗೋವಿಂದರಾಜ, ತಿಪ್ಪಾಜಿಯವರ ಸ್ಮರಣೆಯೂ ಆಯಿತು. ಅವರೊಂದಿಗೆ ಗುರುಗಳಾದ ಭರತಾಚಾರ್ಯರ ನೆನಪೂ ಆಯಿತು. ಅವರನ್ನು ನೆನೆದೊಡನೆ ಅವರೇ ಇಷ್ಟೆಲ್ಲ ಅನರ್ಥಕ್ಕೆ ಕಾರಣರೆಂದು ಅವರ ಮೇಲೆ ತುಂಬ ಸಿಟ್ಟೂ ಬಂತು. ಆದರೆ ಮರುಕ್ಷಣದಲ್ಲಿ ಕುಸುಮೆಯ ಸಾತ್ವಿಕ ಸ್ವಭಾವ, ಇದರಲ್ಲಿ ಗುರುಗಳ ತಪ್ಪು ಲವಲೇಶವೂ ಇಲ್ಲವೆಂದೂ, ಅವರನ್ನು ಮೋಸಪಡಿಸಿ, ಅವರಿಂದ ಹೀಗೆ ಬಲವಂತವಾಗಿ ಬರೆಸಿದ್ದಾರೆಂದೂ ಊಹಿಸಿ ಸಮಾಧಾನ ಹೊಂದಿತು. ಅವರೂ ತನ್ನಂತೆಯೇ ಮತ್ತೆ ಯಾವ ಗಂಡಾಂತರದ ಗತಿಯಲ್ಲಿ ಇದ್ದಾರೋ ಎಂದು ಅವರ ಬಗ್ಗೆ ಅವಳು ಪರಿತಪಿಸುವಂತೆ ಆಯಿತು.

ವಿಜಯಭದ್ರ ಬಯಸಿದ್ದ ಪತ್ರ ಬರೆದುಕೊಟ್ಟ ಮೇಲೆ ಭರತಾಚಾರ್ಯರ ಸ್ಥಿತಿ ನೆಟ್ಟಗೇ ಆಯಿತು. ವಿಜಯಭದ್ರ ಗುರುಗಳಿಂದ ಪತ್ರ ಬರೆಸಿಕೊಂಡು ಕುಸುಮಾಜಿಗೆ ಕೊಟ್ಟುಬರಲು ದೂತರನ್ನು ಅಟ್ಟಿ ಪತ್ರದಂತೆ ಕುಸುಮಾಜಿ ಹೊರಟು ಬರುತ್ತಾಳೋ ಇಲ್ಲವೋ ಎಂದು ಕಾಯುತ್ತ ಕುಳಿತ. ಕುಸುಮೆ ತನ್ನ ಕೈವಶವಾದ ಹೊರತು ಗುರುಗಳ ಬಿಡುಗಡೆ ಇಲ್ಲ. ಅತ್ತ ಕುಸುಮೆಯೂ ಕೈಗೆ ಹತ್ತದೆ ಇತ್ತ ಗುರುಗಳೂ ಬಿಡುಗಡೆಯಾದರೆ ತನಗೆ ಮುಂದೆ ತೊಂದರೆಯಾಗಬಹುದೆಂದು ವಿಜಯಭದ್ರನ ಎಣಿಕೆ. ಭರತಾಚಾರ್ಯರು ಬಿಡುಗಡೆಯಾದ ಮೇಲೆ ಖಂಡಿತ ಈ ಎಲ್ಲ ಸಂಗತಿಯನ್ನು ಪ್ರಸಿದ್ಧಪಡಿಸಿ, ತನ್ನ ವಿರುದ್ಧ ಇಂದಲ್ಲ ನಾಳೆಯಾದರೂ ದ್ವೇಷ ಸಾಧಿಸುವವರೇ. ಅವರು ದ್ವೇಷ ಸಾಧಿಸಿ ಆಗಬೇಕಾದ್ದೇನಿದೆ? ಕುಸುಮೆ ತನ್ನವಳಾದರೆ ಸರಿ! ಎಂದು ಅವರನ್ನು ಉಪೇಕ್ಷೆಮಾಡಿದ ವಿಜಯಭದ್ರ.

ಸ್ವಲ್ಪ ಹೊತ್ತಿಗೆ ವಿಜಯಭದ್ರನಿಗೆ ಪ್ರಿಯವಾದ ಸುದ್ದಿಯೇ ಬಂತು. ಕುಸುಮೆ ಮೇನೆಯಲ್ಲಿ ಹೊರಟು ಬಂದಳೆಂಬುದನ್ನು ಕೇಳಿ ವಿಜಯಭದ್ರನಿಗೆ ಕುಣಿದಾಡುವಷ್ಟು ಸಂತೋಷವಾಯಿತು. ತನ್ನ ಬಹಳ ದಿನಗಳ ಆಸೆ ಈಡೇರಿದುದಕ್ಕಾಗಿ ಅವನು ಮನದಲ್ಲೇ ಹರ್ಷಿಸಿದ. ಅವನು ಭರತಾಚಾರ್ಯ

ರನ್ನು ಕೂಡಲೇ ಬಿಡುಗಡೆ ಮಾಡಿ, ಅವರಿಗೆ ಸೂಕ್ತರೀತಿಯಲ್ಲಿ ಸನ್ಮಾನಿಸಿ, ಅವರ ಮನೆಗೆ ಕರೆದುಕೊಂಡು ಹೋಗಿ ಬಿಡಲು ಅಪ್ಪಣೆಮಾಡಿ, ಕುಸುಮೆಯ ಭೇಟಿಗೆ ಸಿದ್ಧನಾಗಿ ಕುಳಿತ. ಆ ವೇಳೆಗೆ ಭರಮನಾಯಕ ಕಾಣಿಸಿ ಕೊಂಡು ಕುಸುಮೆ ವಿಜಯಭದ್ರನ ಅಪ್ಪಣೆಯಂತೆ ಅಗಮ್ಯ ಸ್ಥಳದಲ್ಲಿ ಬಂಧಿ ಸಲ್ಪಟ್ಟಿರುವ ಸಂಗತಿಯನ್ನು ತಿಳಿಸಿದ. ವಿಜಯಭದ್ರನ ಉತ್ಸಾಹ, ಸಂತೋ ಷಗಳಿಗೆ ಈಗ ಮೇರೆ ಇರಲಿಲ್ಲ. ಅವನು ಭರಮನಾಯಕನ ಸಾಹಸವನ್ನು ಹೊಗಳಿ, ಅವನಿಗೆ ಅನೇಕ ಮೆಚ್ಚುಗೆಗಳನ್ನು ಕೊಟ್ಟು, ಅವನೊಂದಿಗೆ, ತಡ ಮಾಡದೆ, ಕುಸುಮೆಯು ಇದ್ದ ಸ್ಥಳಕ್ಕೆ ಬಂದ.

ಕುಸುಮಾಜಿ ನಿಂತಲ್ಲಿ ನಿಲ್ಲಲಾರದೆ, ಕೂತಲ್ಲಿ ಕೂಡಲಾರದೆ, ವ್ಯಗ್ರವಾದ ಮನಸ್ಸಿನಿಂದ, ಕೋಣೆಯಲ್ಲಿ ಶಥಪಥ ತಿರುಗುತ್ತಿದ್ದಳು. ಅವ ಳಿಗೆ ಈ ಕೋಣೆಯಿಂದ, ಈ ದುರುಳರಿಂದ ಹೇಗೆ ತಪ್ಪಿಸಿಕೊಂಡು ಹೋಗು ವುದು ಎನ್ನುವುದು ತಿಳಿಯದಾಗಿತ್ತು. ಎಷ್ಟು ಆಲೋಚನೆ ಮಾಡಿದರೂ ತಪ್ಪಿಸಿಕೊಳ್ಳುವ ಯಾವ ದಾರಿಯೂ ಕಾಣಿಸಲಿಲ್ಲ. ಅವಳ ಮನಸ್ಸು ಸುಮ್ಮನೆ ಹೊಯ್ದಾಡುತ್ತಿತ್ತು.

ದೂರದಲ್ಲಿ ಯಾರೋ ಬರುತ್ತಿರುವ ಸದ್ದು ಕೇಳಿಸಿತು. ಬಹುಶಃ ವಿಜಯಭದ್ರನೇ ಬರುತ್ತಿರಬೇಕು ಎಂದುಕೊಂಡು ಕುಸುಮೆ ಕೋಣೆಯ ಒಂದು ಬದಿಗೆ ಇದ್ದ ಸಣ್ಣ ವಾತಾಯನದ ಕಿಂಡಿಯ ಮೂಲಕ ಹೊರಗೆ ನೋಡಿದಳು. ಹೊರಗೆ ಗಾಢಾಂಧಕಾರ ಆವರಿಸಿತ್ತು. ಅವು ಅಮಾವಾಸ್ಯೆಯ ಮುಂದಿನ ದಿನಗಳು. ಆಕಾಶದಲ್ಲಿ ಅಗಣಿತ ಸಂಖ್ಯೆಯಲ್ಲಿ ನಕ್ಷತ್ರರಾಶಿ ಕಾಣಿಸಿತು. ತಂಗಾಳಿ ಮುಖಕ್ಕೆ ಬಂದು ಬಡಿಯಿತು. ಅದರ ಸುಖವನ್ನು ಅನುಭವಿಸುವ ಸ್ಥಿತಿಯಲ್ಲಿ ಕುಸುಮೆ ಇರಲಿಲ್ಲ.

ಕುಸುಮೆ ಕತ್ತಲಿನಲ್ಲಿ ದಿಟ್ಟಿಸಿ ನೋಡಿದಳು. ಯಾರೋ ಸೂಡಿನ ಬೆಳಕಿನಲ್ಲಿ ಇತ್ತಕಡೆಗೇ ಬರುತ್ತಿರುವಂತೆ ಕಂಡಿತು. ಬಹುಶಃ ಅವನು ವಿಜಯಭದ್ರನೇ ಇರಬೇಕು. ತನ್ನ ಶೀಲಹರಣಕ್ಕೆ ಬರುತ್ತಿದ್ದಾನೆ. ಬರಲಿ ........ಅಂತಹ ಸಾವಿರ ವಿಜಯಭದ್ರರು ಬಂದರೂ ತನ್ನನ್ನು ಭಂಗಪಡಿಸ ಲಾರರು. ತನ್ನನ್ನು ತಮ್ಮ ದುಷ್ಟ ಶಕ್ತಿಗೆ, ಪಾಶವೀಶಕ್ತಿಗೆ ಮಣಿಸಲಾರರು. ಅವರಿಗೆ ತಾನು ದಕ್ಕುವುದಿಲ್ಲ....ಅವರಿಗೆ ದೊರೆಯುವುದು ಕುಸುಮಾಜಿಯ

ಶವವೇ ಹೊರತು ಕುಸುಮಾಜಿಯ ಜೀವವಲ್ಲ! ಎರದು ತನ್ನ ತುಟಿಗಳನ್ನು ಕಚ್ಚಿದಳು.

ಕುಸುಮೆಯ ಊಹೆ ಸುಳ್ಳಾಗಲಿಲ್ಲ. ಕೆಲವು ನಿಮಿಷಗಳೊಳಗೇ ಕೋಣೆಯ ಬಾಗಿಲ ಬಳಿ ಶಬ್ದವಾಯಿತು. ಕೋಣೆಯನ್ನು ತೆರೆದುಕೊಂಡು ವಿಜಯಭದ್ರನು ಕುಸುಮೆಯ ಎದುರಿಗೆ ದೈತ್ಯಾಕಾರದಲ್ಲಿ ನಿಂತಿದ್ದ.

ಕುಸುಮೆಗೆ ಅವನ ಮುಖವನ್ನು ನೋಡಲು ಅಸಹ್ಯವಾಯಿತು. ಅವಳು ಅವನ ಮುಖವನ್ನು ನೋಡಲಾರದೆ, ಮುಖವನ್ನು ಮುಚ್ಚಿಕೊಂಡು ವಿಗ್ರಹ ದಂತೆ ಕುಳಿತಳು.

ಇದರಿಂದಲೇ ಎಲ್ಲವನ್ನೂ ಊಹಿಸಿ ತಿಳಿದ ವಿಜಯಭದ್ರ ಹೇಳಿದ.

“ ಕುಸುಮಾಜಿ, ನೀನು ನನ್ನನ್ನು ಹೃದಯ ಶೂನ್ಯನಾದ ರಾಕ್ಷಸನೆಂದು ತಿಳಿಯಬೇಡ. ನಾನು ನಿಮ್ಮೆಲ್ಲರಂತೆಯೇ ರಾಗದ್ವೇಷಗಳಿಗೆ ಹೊರತಾಗದ ಮನುಷ್ಯ. ನಾನು ನಿನ್ನಲ್ಲಿ ಮೋಹಗೊಂಡಿದ್ದೇನೆ. ಇದೇ ನಾನು ಮಾಡಿ ರುವ ಮಹಾಪರಾಧ. ಅದಕ್ಕಾಗಿ ನಿನಗೆ ಈ ಎಲ್ಲ ಶಿಕ್ಷೆ. ನೀನು ಆ ದಿನ ವಿಜಯವಿಠಲ ದೇವಾಲಯದಲ್ಲಿ ನೃತ್ಯವಾಡಿದಂದೇ ನನ್ನ ಹೃದಯದಲ್ಲಿ ನೆಲಸಿ ಬಿಟ್ಟೆ. ಅಂದಿನಿಂದ ನಾನು ನಿನಗಾಗಿ ಹುಚ್ಚನಾಗಿದ್ದೇನೆ. ನಿನ್ನ ಪ್ರೇಮ ಕ್ಕಾಗಿ ಚಾತಕಪಕ್ಷಿಯಂತೆ ಹಾತೊರೆಯುತ್ತಿದ್ದೇನೆ. ನಿನ್ನ ಪ್ರೇಮಕ್ಕಾಗಿ ನಾನು ಯಾವ ಸಾಹಸ ಬೇಕಾದರೂ ಮಾಡಬಲ್ಲೆ. ಯಾವ ತ್ಯಾಗಬೇಕಾದರೂ ಮಾಡಬಲ್ಲೆ. ನಿನ್ನ ಒಂದು ಕುಡಿನೋಟಕ್ಕಾಗಿ, ನಿನ್ನ ಒಂದು ಅಮೃತ ಸ್ಪರ್ಶ ಕ್ಕಾಗಿ ನಾನು ಅನೇಕ ವರ್ಷ ಕಾಯಬಲ್ಲೆ. ನೀನು ನನ್ನವಳಾಗಬೇಕು. ನಿನ್ನ ಒಲವು ನನ್ನದಾಗಬೇಕು ಎಂಬುವೇ ನನ್ನ ಆಸೆ.” ಎಂದು ಉನ್ಮತ್ತ ಪ್ರಣ ಯಿಯಂತೆ ಬಾಯಿಗೆ ಬಂದಂತೆ ಹೇಳತೊಡಗಿದ.

ಈ ಎಲ್ಲ ಮಾತು ಕೇಳಿ ಕುಸುಮೆಗೆ ಅವಳ ಸಿಟ್ಟಿನಲ್ಲೂ ನಗು ಬರದೇ ಇರಲಿಲ್ಲ. ವಿಜಯಭದ್ರನನ್ನು ಅವಳು ಅವನ ಕೃತ್ಯಗಳಿಂದ ಅಳೆದು ಅವ ನೊಬ್ಬನು ಹೃದಯಶೂನ್ಯ ರಾಕ್ಷಸ. ತನ್ನನ್ನು ಒಂದೂ ಮಾತನಾಡಿಸದೆ, ಒಂದೇ ಬಾರಿಗೆ ಕಬಳಿಸುತ್ತಾನೆ, ಎಂದೆಲ್ಲ ಭಾವಿಸಿದ್ದಳು. ಆದರೆ ವಿಜಯ ಭದ್ರನೂ ಇತರ ಪ್ರಣಯಿಗಳಂತೆಯೇ ಪ್ರಣಯಾಕಾಂಕ್ಷಿಯಾಗಿ ಪ್ರಾರ್ಥಿ ಸುವುದನ್ನು ನೋಡಿ ಅವಳಿಗೆ ಮೋಜೆನಿಸಿತು. ಆದರೂ ಕುಸುಮಾಜಿ ಒಂದು

ಬಾರಿಯೂ ತಲೆ ಎತ್ತಿ ನೋಡಲಿಲ್ಲ. ಒಂದು ಮಾತನ್ನೂ ಹೇಳಲಿಲ್ಲ.

ವಿಜಯಭದ್ರನೇ ಮುಂದುವರಿಸಿದ:

"ನಿನಗೆ ನನ್ನ ಮೇಲೆ ತುಂಬ ಅಸಮಾಧಾನವಿದೆ ಎಂಬುದನ್ನು ನಾನು ಬಲ್ಲೆ. ನಿನ್ನನ್ನು ನಾನು ಮೋಸಪಡಿಸಿ, ಕರೆತರಿಸಿದ್ದೇನೆ. ನಿನ್ನನ್ನು ತುಂಬ ಒರಟು ರೀತಿಯಲ್ಲಿ, ದಯಾಶೂನ್ಯ ರೀತಿಯಲ್ಲಿ ನಡಸಿಕೊಂಡಿದ್ದೇನೆ. ನನ್ನ ಈ ನಡವಳಿಕೆಯ ಕಾರಣ ನಿನ್ನಲ್ಲಿ ನನಗಿರುವ ಪ್ರೇಮ. ಪ್ರಣಯಾರ್ಥಿಯಾಗಿರುವ ನನ್ನಿಂದ ನಿನಗೆ ನಿರ್ವಾಹವಿಲ್ಲದೆ ತೊಂದರೆಯಾಗಿದೆ. ಇವುಗಳನ್ನು ನೀನು ಕ್ಷಮಿಸಿ, ನನ್ನಮೇಲೆ ಪ್ರೇಮಾಮೃತದ ಮಳೆಯನ್ನು ಕರೆದು ಪುನೀತನನ್ನಾಗಿ ಮಾಡು"

—ಎಂದು ಬಡಬಡಿಸಿದ.

ಕುಸುಮಾಜಿಯು ಯಾವ ಮಾತೂ ಆಡಲಿಲ್ಲ.

"ನಿನಗೆ ಇನ್ನೂ ವಿಜಯಭದ್ರನ ವಿಷಯ ಚೆನ್ನಾಗಿ ತಿಳಿದಿಲ್ಲ. ಅವನು ಒಲಿದರೆ ಅವನಂತಹ ಪ್ರಭುವಿಲ್ಲ; ಮುನಿದರೆ, ಅವನಂತಹ ಕೆಡುಕನಿಲ್ಲ. ನಾನು ಇದುವರೆಗೆ ಯಾರನ್ನೂ ಹೀಗೆ ಪ್ರಣಯಾರ್ಥಿಯಾಗಿ ಅಂಗಲಾಚಿರಲಿಲ್ಲ! ನನ್ನ ಕೃಪಾಕಟಾಕ್ಷಕ್ಕೆ ಇದಿರು ನೋಡುವ ಸಾವಿರ ಹೆಣ್ಣುಗಳನ್ನು ಕಡೆಗಣಿಸಿ, ನಿನಗೆ ನಾನು ಒಲಿದು ಬಂದಿದ್ದೇನೆ. ನೀನು ಅದೃಷ್ಟಶಾಲಿಯೇ ಹೌದು. ನೀನು ನನ್ನ ಭೋಗಕಾಂತೆಯಾಗಿರಲು ಒಪ್ಪದಿದ್ದರೆ ನಿನ್ನನ್ನು ಶಾಸ್ತ್ರೋಕ್ತವಾಗಿ ವಿವಾಹವಾಗುತ್ತೇನೆ. ನಿನ್ನನ್ನೇ ನನ್ನ ಎಲ್ಲ ಸಂಪತ್ತಿಗೆ ಸಾಮ್ರಾಜ್ಞಿಯನ್ನಾಗಿ ಮಾಡುತ್ತೇನೆ. ಯಾವುದನ್ನೂ ನಿಧಾನವಾಗಿ ಆಲೋಚಿಸಿ ತಿಳಿಸು. ದುಡುಕಬೇಡ. ನಿನ್ನನ್ನು ಬಲಾತ್ಕರಿಸುವುದು ನನಗೆ ಇಷ್ಟವಿಲ್ಲ. ಬಲಾತ್ಕರಿಸುವಂತೆ ಇದ್ದರೆ ನೀನು ನನ್ನ ಪಂಜರದ ಹಕ್ಕಿ. ಇಲ್ಲಿಂದ ತಪ್ಪಿಸಿಕೊಂಡು ಹೋಗಲಾರೆ. ಇನ್ನು ನಿನ್ನ ಆ ಗೋವಿಂದರಾಜನ ಆಸೆಯನ್ನು ಬಿಟ್ಟುಬಿಡು. ಅವನಿಂದ ನಿನಗೆ ಯಾವ ಪ್ರಯೋಜನವೂ ಇಲ್ಲ. ಅವನನ್ನು ನಂಬಿ ನೀನು ಎಷ್ಟು ಸುಖ ಪಡಲು ಆಶಿಸಿದೆಯೋ ಅದರ ನೂರ್ಮಡಿ ಸುಖ ನಿನ್ನದಾಗುತ್ತದೆ. ವಿಜಯಭದ್ರನ ಅಧಿಕಾರ, ಅಂತಸ್ತು, ಶ್ರೀಮಂತಿಕೆಗಳಿಗೆ ನೀನು ಏಕೈಕ ಅಧಿಕಾರಿಯಾಗುತ್ತೀಯೆ. ನಿನಗೆ ಯಾವುದಕ್ಕೂ ಕೊರತೆಯಾಗದಂತೆ ನೋಡಿಕೊಳ್ಳುತ್ತೇನೆ. ನೀನು ಯಾವು

ದಕ್ಕೂ ಆಲೋಚಿಸಿ ತಿಳಿಸು. ನನಗೆ ಬೇಕಾಗಿರುವುದು ನಿನ್ನ ದೇಹ ಮಾ
ವಲ್ಲ, ನಿನ್ನ ಬಲವು, ಹೃದಯಪರಿವರ್ತನೆ....ಆದುದರಿಂದಲೇ ನಿನಗೆ ಇ
ಸ್ವತಂತ್ರ್ಯಕೊಟ್ಟಿದ್ದೇನೆ. ಎಲ್ಲ ಸೌಲಭ್ಯ ಕಲ್ಪಿಸಿಕೊಟ್ಟಿದ್ದೇನೆ. ನೀ
ನಿನ್ನ ಮನದ ನಿರ್ಧಾರವನ್ನು ನನಗೆ ನಾಳೆ ಹೊತ್ತುಮೂಡುವುದರೊ
ತಿಳಿಸಿದರೆ ಸಾಕು. ನಮ್ಮಿಬ್ಬರ ಚಿರಬಾಂಧವ್ಯಕ್ಕೆ ನಾಳೆಯೇ ಪ್ರಶಸ್ತ ಲ
ವಾಗಲಿ" ಎಂದು ಹೇಳಿ ವಿಜಯಭದ್ರ ಅಲ್ಲಿ ನಿಲ್ಲದೆ ಹೊರಟುಹೋದನು.

ಕುಸುಮೆಗೆ ಆಶ್ಚರ್ಯದ ಮೇಲೆ ಆಶ್ಚರ್ಯ. ವಿಜಯಭದ್ರನು ಇ
ಮನವೀಯವಾಗಿ ನಡೆದುಕೊಳ್ಳುವನೆಂದು ಅವಳು ಖಂಡಿತ ತಿಳಿದಿರಲಿ
ಪಶುವಾಗಿದ್ದ ವಿಜಯಭದ್ರ ಒಮ್ಮೆಲೇ ಕರುಣೆಯ ಮೂರ್ತಿಯಾಗಿ ಮಾಪ
ಟಾಗಿರುವುದರಲ್ಲಿ ಯಾವುದೋ ಮೋಸವಿದೆ ಎಂದು ಕುಸುಮೆಗೆ ತಿಳಿಯ
ಹೋಗಲಿಲ್ಲ.

ವಿಜಯಭದ್ರನ ಬೆಣ್ಣೆಯ ಮಾತುಗಳಿಗೆ ತಾನು ಬಲಿಯಾಗಬಾರ
ಎಂತಹ ಕಠಿಣಪ್ರಸಂಗದಲ್ಲೂ ಗೋವಿಂದರಾಜನಿಗೆ ದ್ರೋಹ ಬಗೆದು ಬಾ
ವುದಕ್ಕಿಂತ ಸಾವನ್ನು ಅಪ್ಪಿಯಾದರೂ ತನ್ನ ಪವಿತ್ರತೆಯನ್ನುಕಾಯ
ಕೊಳ್ಳಬೇಕು—ಎಂದುಕೊಂಡಳು.

ಈ ನಿರ್ಧಾರದ ಮುಂದೆ ವಿಜಯಭದ್ರ ಮಾಡಿದ್ದ ಎಲ್ಲ ಪ್ರಲೋ
ಗಳೂ ಮಂಜಿನಂತೆ ಕರಗಿಹೋದುವು. ಒಳ್ಳೆಯ ಮಾತುಗಳಿಂದ, ಕಾಯ
ಸಾಧಿಸಲೆತ್ನಿಸುತ್ತಿರುವ ವಿಜಯಭದ್ರನ ಜಾಣ್ಮೆಯನ್ನು ಕಂಡು, ಕುಸುವ
ತಾನೂ ಅದೇ ಬಗೆಯಾಗಿ ನಾಟಕ ಹೂಡಿ ಈ ಕಿರಾತನ ಬಲೆಯಿಂದ ತಪ್ಪಿ
ಕೊಂಡು ಹೋಗಬೇಕೆಂದು, ಅವಳು ಯಾವ ದಾರಿಯಲ್ಲಿ ಹೋದರೆ ತ
ಬಿಡುಗಡೆಯಾದೀತೆಂದು ಬಹುವಾಗಿ ಆಲೋಚಿಸಿ, ಕಡೆಗೆ ಒಂದು ನಿರ್ಧಾ
ರವನ್ನು ಮುಟ್ಟಿದಳು.

ವಿಜಯಭದ್ರನು ಅಲ್ಲಿಂದ ಹೊರಟುಹೋಗಿ ಸುಮಾರು ಒಂ
ತಾಸು ಕಳೆದಿರಬಹುದು. ಕುಸುಮೆ ಹಾಸಿಗೆಯಿಂದ ಎದ್ದವಳೇ ಬಾಗಿಲ
ಶಬ್ದಮಾಡಿ, ಭರಮನಾಯಕನನ್ನು ಎಚ್ಚರಿಸಿದಳು. ಭರಮನಾಯಕ
ಕೋಣೆಯನ್ನು ತೆರೆದುಕೊಂಡು ಒಳಗೆ ಬಂದು ಏನೆಂದು ವಿಚಾರಿಸಿದ.

ಕುಸುಮಾಜಿ ಗಂಭೀರವಾಣಿಯಲ್ಲಿ ಹೇಳಿದಳು.

ವಿಜಯಭದ್ರರು ನನಗೆ ಸರಿಯಾದ ಬುದ್ಧಿವಾದ ಹೇಳಿ, ಕಣ್ಣಿಗೆ ಕವಿದಿದ್ದ ಪರೆಯನ್ನು ಕಳಚಿದ್ದಾರೆ. ಅವರು ಹೇಳುವ ಮಾತಿನಲ್ಲಿ ಸತ್ಯಾಂಶ ಇದೆ. ನಾನು ಗೋವಿಂದರಾಜನನ್ನು ನಂಬಿದರೆ ಪಡುವ ಸುಖ ಅಷ್ಟರಲ್ಲಿಯೇ ಇದೆ. ನಿಮ್ಮ ಶ್ರೀಮಂತರನ್ನು ನಂಬಿದರೆ, ಅವರ ಸಮಸ್ತ ಸಂಪತ್ತಿಗೂ ನಾನೇ ರಾಣಿಯಾಗಬಹುದು. ಅವರಿಗೆ ನನ್ನಲ್ಲಿರುವ ಪ್ರೀತಿಯನ್ನು ನೆನೆದು ನನ್ನ ಹೃದಯ ಅವರಿಗಾಗಿ ಮರುಗುತ್ತಿದೆ. ನಾನು ಅವರ ಸದ್ಗುಣಗಳಿಗಾಗಿ, ಔದಾರ್ಯಕ್ಕಾಗಿ ಮಾರುಹೋಗಿದ್ದೇನೆ. ನಾನು ಇನ್ನು ಇಲ್ಲಿ ಇರಲು ಸಾಧ್ಯವಿಲ್ಲ. ವಿಜಯಭದ್ರರನ್ನು ಬಿಟ್ಟು ಕ್ಷಣಕಾಲವೂ ಇರಲು ಸಾಧ್ಯವಿಲ್ಲವೆಂದು ಅನಿಸುತ್ತಿದೆ. ಆದುದರಿಂದ ದಯವಿಟ್ಟು ನೀವು ಈ ಕೂಡಲೇ ನನ್ನನ್ನು ವಿಜಯಭದ್ರರ ನಿವಾಸಕ್ಕೆ ಕರೆದುಕೊಂಡು ಹೋಗಿಬಿಡಿ. ನಾನು ಅವರಲ್ಲಿ ಮೊದಲು ಕ್ಷಮೆ ಯಾಚಿಸಬೇಕಾಗಿದೆ. ನನ್ನ ಉದ್ಧಟತನವನ್ನು ಕ್ಷಮಿಸಲು ಬೇಡಿಕೊಳ್ಳಬೇಕಾಗಿದೆ." ಎಂದು ಆವೇಶಗೊಂಡವಳಂತೆ ಮಾತನಾಡಿದಳು.

ಕುಸುಮಾಜಿಯ ಮಾತುಗಳು ಭರಮನಾಯಕನ ಮೇಲೆ ತುಂಬ ಪರಿಣಾಮವನ್ನು ಉಂಟುಮಾಡಿದುವು. ಅವನಿಗೆ ಕುಸುಮಾಜಿಯ ಮಾತುಗಳು ಕೇವಲ ತೋರಿಕೆಯ ಮಾತುಗಳೆಂದು ಕಾಣಲಿಲ್ಲ. ಸಂತಪ್ತ ಪ್ರಣಯಿಸಿದ ಮಾತುಗಳಾಗಿ ಭಾಸವಾಯಿತು. ಏಕೆಂದರೆ, ವಿಜಯಭದ್ರನಂತಹ ಶ್ರೀಮಂತರ ಮಡದಿಯಾಗುವುದೆಂದರೆ ಇದು ಎಲ್ಲರಿಗೂ ದೊರೆಯುವ ಭಾಗ್ಯವೇ? ವೇಳೆ ಕಳೆದರೆ—ವಿಜಯಭದ್ರನ ಮನಸ್ಸೆಲ್ಲಿ ಬದಲಾಗಿಬಿಡುವುದೋ ಏನೋ ಎಂದು ಭ್ರಮಿಸಿ, ಕುಸುಮೆ ಹೀಗೆ ಉತ್ಕಂಠಿತಳಾಗಿರುವಳೆಂದು ಅವನು ಬಗೆದು—ಕುಸುಮೆಯು ಹೇಳಿದಂತೆ, ವಿಜಯಭದ್ರನ ಮನೆಗೆ ಅವಳನ್ನು ಕರೆದೊಯ್ಯಲು ಒಪ್ಪಿದ. ಇದರಲ್ಲಿ ಭರಮನಾಯಕನ ಸ್ವಾರ್ಥವೂ ಸೇರಿತ್ತು. ಕುಸುಮೆಯ ಮಾರ್ಪಾಡಿಗೆ ತಾನೇ ಕಾರಣನೆಂದು ಹೇಳಿಕೊಂಡು, ವಿಜಯಭದ್ರನ ಸಮ್ಮುಖಕ್ಕೆ ಅನಿರೀಕ್ಷಿತವಾಗಿ ಕುಸುಮೆಯನ್ನು ತಂದುಬಿಟ್ಟರೆ ತನಗೆ ಭಾರಿ ಬಹುಮಾನ ಬರುವುದೆಂದು ಎಣಿಕೆಹಾಕಿದ.

ಕೂಡಲೆ ಅವನು ಬೋಯಿಗಳನ್ನು ಎಚ್ಚರಗೊಳಿಸಿ, ಮೇನೆಯನ್ನು ಸಿದ್ಧಗೊಳಿಸಲು ಹೇಳಿದ. ಮೇನೆ ಸಿದ್ಧವಾದೊಡನೆಯೇ, ಮಿತಪರಿವಾರ

ದೊಡನೆ, ಕುಸುಮೆಯನ್ನು ಮೇನೆಯಲ್ಲಿ ಕೂಡಿಸಿಕೊಂಡು ವಿಜಯಭದ್ರ
ಪ್ರಮೋದಭವನದ ಕಡೆಗೆ ಹೊರಟ.

ಹೊರಗೆ ಗಾಢಾಂಧಕಾರ. ಎಲ್ಲೆಲ್ಲೂ ಕೃಷ್ಣಪಕ್ಷದ ಕತ್ತಲು
ಎದುರಿಗೆ ಏನಿದೆ ಅಕ್ಕಪಕ್ಕದಲ್ಲಿ ಏನಿದೆ ಎಂಬುದು ತಿಳಿಯದಷ್ಟು ದಟ್ಟವಾ
ಕಗ್ಗತ್ತಲು. ಇಂತಹ ರಾತ್ರಿಯಲ್ಲಿ ಭರಮನಾಯಕನು ಮೇನೆಯೊಡ
ನಿಶಾಚರನಂತೆ ಹೊರಟಿದ್ದ. ಹೆಚ್ಚು ಬೆಳಕಿದ್ದರೆ ತಮಗೆ ತೊಂದರೆಯಾಗ
ವುದೆಂದು—ಒಂದೆರಡು ಸೂಡಿ ಬೆಳಕನ್ನು ಮಾತ್ರ ನೆಚ್ಚಿ ಮುಂದೆ ಸಾಗಿದ್ದರು
ಆ ಕತ್ತಲಿನಲ್ಲಿ ದಾರಿ ತಿಳಿಯದೆ ಮೇನೆಯವರು ಮುಗ್ಗರಿಸಿದಾಗ, ಕುಸುಮೆ
ಮೈ ಪುಳಕವಾಗುತ್ತಿತ್ತು. ತನ್ನ ಬಿಡುಗಡೆಯ ವೇಳೆ ಹತ್ತಿರ ಬರುತ್ತಿ
ಎಂದು ಅಂದುಕೊಳ್ಳುತ್ತಿದ್ದಳು. ತಾನು ತಪ್ಪಿಸಿಕೊಳ್ಳಬೇಕಾದರೆ, ಇದೆ
ಉತ್ತಮವಾದ ಸದವಕಾಶ. ಈ ಗಾಢಾಂಧಕಾರದಲ್ಲಿ ಇವರ ಕೈಯಿಂ
ತಪ್ಪಿಸಿಕೊಂಡುಬಿಟ್ಟರೆ ಮತ್ತೆ ಇವರಿಗೆ ತಾನು ಸಿಗುವುದಿಲ್ಲ. ಈ ಕತ್ತ
ಯಲ್ಲಿ ಎಲ್ಲಾದರೂ ತಲೆಮರಸಿಕೊಂಡಿದ್ದು ಬೆಳಗಾದ ಮೇಲೆ, ಮನೆಯನ್ನು
ಸುರಕ್ಷಿತವಾಗಿ ಸೇರಿಕೊಳ್ಳಬಹುದು—ಎಂದು ತನ್ನ ಕಾರ್ಯಾಚರಣೆಗೆ ಅನ
ಕೂಲವಾಗುವ ಸನ್ನಿವೇಶಕ್ಕಾಗಿ ಕಾದು ಕುಳಿತಿದ್ದಳು.

ಭರಮನಾಯಕನು ಒಳ್ಳೆ ಮುತ್ಸದ್ದಿ. ಅವನಿಗೆ ಕುಸುಮೆಯ ಮಾತ
ಗಳಲ್ಲಿ ನಂಬಿಕೆಯುಂಟಾಗಿದ್ದರೂ, ಕುಸುಮೆಯನ್ನು ಬಂಧಿಸದೆ ಮೇನೆಯ
ಕರೆದೊಯ್ದರೆ, ಆಕಸ್ಮಾತ್ ಅವಳು ತಪ್ಪಿಸಿಕೊಂಡು ಹೋದರೆ ತನ್ನ ತ
ಉಳಿಯವುದಿಲ್ಲವೆಂದು ಗೊತ್ತು. ಅಂತಲೇ ಅವನು ಕುಸುಮೆ ತಪ್ಪಿಸಿಕೊಂಡ
ಹೋಗದಂತೆ, ಕಾಲುಕೈಗಳನ್ನು ಕಟ್ಟಿದ್ದ.

ಈ ಕಟ್ಟುಗಳನ್ನು ಬಿಚ್ಚಿಕೊಳ್ಳುವುದು ಹೇಗೆಂದು ಕುಸುಮೆ
ಬಗೆಹರಿಯಲಿಲ್ಲ. ಅಷ್ಟರಲ್ಲಿ ಅವಳಿಗೊಂದು ಉಪಾಯ ಹೊಳೆಯಿತು
ಒಮ್ಮೆ ಬೋಯಿಗಳು ದಾರಿಯಲ್ಲಿ ಹಳ್ಳದಲ್ಲಿ ಕಾಲಿಟ್ಟು ಮೇನೆಯನ್ನು ಓ
ಮಾಡಿದಾಗ, ಮೇನೆಯ ಬಾಗಿಲನ್ನು ತೆರೆದುಕೊಂಡು ನೆಲದ ಮೇಲೆ ಬಿದ್ದು
ಬಿಟ್ಟಳು. ಮೇನೆ ಅಲುಗಾಡಿದುದರಿಂದ ಹಾಗೆ ಉಂಟಾಯಿತೆಂದ
ತಿಳಿದು, ಭರಮನಾಯಕ, ನೆಲಕ್ಕೆ ಬಿದ್ದ ಕುಸುಮೆಯನ್ನು ಉಪಚರಿಸಿದ
ಅವಳು ಬಿದ್ದ ಪೆಟ್ಟಿಗೆ ಉಸಿರುಕಟ್ಟಿದಂತೆ ನಟಿಸಿದಳು. ಆಗ ಭರವ

ನಾಯಕ ಅವಳ ಕಟ್ಟುಗಳನ್ನು ಸಡಿಲಿಸಿ, ಅವಳನ್ನು ಮೇನೆಯಲ್ಲಿ ಮಲಗಿಸಿ, ಗಾಳಿಹಾಕಿದ. ಹೀಗೆ ಕೆಲವು ಕಾಲ ಉಪಚರಿಸಿದ ಮೇಲೆ ಕುಸುಮಾಜಿಗೆ ತಿಳಿವು ಬಂದಂತಾಯಿತು. ಇನ್ನೆಲ್ಲ ಕೊಂಚ ದೂರದ ಪ್ರಯಾಣ ಎಂದು ಹೇಳಿ ಅವನು ಮೇನೆಯನ್ನು ನಿಧಾನವಾಗಿ ನಡಸಿಕೊಂಡು ಹೊರಟ.

ಕುಸುಮೆಗೆ ಬೇಕಾಗಿದ್ದುದೂ ಇದೇ. ಈಗ ಅವಳ ಕೈಗಳ ಕಟ್ಟುಗಳು ಸಡಿಲವಾಗಿದ್ದುದರಿಂದ, ಅವುಗಳನ್ನು ಸುಲಭವಾಗಿ ಬಿಚ್ಚಿಕೊಂಡಳು. ಅನಂತರ ಕಾಲುಗಳ ಕಟ್ಟನ್ನು ಬಿಚ್ಚಿದಳು. ಭರಮನಾಯಕ ತನ್ನನ್ನು ಶುಶ್ರೂಷೆಮಾಡುತ್ತಿರುವಾಗ, ಕುಸುಮೆಯು ಉಪಾಯಾಂತರದಿಂದ, ಅವನ ಸೊಂಟದಲ್ಲಿ ಇದ್ದ ಖಡ್ಗವನ್ನು ಅಪಹರಿಸಿಬಿಟ್ಟಿದ್ದಳು. ಕತ್ತಲೆಯಲ್ಲಿ ನಡೆದ ಈ ಕೆಲಸ ಯಾರಿಗೂ ತಿಳಿಯಲಿಲ್ಲ.

ಮೇನೆ ಮತ್ತೊಮ್ಮೆ ಹಳ್ಳದಲ್ಲಿ ಅಲುಗಾಡಿತು. ಮತ್ತೊಮ್ಮೆ ಕುಸುಮೆ ಮೇನೆಯಿಂದ ಉರುಳಿ ನೆಲಕ್ಕೆ ಬಿದ್ದಳು. ಅವಳನ್ನು ಎತ್ತಲೆಂದು ಭರಮ ನಾಯಕ ಅವಳ ಮೇಲೆ ಬಾಗಿದ. ಆಗ ಕುಸುಮೆ ಕೈಯಲ್ಲಿದ್ದ ಖಡ್ಗವನ್ನು ಅವನ ಎದೆಯಲ್ಲಿ ನೆಟ್ಟಿ ಥಂಗನೆ ಎದ್ದು, ಅಲ್ಲಿಂದ ಓಡಿಹೋದಳು.

ಅನಿರೀಕ್ಷಿತವಾಗಿ ಬಿದ್ದ ಪೆಟ್ಟನಿಂದ 'ಹಾಂ' ಎನ್ನುತ್ತ ಭರಮನಾಯಕ ನೆಲಕ್ಕೆ ಉರುಳಿದ. ಮರುಕ್ಷಣದಲ್ಲಿ ಅವನು 'ಹಿಡಿಯಿರಿ ಹಿಡಿಯಿರಿ' ಎಂದು ಬೊಬ್ಬೆ ಇಟ್ಟ. ಮೇನೆಯನ್ನು ಹೊತ್ತಿದ್ದ ಬೋಯಿಗಳೂ, ಅದರ ರಕ್ಷಣೆಗೆಂದು ಬಂದಿದ್ದ ಏಳೆಂಟು ಮಂದಿ ರಾವುತರೂ ಏನಾಯಿತೆಂದು ತಿಳಿಯದೆ ಕೆಲಕಾಲ ಸುಮ್ಮನೆ ನಿಂತರು. ಅನಂತರ ಕುಸುಮೆ ತಪ್ಪಿಸಿಕೊಂಡು ಹೋದುದನ್ನು ಅರಿತು ಅವಳನ್ನು ಹಿಡಿಯಲು ನಾಲ್ಕು ದಿಕ್ಕಿಗೂ ಓಡಿದರು. ಈ ವೇಳೆಗಾಗಲೇ ಕುಸುಮೆ ಅವರ ಕೈಗೆ ಬೀಳದಷ್ಟು ದೂರ ಓಡಿಹೋಗಿದ್ದಳು. ಇದೇ ಸಮಯದಲ್ಲಿ ದೈವಾನುಕೂಲವಾದಂತೆ, ರಾತ್ರಿ ಗಸ್ತು ತಿರುಗುತ್ತಿದ್ದ ನಗರ ರಕ್ಷಣಾ ದಳದ ಕುದುರೆ ರಾವುತರು ಸುಮಾರು ಇಪ್ಪತ್ತು ಮಂದಿ ಆ ಮಾರ್ಗದಲ್ಲಿ ಬಂದರು. ಅವರಿಗೆ ಸೂಡಿಯ ಬೆಳಕಿನಲ್ಲಿ ಮೇನೆ ಕಾಣಿಸಿತು. ಅಲ್ಲೇ ಗಾಯಗೊಂಡು ಮಲಗಿದ್ದ ಭರಮನಾಯಕನೂ ಕಾಣಿಸಿದ. ಅವರು ಯಾರನ್ನೋ ಅಟ್ಟಿಕೊಂಡು, ಹೊರಟುದನ್ನೂ ಅವರು ನೋಡಿದರು. ಯಾರೋ ಕಳ್ಳರಿರಬೇಕು, ತಮ್ಮನ್ನು ದೂರದಿಂದ ನೋಡುತ್ತಲೇ ಪಲಾಯನ

ವಾಗಿದ್ದಾರೆ ಎಂದು ಅವರು ಊಹಿಸಿ, ಭರಮನಾಯಕನ ಕಡೆಯವರನ್ನು ಬೆನ್ನಟ್ಟಿಕೊಂಡು ಹೊರಟರು.

ಈ ವೇಳೆಗಾಗಲೇ ಪೂರ್ವದಿಗಂತದಲ್ಲಿ ಅರುಣೋದಯದ ಮುಂಬೆಳಕು ಮೂಡಿತ್ತು. ಆ ಬೆಳಕಿನಲ್ಲಿ ಭರಮನಾಯಕನ ಸಂಗಡಿಗರು ಎಲ್ಲರೂ ಕುದುರೆ ರಾವುತರ ಕೈಗೆ ಸಿಕ್ಕಿಬಿದ್ದರು. ಅವರನ್ನೂ, ಮೇನೆಯ ಬಳಿ, ರಕ್ತಕಾರುತ್ತ ಬಿದ್ದಿದ್ದ ಭರಮನಾಯಕನನ್ನೂ, ರಾವುತರು ಕರೆದೊಯ್ದು, ಅಲ್ಲೇ ಇದ್ದ ಕೋಟೆಯ ಬಂದೀಖಾನೆಯಲ್ಲಿ ಅವರನ್ನು ಸೆರೆಯಲ್ಲಿ ಇಟ್ಟರು. ತಮ್ಮ ದುರ್ಗಾಧಿಪತಿಗೆ ಈ ಎಲ್ಲ ಸುದ್ದಿಯನ್ನು ತಿಳಿಸಲು ದೂತರನ್ನು ಅಟ್ಟಿದರು. ಆದರೆ ಅವರು ಯಾರಿಗೂ ಕುಸುಮೆಯ ಸುದ್ದಿಯಾಗಲೀ, ಅವಳು ಏನಾದಳು, ಎಲ್ಲಿ ತಪ್ಪಿಸಿಕೊಂಡು ಹೋದಳು ಎಂಬುದಾಗಲಿ ತಿಳಿಯಲಿಲ್ಲ.

## ೬

ದುರ್ಗಾಧಿಪತಿಯಾದ ಗೋವಿಂದರಾಜನು ಭರಮನಾಯಕ ಮತ್ತು ಅವನ ತಂಡದವರು ಸಿಕ್ಕಿಬಿದ್ದಿರುವ ಸುದ್ದಿಯನ್ನು ಕೇಳಿ ತಡಮಾಡದೆ ಅವರನ್ನು ಸೆರೆಯಲ್ಲಿ ಇಟ್ಟಿದ್ದ ಕೋಟೆಯ ಸೆರೆಮನೆಗೆ ಬಂದನು. ಆದರೆ ಗೋವಿಂದರಾಜನು ಅಲ್ಲಿಗೆ ಬರುವ ವೇಳೆಗೆ ಸೆರೆಮನೆಯು ಬರಿದಾಗಿತ್ತು. ಕೈಗೆ ಬಂದ ತುತ್ತು ಬಾಯಿಗೆ ಇಲ್ಲವೆಂಬಂತಾಗಿತ್ತು. ಭರಮನಾಯಕ ಹಾಗೂ ಅವನ ಸಂಗಡಿಗರು ಕುಸುಮಾಜಿಯನ್ನು ವಿಜಯಭದ್ರನ ಪ್ರಮೋದ ಗೃಹಕ್ಕೆ ಕರೆತರುವ ಮಾರ್ಗದಲ್ಲಿ, ಗೋವಿಂದರಾಜನ ಪಡೆಯ ಕೈಗೆ ಸಿಕ್ಕಿ, ಕೋಟೆಯ ಸೆರೆಮನೆಯಲ್ಲಿ ಇಡಲ್ಪಟ್ಟಿರುವರೆಂಬ ಸುದ್ದಿ ವಿಜಯಭದ್ರನಿಗೆ ಅದು ಹೇಗೆ ಗೊತ್ತಾಯಿತೋ ! ಅವನು ಕೈಸೆರೆ ಸಿಕ್ಕಿದವರ ರಕ್ಷಣೆಗಾಗಿ, ಕೊರಮನಾಯಕನ ನೇತೃತ್ವದಲ್ಲಿ ದೊಡ್ಡದೊಂದು ಸೈನ್ಯವನ್ನೇ ಕಳುಹಿಸಿದ್ದ. ವಿಜಯಭದ್ರನಿಗೆ ಕುಸುಮೆ ತಪ್ಪಿಸಿಕೊಂಡು ಹೋದ ಸಂಗತಿಯನ್ನು ಕೇಳಿ ತುಂಬ ವಿಷಾದ ಉಂಟಾಗಿತ್ತು. ಅವಳು ಕೈಗೆ ಸಿಕ್ಕಿದ್ದರೂ, ಅವರ ಕೈಯಿಂದ ನುಣುಚಿಕೊಂಡು ಹೋಗಿದ್ದಳು. ಅವಳು ತನ್ನ ಕಣ್ಣಿಗೆ ಮಣ್ಣೆರಚಿ, ಅತಿ ಧೈರ್ಯದಿಂದ ಈ ಸಾಹಸಮಾಡಿ ತಪ್ಪಿಸಿಕೊಂಡು ಹೋದುದು ಅವಳ ಮನಸ್ಥೈರ್ಯ, ಶಕ್ತಿ, ಕುಶಲತೆಗಳನ್ನು ತೋರಿಸುತ್ತಿತ್ತು. ಇಂಥ ಸ್ತ್ರೀರತ್ನ ಅನ್ಯಾಯವಾಗಿ ಗೋವಿಂದರಾಜನ ಪದರದಲ್ಲಿ ಬಿದ್ದಿರುವುದಲ್ಲ, ಎಂದು ಗೋವಿಂದರಾಜನ ಬಗ್ಗೆ ಅವನಿಗೆ ಅಸೂಯೆ ಉಂಟಾಯಿತು. ಅವನ ಭಾಗ್ಯಕ್ಕಾಗಿ ಕರುಬಿದ. ಕುಸುಮೆ ಕೈತಪ್ಪಿಸಿಕೊಂಡು ಹೋಗಿದ್ದರೂ ಮತ್ತೆ ತನ್ನ ಕೈಗೆ ಅವಳು ಬೀಳುವವಳೇ. ಈಗ ಕಷ್ಟಪಟ್ಟು ಶೋಧಿಸಿದರೆ ಅವಳು ಕೂಡಲೇ ಪತ್ತೆಯಾಗಬಹುದು. ಮತ್ತೆ ಅವಳನ್ನು ಭೇಟಿಮಾಡಿ ಪಂಜರದಲ್ಲಿ ಹಾಕಿದರೆ, ಹರಿಹರರು ಬಂದರೂ ಅವಳ ಬಿಡುಗಡೆ ಸಾಧ್ಯವಿಲ್ಲ ಎಂದುಕೊಂಡು—ಕುಸುಮೆಯು ಓಡಿಹೋದ ದಿಕ್ಕಿನಲ್ಲಿ ಅವಳನ್ನು ಶೋಧಿಸಲು ಅನೇಕ ಗುಪ್ತಚಾರರನ್ನು ನೇಮಿಸಿ, ತಾನೂ ಅವಳನ್ನು ಹುಡುಕುತ್ತ ಹೊರಟ.

ಕೋಟೆಯ ಸೆರೆಮನೆಯಲ್ಲಿ ಸಿಕ್ಕಿಬಿದ್ದಿದ್ದ ಭರಮನಾಯಕ ಹಾಗೂ ಅವನ ಸಂಗಡಿಗರನ್ನು ಮೊದಲು ಬಿಡುಗಡೆಮಾಡಿಸಬೇಕು. ಅವರು ಗೋವಿಂದರಾಜನ ಕೈಗೆ ಬಿದ್ದರೆ, ಅವರನ್ನು ಪರಿಪರಿಯಾಗಿ ಹಿಂಸಿಸುವುದರ ಜತೆಗೆ, ತನ್ನ ವಿರುದ್ಧ ಪ್ರತ್ಯಕ್ಷ ಪ್ರಮಾಣ ಸಿದ್ಧವಾಗುವುದು. ಮಹಾಪ್ರಭುಗಳ ತನಕ ತನ್ನ ಮೇಲೆ ದೂರು ಹೋದರೆ ಭರಮನಾಯಕ ಮೊದಲಾದವರಿಂದ ತನಗೆ ತೊಂದರೆಯಾಗಬಹುದು. ಆದುದರಿಂದ ಏನಾದರೂ ಮಾಡಿ ಅವರನ್ನು ಸೆರೆಮನೆಯಿಂದ ಬಿಡಿಸಬೇಕು ಎಂದು ನಿರ್ಧರಿಸಿ, ಮೊದಲು ಕೊರಮನಾಯಕನನ್ನು ಸಾಕಷ್ಟು ಮಂದಿ ಕುದುರೆ ಸೈನಿಕರೊಡನೆ, ಅವರನ್ನು ಬಿಡುಗಡೆಮಾಡಿ ತರಲು ಕಳುಹಿಸಿಕೊಟ್ಟಿದ್ದ.

ಹಠಾತ್ತನೆ ಕೊರಮನಾಯಕನು ತನ್ನ ಪಡೆಯೊಂದಿಗೆ ಕೋಟೆಯ ಸೆರೆಮನೆಯ ಮೇಲೆ ಧಾಳಿ ಇಟ್ಟನು. ಆಗ ಸೆರೆಮನೆಯ ಕಾವಲಿಗೆ ಕೇವಲ ಎಂಟು ಹತ್ತು ಮಂದಿ ಸೈನಿಕರು ಇದ್ದರು. ಸೆರೆಯನ್ನು ಒಡೆಯುವಷ್ಟು ಧೈರ್ಯ ಯಾರಿಗೆ ಇದೆ, ಎಂದುಕೊಂಡು, ಹೆಚ್ಚು ಸಂಖ್ಯೆಯಲ್ಲಿ ರಕ್ಷಾದಳದವರು ಅಲ್ಲಿ ಇರಲಿಲ್ಲ. ಇದರಿಂದ ಕೊರಮನಾಯಕನಿಗೆ ಬಹಳ ಅನುಕೂಲವಾಯಿತು.

ಕೊರಮನಾಯಕ ತನ್ನ ಪಡೆಯನ್ನು ಎರಡು ತಂಡವಾಗಿ ಮಾಡಿ, ಒಂದು ತಂಡವನ್ನು ಸೆರೆಮನೆಯ ಕಾವಲುಗಾರರನ್ನು ವಿಚಾರಿಸಿಕೊಳ್ಳಲು ಕಳುಹಿಸಿದ. ಮತ್ತೊಂದು ತಂಡದೊಡನೆ ತಾನೇ ಸೆರೆಮನೆಯನ್ನು ಒಡೆದು ಅಲ್ಲಿ ಸೆರೆಯಾಗಿದ್ದ ಭರಮನಾಯಕ ಹಾಗೂ ಅವನ ಸಂಗಡಿಗರನ್ನು ಬಿಡಿಸಿಕೊಂಡು, ಪಲಾಯನ ಮಾಡಿದ.

ತಾವು ಬಂದ ಕೆಲಸ ತೀರಿದ ಮೇಲೆ, ಸೆರೆಮನೆಯ ಕಾವಲುಗಾರರನ್ನು ಅವರ ಪಾಡಿಗೆ ಬಿಟ್ಟು ಹೊರಟುಹೋದರು.

ಗೋವಿಂದರಾಜನು ಬರುವ ವೇಳೆಗೆ ಸೆರೆಯಾಳುಗಳು ತಪ್ಪಿಸಿಕೊಂಡು ಬರಿದಾದ ಸೆರೆಮನೆ ಉಳಿದಿತ್ತು. ಅಲ್ಲಿ ಬಡಿದಾಟದ ಕಾರಣವಾಗಿ ನೆತ್ತರಿನ ಹೊಳೆ ಹರಿದಿತ್ತು.

ಒಬ್ಬಿಬ್ಬರು ಕಾವಲುಗಾರರು ಗಾಯಗೊಂಡು ನರಳುತ್ತಾ ಬಿದ್ದಿದ್ದರು. ಮತ್ತಿಬ್ಬರು ಅಲ್ಲೇ ಮಡಿದಿದ್ದರು. ಅವರಲ್ಲಿ ಅಳಿದುಳಿದ ನಾಲ್ವರು ನಡೆದ

ಸಂಗತಿಯನ್ನು ಗೋವಿಂದರಾಜನಿಗೆ ನಿವೇದಿಸಿದರು. ಎಲ್ಲ ಕಥೆಯನ್ನೂ ಕೇಳಿ ಗೋವಿಂದರಾಜನಿಗೆ ಬಹಳ ವ್ಯಥೆಯಾಯಿತು. ಅವರಲ್ಲಿ ಯಾರಾದರೂ ಕೈಸೆರೆ ಸಿಕ್ಕಿದ್ದರೆ ಅವರ ಮೂಲಕ ಕುಸುಮಾಜಿಯ ಸಂಗತಿ ತಿಳಿಯಬಹುದಾಗಿತ್ತು, ಎಂದು ತುಂಬ ಪರಿತಪಿಸಿದ. ಆದರೆ ಗೋವಿಂದರಾಜನು ಬರುವ ವೇಳೆಗೆ ಕಾರ್ಯ ಮಿಂಚಿಹೋಗಿತ್ತು.

ಈಗ ಗೋವಿಂದರಾಜನಿಗೆ ಒಂದು ಸಮಾಧಾನ ಉಂಟಾಗಿತ್ತು: ಕುಸುಮೆ ಜೀವಂತವಾಗಿ ಇದ್ದಾಳೆಂಬುದು ತಿಳಿದಿತ್ತು. ಅಷ್ಟೇ ಮಾತ್ರವಲ್ಲ. ತನ್ನನ್ನು ಹೊತ್ತುಕೊಂಡು ಹೋದವರನ್ನು ಮೋಸಗೊಳಿಸಿ, ಅವರ ಕೈಯಿಂದ ತಪ್ಪಿಸಿಕೊಂಡು ಹೋಗಿದ್ದಾಳೆ, ಎಂಬುದನ್ನು ತಿಳಿದು ತುಂಬ ಸಂತೋಷವಾಯಿತು. ಅವನು ಕಾಲವನ್ನು ವ್ಯರ್ಥಗೊಳಿಸದೆ ಕೂಡಲೇ ಕುಸುಮೆಯ ಶೋಧನೆಗೆ ರಾವುತರನ್ನು ಅಟ್ಟಿದ.

ಕುಸುಮೆ ಜೀವಂತವಿರುವಳೆನ್ನುವ ಸುದ್ದಿಯನ್ನು ಕೇಳಿ ರಾತ್ರಿಯೇ ಅನ್ನ ನೀರು ಬಿಟ್ಟು ಕಾದುಕುಳಿತಿದ್ದ ತಿಪ್ಪಾಜಿಗೆ ಹೋದ ಪ್ರಾಣ ಮರಳಿ ಬಂದಂತೆ ಆಗಿತ್ತು. ಕುಸುಮೆ ಜೀವವಿರುವುದು ಮಾತ್ರವೇ ಅಲ್ಲ, ಅವಳು ವಿಜಯಭದ್ರನ ಕೈಯಿಂದ ತಪ್ಪಿಸಿಕೊಂಡಿದ್ದಾಳೆ ಎಂಬುದನ್ನು ತಿಳಿದು ಮಗಳ ಶೌರ್ಯ ಧೈರ್ಯಸಾಹಗಳ ಬಗ್ಗೆ ಅವಳಿಗೆ ಅಭಿಮಾನ ಉಂಟಾಯಿತು. ಇನ್ನು ಭಯವಿಲ್ಲ. ಅವಳು ಇಷ್ಟೆಲ್ಲ ಸಾಹಸಮಾಡಿ ತಪ್ಪಿಸಿಕೊಂಡವಳು ಸಂಜೆಯ ವೇಳೆಗಾದರೂ ಮನೆಗೆ ಸುರಕ್ಷಿತವಾಗಿ ಬಂದು ಸೇರುತ್ತಾಳೆ, ಎಂದು ತಿಪ್ಪಾಜಿ ಧೈರ್ಯತಾಳಿದಳು. ಅವಳು ಇದೆಲ್ಲವೂ ಸರ್ವಮಂಗಳೆಯ ಕೃಪೆ ಎಂದು ದೇವಿಯ ಮುಂದೆ ತುಪ್ಪದ ದೀಪಗಳನ್ನು ಹಚ್ಚಿಟ್ಟು ಮಗಳಿಗಾಗಿ ಕಾಯುತ್ತಾ ಕುಳಿತಳು.

ಅತ್ತ ಭರಮನಾಯಕನನ್ನು ಘಾತಿಗೊಳಿಸಿ, ಅವರ ಕೈಯಿಂದ ತಪ್ಪಿಸಿಕೊಂಡು ಹೊರಟುಹೋದ ಕುಸುಮಾಜಿಯ ಗ್ರಹಚಾರ ಇನ್ನೂ ಪೂರ್ತಿಯಾಗಿ ಹರಿದಿರಲಿಲ್ಲ. ಅವಳು ತಾನು ಎಲ್ಲಿಗೆ ಹೋಗುತ್ತಿರುವೆನೆಂದು ನೋಡದೆ ಕತ್ತಲೆಯಲ್ಲಿ ಒಂದೇ ಸಮನೆ ಓಡಿದ್ದಳು. ಕತ್ತಲೆಯಲ್ಲಿ ದಾರಿ ಕಾಣದು. ಅವಳಿಗೆ ನೆಲದ ಮೇಲೆ ನಡೆದು ರೂಢಿಯಿಲ್ಲ. ಹೀಗಾಗಿ ಕುಸುಮೆ ಬಹು ಬೇಗ ದಣಿದಳು. ಅವಳ ಕಾಲುಗಳಿಂದ ರಕ್ತಸುರಿಯುತ್ತಿದ್ದರೂ, ಅವಳು

ಓಡುವುದನ್ನು ಬಿಡಲಿಲ್ಲ. ಪ್ರಾಣದ ಮೇಲಿನ ಹಂಗು ತೊರೆದು ಓಡಿದಳು. ಅವಳಿಗೆ ತನ್ನ ಹಿಂದೆ ವಿಜಯಭದ್ರನ ಅನುಚರರು ಬೆನ್ನಟ್ಟಿ ಬರುತ್ತಿರುವ ರೇನೋ ಎನ್ನುವ ಭಯ. ಅಂತಲೇ ಅವಳು ಓಡುವುದನ್ನು ನಿಲ್ಲಿಸಲಿಲ್ಲ.

ಆ ಪ್ರದೇಶ ರಾಜೋದ್ಯಾನಕ್ಕೆ ಸಂಬಂಧಿಸಿದುದು. ಅಲ್ಲಿ ಮನೆಗಳು ಕಡಿಮೆ. ಹೆಚ್ಚು ಭಾಗ ಗಿಡಮರಗಳಿಂದ ಕೂಡಿತ್ತು. ಅದನ್ನು ರಾಜಕುಟುಂಬದವರ ವಿಹಾರಕ್ಕೆಂದು ಕೃತಕವಾಗಿ ಬೆಳೆಸಿದ್ದರು. ಆ ಶೃಂಗಾರೋದ್ಯಾನದ ಒಂದು ಭಾಗದಲ್ಲಿ ದಟ್ಟವಾದ ಕಾಡನ್ನು ಬೆಳಸಿದ್ದರು. ಈ ರಾಜೋದ್ಯಾನದ ಒಂದು ಭಾಗ ಅರಮನೆಗೆ ಸೇರಿಕೊಂಡಂತೆ ಇತ್ತು. ಆ ಪ್ರದೇಶದಲ್ಲಿ ಅನೇಕ ದೇಶವಿದೇಶಗಳಿಂದ ಆರಿಸಿ ತಂದ ಅನೇಕ ವೃಕ್ಷ ಜಾತಿ ತರುಲತೆಗಳನ್ನೂ, ಹೂಗಿಡಗಳನ್ನೂ ಬೆಳೆಸಿದ್ದರು. ಅದಕ್ಕೆ ಹೊಂದಿ ಕೊಂಡಂತೆಯೇ ಫಲಪುಷ್ಪಭರಿತವಾದ ಹಣ್ಣಿನ ತೋಟವಿತ್ತು. ಇಲ್ಲಿ ಕಿತ್ತಳೆ, ದ್ರಾಕ್ಷಿ, ಸೇಬು, ಮಾವು, ಅಂಜೂರ ಮೊದಲಾದ ಎಲ್ಲ ದೇಶದ ಎಲ್ಲ ಹವೆಯ ಹಣ್ಣುಗಳನ್ನೂ ಬೆಳೆಯಲು ಅನುಕೂಲ ಪಡಿಸಿದ್ದರು. ಹಣ್ಣಿನ ಗಿಡಗಳಿಂದ ಹಣ್ಣನ್ನು ಕುಯ್ಯುವವರು ಇಲ್ಲದೆ ಜಿಗಿದು ನಿಂತಿದ್ದುವು.

ಈ ತೋಟಕ್ಕೆ, ಹಾಗೂ ಹೂ ಗಿಡಗಳ ಉದ್ಯಾನಕ್ಕೆ ನೀರನ್ನು ಒದಗಿ ಸಲು ವಿದೇಶೀಯ ಶಿಲ್ಪಿಗಳ ನೆರವಿನಿಂದ ವ್ಯವಸ್ಥೆಮಾಡಿದ್ದರು. ಅಲ್ಲಿ ಕೃತಕವಾಗಿ ರಚಿಸಿದ್ದ ಪುಷ್ಕರಣಿ, ಕಾರಂಜಿಗಳಿಗೆ ನೀರು ತುಂಗಭದ್ರೆಯಿಂದ ಕಲ್ಲಿನ ಕಾಲುವೆಗಳ ಮೂಲಕ ಹರಿದು ಬರುತ್ತಿತ್ತು. ನೀರು ಎಷ್ಟು ಶುಭ್ರ ವಾಗಿತ್ತೆಂದರೆ ಜಲಕ್ರೀಡೆಯಾಡುವ ಸರೋವರಗಳ ತಲಭಾಗದಲ್ಲಿ ಹಾಸಿದ್ದ ಪಚ್ಚೆ ಹವಳಗಳ ಕಾಂತಿ ನೀರಿನಿಂದ ಹೊರಹೊಮ್ಮುತ್ತಿತ್ತು.

ಈ ತೋಟದ ಆಚೆಯ ಪ್ರದೇಶವೆಲ್ಲ ದಟ್ಟವಾದ ಗಿಡಮರಗಳಿಂದ ತುಂಬಿತ್ತು. ಇದು ಬಹು ವಿಸ್ತಾರವಾಗಿ ಇದ್ದು, ರಾಯನ ಮೃಗಯಾ ವಿನೋದಕ್ಕೆ ಅನುಕೂಲಿಸುವಂತೆ ಇತ್ತು. ಅಂದರೆ ಇಲ್ಲಿ ಅನೇಕ ಕಾಡು ಮೃಗಗಳು, ವಾಸಿಸುತ್ತಿದ್ದುವು. ಇವುಗಳನ್ನು ಬೇಟೆಯಾಡುವುದೆಂದರೆ ಕೃಷ್ಣದೇವರಾಯನಿಗೆ ಅತಿಪ್ರಿಯವಾದ ವಿನೋದ.

ಕುಸುಮೆ ಓಡುತ್ತಾ ಬೀಳುತ್ತಾ, ಈ ಕಾಡಿನ ಹೊರವಲಯಕ್ಕೆ ಬಂದು ಮುಟ್ಟಿದಳು. ಇಲ್ಲಿಗೆ ಬರುವ ವೇಳೆಗೆ ಕತ್ತಲೆ ಮೆಲ್ಲನೆ ಸರಿಯ

ತೊಡಗಿ, ಬೆಳಗಿನ ಹೊಂಬೆಳಕಿನ ಛಾಯೆ ಮೂಡಲ ದಿಗಂತದಲ್ಲಿ ಕಾಣಲಾರಂಭಿಸಿತ್ತು. "ಇನ್ನು ಬೆಳಕು ಮೂಡಿತು. ತನ್ನ ಬಾಳಿನ ಕಾಳರಾತ್ರಿ ಹರಿಯಿತು. ಭಯವಿಲ್ಲ" ಎಂದುಕೊಂಡಳು. ತನ್ನನ್ನು ಯಾರೂ ಹಿಂಬಾಲಿಸಿ ಬರದೆ ಇರುವುದನ್ನು ಕಂಡು ಅವಳಿಗೆ ಕೊಂಚ ಧೈರ್ಯವಾಗಿ ಇಲ್ಲಿ ಎಲ್ಲಾದರೂ ಕೆಲಕಾಲ ವಿಶ್ರಾಂತಿಯನ್ನು ಅನುಭವಿಸಿ, ಅನಂತರ ಮುಂದಕ್ಕೆ ಸಾಗಬೇಕೆಂದು ಆಲೋಚಿಸಿದಳು. ಎರಡು ಮೂರು ತಾಸು ಒಂದೇ ಸಮನೆ ಓಡಿಬಂದುದರಿಂದ ಅವಳಿಗೆ ತುಂಬ ಬಳಲಿಕೆಯಾಗಿತ್ತು. ಕಲ್ಲುಮುಳ್ಳುಗಳೆನ್ನದೆ ಕಾಡುದಾರಿಯಲ್ಲಿ ಓಡಿಓಡಿ ಅವಳ ಕಾಲುಗಳು ನೋವಿನಿಂದ ಮರಗಟ್ಟಿದ್ದುವು. ಅವಳ ಮೃದುವಾದ ಅಂಗಾಲಿನಿಂದ ರಕ್ತ ಹರಿದು, ಅವಳಿಗೆ ತುಂಬ ನಿಶ್ಶಕ್ತಿಯುಂಟಾಗಿತ್ತು. ಅವಳಿಗೆ ಬಾಯಾರಿ ಬಂತು. ನೀರಿಗಾಗಿ ಹಾತೊರೆದಳು. ಆದರೆ ಆ ಪ್ರದೇಶದಲ್ಲಿ ಕುಡಿಯುವ ನೀರು ಎಲ್ಲಿ ದೊರೆಯಬೇಕು?

ಅವಳ ದೈವದಿಂದಲೆಂಬಂತೆ ದೂರದಲ್ಲಿ ಒಂದು ಮನೆ ಇರುವುದು ಅವಳಿಗೆ ಗೋಚರಿಸಿತು. ಕೂಡಲೇ ಅಲ್ಲಿಗೆ ಹೋಗಿ ಅವರ ಆಶ್ರಯ ಬೇಡಲು ಆಸೆಯಾಯಿತು. ಆದರೆ ಅಲ್ಲಿಯೂ ತನ್ನ ಶತ್ರುಪಕ್ಷಕ್ಕೆ ಸೇರಿದವರೇ ಇದ್ದರೆ ತಾನಾಗಿ ಬಂದು ಶತ್ರುವಿನ ಬಾಯಿಗೆ ಹೊಕ್ಕಂತೆ ಆಗುತ್ತದೆ. ಅಪರಿಚಿತರ ತಂಟೆಯೇ ಬೇಡ, ಸಾಯುವುದಾದರೂ ಹಾಗೆಯೇ ನೀರಿಲ್ಲದೆ, ನೆರಳಿಲ್ಲದೆ ಸತ್ತರೂ ಚಿಂತೆ ಇಲ್ಲ. ಮತ್ತೆ ಯಾರನ್ನೋ ನಂಬಿ ಇಲ್ಲದ ಗಂಡಾಂತರ ಮೇಲೆ ತಂದುಕೊಳ್ಳಬಾರದು ಎಂದುಕೊಂಡು, ಅವಳು ನೀರನ್ನು ಅರಸಿಕೊಂಡು ಹೊರಟಳು.

ಆ ಪ್ರದೇಶದಲ್ಲಿ ಮನೆ ಇದ್ದುದರಿಂದ ಬಳಿಯಲ್ಲಿ ನೀರಿನ ವಸತಿಯೂ ಇರಬೇಕೆಂದು ಅನಿಸಿತು. ಅವಳು ಹಾಗೆಯೇ ಕಾಲನ್ನು ಎಳೆದುಕೊಂಡು ಹೊರಟಳು. ಅವಳ ಕಾಲಿಗೆ ಶೈತ್ಯತೆ ತಿಳಿಯಿತು. ಬಳಿಯಲ್ಲಿಯೇ ನೀರು ಹರಿಯುತ್ತಿರುವ ಸದ್ದೂ ಕೇಳಿಸಿತು. ಅವಳು ಸದ್ದನ್ನು ಅನುಸರಿಸಿ ಕೆಲವು ಹೆಜ್ಜೆ ಹೋದಳು. ಅವಳ ಊಹೆ ನಿಜವಾಗಿತ್ತು. ಅಲ್ಲಿ ಪಾವನೆಯಾದ ತುಂಗಭದ್ರೆ ಮಂದಗಮನೆಯಾಗಿ ಹರಿಯುತ್ತಿದ್ದಳು.

ನೀರನ್ನು ಕಂಡೇ ಕುಸುಮಾಜಿಯ ಅರ್ಧ ಆಯಾಸ ಹಿಂಗಿತು.

ಉಳಿದರ್ದ ಆಯಾಸ ನೀರನ್ನು ಎರಡು ಬೊಗಸೆ ತುಂಬಿಕೊಂಡು ಕುಡಿದಾಗ ಇಂಗಿಹೋಯಿತು. ಅವಳು ಒಮ್ಮೆ ನಿಟ್ಟುಸಿರು ಬಿಟ್ಟು ಸುತ್ತಲೂ ನೋಡಿ ಯಾರೂ ತನ್ನ ಅನುಸರಿಸಿ ಬರುತ್ತಿಲ್ಲವೆಂದು ಖಚಿತಪಡಿಸಿಕೊಂಡು, ಬಂಡೆಯ ಮರಳಿನ ಮೇಲೆ ಮರದ ನೆರಳಿನಲ್ಲಿ ಕಾಲು ನೀಡಿಕೊಂಡು ಹಾಗೇ ವಿಶ್ರಾಂತಿ ತೆಗೆದುಕೊಳುತ್ತ ಮಲಗಿದಳು.

ಬೆಳಗಿನ ತಂಗಾಳಿ ಆಹ್ಲಾದಕರವಾಗಿತ್ತು. ಕುಸುಮೆ ಮಲಗಿಕೊಂಡೇ ತನ್ನೆದುರು ಎತ್ತರವಾಗಿ ನಿಂತ ಬೆಟ್ಟದ ಸಾಲನ್ನು ನೋಡಿದಳು. ನೋಡುತ್ತಾ ಮಲಗಿದಳು. ಹಾಗೆಯೇ ಅವಳ ಕಣ್ಣಿಗೆ ಜೊಂಪು ಹತ್ತಿತು....

ಕುಸುಮೆಯ ಕಣ್ಣಿಗೆ ಬಿದ್ದಿದ್ದ ಆ ಬೆಟ್ಟ ಅಂಜನಾಪರ್ವತ, ಇಲ್ಲಿ ಆಂಜನೇಯನು ಹುಟ್ಟಿದನಂತೆ.

ಅದರ ಸಮೀಪದಲ್ಲೇ ಸೀತೆಯ ಸೆರಗು, ವಾಲಿಯ ಭಂಡಾರ. ಅವು ಗಳನ್ನು ನೋಡುತ್ತಿದ್ದಂತೆ ಕುಸುಮೆಯು ತ್ರೇತಾಯುಗಕ್ಕೆ ಹೋದಳು.

ಲಂಕಾಧಿಪತಿಯಾದ ರಾವಣನ ಮೋಸದ ಬಲೆಗೆ ಸಿಲುಕಿ ಜಾನ ಕಿಯು ಸುವರ್ಣಜಿಂಕೆಯ ಕಾರಣದಿಂದ ರಾಮಲಕ್ಷ್ಮಣರನ್ನು ಆಶ್ರಮದಿಂದ ಹೊರಗೆ ಅಟ್ಟಿ, ರಾವಣನ ಕೈಗೆ ಸೆರೆಸಿಕ್ಕುತ್ತಾಳೆ, ಪುಷ್ಪಕವಿಮಾನದಲ್ಲಿ ರಾವಣನು ಸೀತೆಯನ್ನು ಎತ್ತಿಕೊಂಡು ಅಂತರಿಕ್ಷಮಾರ್ಗದಲ್ಲಿ ಹೋಗುತ್ತಿರು ವಾಗ, ಸೀತೆ ಕಿಷ್ಕಿಂಧೆಯಲ್ಲಿ ಕಪಿಸಂಕುಲವನ್ನು ನೋಡುತ್ತಾಳೆ. ಆ ಮಾರ್ಗವಾಗಿ, ತನ್ನ ಪತಿಯನ್ನು ಹುಡುಕಿಕೊಂಡು ಬಂದರೆ, ಅವನಿಗೆ ತನ್ನ ಗುರುತು ಸಿಗಲು, ಸೀತೆಯು ತನ್ನ ಒಡವೆಗಳನ್ನು ಗಂಟು ಕಟ್ಟಿ ಆ ಪ್ರದೇಶ ದಲ್ಲಿ ಹಾಕುತ್ತಾಳೆ. ಅದು ಸುಗ್ರೀವನಿಗೆ ದೊರೆತು ಮುಂದೆ ಶ್ರೀರಾಮ ಚಂದ್ರನಿಗೆ ಅವುಗಳನ್ನು ತಲುಪಿಸಿದಾಗ, ಅವನಿಗೆ ತನ್ನ ಪ್ರಿಯಪತ್ನಿಯನ್ನು ಕಂಡಷ್ಟೇ ಹರ್ಷವಾಗುತ್ತದೆ.

ಈ ಚಿತ್ರ ಅವಳ ಕಣ್ಣು ಮುಂದೆ ಸುಳಿದು ಹೋಯಿತು. ಮುಂದೆ ರಾಮಾಯಣದ ಕಥೆ ಎಲ್ಲ ಅವಳ ಕಣ್ಣ ಮುಂದೆ ನಡೆದಂತೆ ಮತ್ತೊಮ್ಮೆ ನಡೆದು ಹೋಯಿತು.

ಕುಸುಮೆಗೆ ಎಚ್ಚರವಾಗಿ ಕಣ್ಣು ಬಿಟ್ಟು ನೋಡಿದಳು. ನೇಸರು ಮೇಲೇರಿ ಬಂದಿದ್ದ. ಪ್ರಾತಃ ಸೂರ್ಯನ ಹೊಂಬೆಳಕು ಎಲ್ಲೆಡೆಯಲ್ಲೂ

ಆವರಿಸಿ, ಗಿರಿಕಾನನಗಳಿಗೆ ಹೊನ್ನಿನ ಅಭಿಷೇಕಮಾಡಿತ್ತು. ಅವಳು ದೃಷ್ಟಿ ಹೊರಳಿಸಿ ಸುತ್ತಲೂ ನೋಡಿದಳು. ನದಿಯ ಆಚೆಯ ದಡದಲ್ಲಿ ಜನ ಸಂಚಾರಕ್ಕೆ ಮೊದಲಾಗಿತ್ತು. ಕುಸುಮೆ ಮಲಗಿದ್ದ ಸ್ವಲ್ಪ ದೂರದಲ್ಲಿಯೇ ವಿದ್ಯಾನಗರವನ್ನೂ ಆನೆಗೊಂದಿಯನ್ನೂ, ಸೇರಿಸಿದ್ದ ರಾಯನಿರ್ಮಿತವಾದ ಕಲ್ಲು ಸೇತುವೆ. ಅದರ ಮೇಲೆ ಕುಸುಮೆ ಒಂದೆರಡು ಬಾರಿ ಹಾದು ಹೋಗಿದ್ದಳು. ಆನೆಗೊಂದಿಯ ಪಂಪಾಸರೋವರದಲ್ಲಿ ಒಂದು ಬಾರಿ ಅವಳು ಮಿಂದಿದ್ದಳು. ಅಲ್ಲಿನ ದೇವಾಲಯಗಳನ್ನು ಸಂದರ್ಶಿಸಿದ್ದಳು. ಆ ಸೇತುವೆಯನ್ನು ನೋಡುತ್ತಲೇ ತಾನು ಎಲ್ಲಿಗೆ ಬಂದಿರುವೆನೆಂದು ಅವಳಿಗೆ ಖಚಿತವಾಗಿ ತಿಳಿಯಿತು. ಇನ್ನು ವಿಜಯಭದ್ರನ ಭಯವಿಲ್ಲ. ತಾನು ಮನೆಯನ್ನು ಸುರಕ್ಷಿತವಾಗಿ ಸೇರಿಕೊಳ್ಳಬಹುದು, ಎಂದುಕೊಂಡು ಮಲಗಿದ್ದವಳು ಏಳಲು ಪ್ರಯತ್ನಿಸಿದಳು. ಅವಳಿಂದ ಒಂದು ಹೆಜ್ಜೆ ಮುಂದೆ ಇಡಲೂ ಸಾಧ್ಯವಾಗಲಿಲ್ಲ. ಮೊದಲು ಕೊಂಚ ಹೊತ್ತು ಎಲ್ಲಾದರೂ ವಿಶ್ರಾಂತಿ ತೆಗೆದುಕೊಂಡು ಅನಂತರ ಯಾರ ನೆರವನ್ನಾದರೂ ಪಡೆದು ಮನೆಯನ್ನು ಸೇರಿಕೊಳ್ಳಬೇಕೆಂದು ನಿರ್ಧರಿಸಿ, ಬಹಳ ಕಷ್ಟಪಟ್ಟುಕೊಂಡು ಮನೆಗಳಿದ್ದ ಕಡೆ ಬಂದಳು.

ಆ ಪ್ರದೇಶದಲ್ಲಿ ವಾಸಿಸುವರೆಲ್ಲ ಬಹುಮಂದಿ ಕುದುರೆಗಳನ್ನು ಸಾಕುವ ಕಾಸ್ತಾರರು. ಕುದುರೆಗಳಿಗೆ ಬೇಕಾಗುವ ಹುಲ್ಲು, ನೀರುಗಳು ಇಲ್ಲಿ ಸಂವೃದ್ಧಿಯಾಗಿ ದೊರೆಯುತ್ತಿದ್ದುದರಿಂದ ಈ ಪ್ರದೇಶದಲ್ಲಿ ಅಶ್ವಸೈನ್ಯದ ಬಹುಮಂದಿ ಕಾಸ್ತಾರರು ವಾಸವಾಗಿದ್ದರು. ಒಂದೊಂದು ಮನೆಯ ಬಳಿಯಲ್ಲೂ ಸಣ್ಣ ಪುಟ್ಟ ಕುದುರೆ ಲಾಯಗಳು, ಹುಲ್ಲು ಪೇರಿಸಿರುವ ಹುಲ್ಲು ಮನೆಗಳು. ಕುಸುಮೆ ನಿಧಾನವಾಗಿ ಹೆಜ್ಜೆ ಹಾಕುತ್ತ ಬಂದು ಸಮೀಪದಲ್ಲಿದ್ದ ಒಂದು ಹುಲ್ಲುಮನೆಯನ್ನು ಪ್ರವೇಶಿಸಿ, ಹುಲ್ಲಿನ ಮೆತ್ತನೆಯ ಹಾಸಿಗೆಯ ಮೇಲೆ ಆಯಾಸದಿಂದ ಮಲಗಿದಳು. ಅವಳು ಮಲಗಿದ್ದೇ ತಡ, ದಣಿದ ಅವಳ ದೇಹಕ್ಕೆ ಗಾಢವಾದ ನಿದ್ರೆ ಹತ್ತಿತು.

ಕುಸುಮಾಜಿ ಹೀಗೆ ಅದು ಎಷ್ಟು ಹೊತ್ತು ನಿದ್ರೆಮಾಡಿದಳೋ ಅವಳಿಗೆ ತಿಳಿಯದು. ಎಚ್ಚರವಾದಾಗ ಮನುಷ್ಯರ ಧ್ವನಿ ಅವಳ ಕಿವಿಗೆ ಬಿದ್ದು ಅವಳು ಗಾಬರಿಯಾಗಿ ಎದ್ದು ಕುಳಿತಳು. ಅವಳ ಇದಿರಿಗೆ ಸುಮಾರು ಮೂವತ್ತೈದು ನಲವತ್ತು ವರ್ಷದ ಒಬ್ಬ ಮುಸಲ್ಮಾನ್ ಯುವಕ ಆಶ್ಚರ್ಯ

ಚಕಿತನಾಗಿ ಕುಸುಮೆಯನ್ನು ದಿಟ್ಟಿಸುತ್ತಾ ನಿಂತಿದ್ದುದು ಕಣ್ಣಿಗೆ ಬಿತ್ತು. ಅವನ ಉಡಿಗೆ ತೊಡಿಗೆಯಿಂದ ಅವನು ಒಬ್ಬ ಮುಸಲ್ಮಾನನೆಂದು ಖಚಿತ ವಾಗಿ ಹೇಳಬಹುದಾಗಿತ್ತು. ಅವನು ಕೊಳೆಯಾದ ಪೈಜಾಮವೊಂದನ್ನು ಧರಿಸಿ, ಹಿಂದೂಗಳಂತೆ ಕಸೆಯಂಗಿಯನ್ನು ಧರಿಸಿದ್ದನು. ಆದರೆ ಅವನ ಬೋಳುತಲೆ, ಕರಿಯ ಗಡ್ಡ ಅವನ ಇಸ್ಲಾಂ ಧರ್ಮದ ಹೆಗ್ಗುರುತುಗಳಾಗಿದ್ದುವು. ಅವನು ಕುದುರೆಗಳಿಗೆ ಹುಲ್ಲನ್ನು ಹಾಕಲು ಅಲ್ಲಿಗೆ ಬಂದಿದ್ದಾಗ ಕುಸುಮೆಯನ್ನು ನೋಡಿ ಅಚ್ಚರಿಯುಂಟಾಗಿ, ತನ್ನ ಹೆಂಡತಿಗೆ ಈ ಸುದ್ದಿ ತಿಳಿಸಿ, ಅವಳನ್ನು ಜೊತೆಯಲ್ಲಿ ಕರೆತಂದಿದ್ದ. ಅವರವರಲ್ಲಿ ನಡೆದ ಮಾತು ಕತೆಗಳಿಂದ ಕುಸುಮೆಗೆ ಎಚ್ಚರವಾಗಿತ್ತು.

ಕುಸುಮೆ ಎಚ್ಚರಗೊಂಡುದನ್ನು ಕಂಡು, ಅಲ್ಲೇ ಇದ್ದ ಆ ಮಹಮ್ಮದೀಯ ಮಹಿಳೆ ಕುಸುಮೆಯ ಬಳಿಗೆ ಬಂದು ಅವಳು ಯಾರು? ಎಲ್ಲಿಂದ ಬಂದಳು ? ಇಲ್ಲಿಗೆ ಹೇಗೆ ಬಂದಳು ?ಎಂಬುದನ್ನು ತಿಳಿಯಲು ಅಚ್ಚ ಉರ್ದುವಿನಲ್ಲಿ ವಿಚಾರಿಸಿದಳು. ಅವಳ ಒಂದು ಮಾತೂ ಕುಸುಮೆಗೆ ತಿಳಿಯದಿದ್ದರೂ ಅವಳು ಕೇಳುತ್ತಿರುವ ಪ್ರಶ್ನೆಗಳು ಇಂಥವೇ ಎಂದು ಅರ್ಥವಾಯಿತು. ಆ ಮುಸಲ್ಮಾನ್ ಮಹಿಳೆ ಬೀಬಿಗೆ ಅಲ್ಪಸ್ವಲ್ಪ ಕನ್ನಡ ಬರುತ್ತಿದ್ದುದರಿಂದ ಅವಳು ತನ್ನ ಹರಕುಕನ್ನಡದಲ್ಲಿಯೇ ಕುಸುಮಾಜಿಯ ಕಥೆಯನ್ನು ವಿಚಾರಿಸಿ, ತಿಳಿದು ಅವಳ ಬಗ್ಗೆ ತುಂಬ ಸಹಾನುಭೂತಿಯನ್ನು ವ್ಯಕ್ತಪಡಿಸಿದಳು. ಅನಂತರ ಇಲ್ಲಿ ಅವಳು ನಿರ್ಭಯದಿಂದ ಇರಬಹುದೆಂದೂ, ಅವಳು ಕೊಂಚ ಶಕ್ತಿಯನ್ನು ಪಡೆದ ಮೇಲೆ ಅವಳ ಮನೆಗೆ ತಾವು ಅವಳನ್ನು ಸುರಕ್ಷಿತವಾಗಿ ಒಯ್ದು ಮುಟ್ಟಿಸುವುದಾಗಿಯೂ ಹೇಳಿದಳು. ಅನಂತರ ಕುಸುಮೆಯನ್ನು ಮನೆಯೊಳಗೆ ಬರಲು ಹೇಳಿದಳು. ಕುಸುಮೆ ಇನ್ನೂ ಇವರ ಮಾತನ್ನು ನಂಬುವುದೋ ಬಿಡುವುದೋ ಎನ್ನುವ ಜಿಜ್ಞಾಸೆಯಲ್ಲಿ ಇರುವುದನ್ನು ಕಂಡು ಆ ಮುಸ್ಲಿಂ ಬಂಧು ಮನೆಯೊಳಕ್ಕೆ ಹೋಗಿ ತನ್ನ ಪವಿತ್ರಗ್ರಂಥವಾದ ಕುರಾನನ್ನು ತಂದು, ಅದನ್ನು ಮುಟ್ಟಿ, ಪ್ರಾಣ ಹೋದರೂ ಕುಸುಮೆಯನ್ನು ರಕ್ಷಿಸುವುದಾಗಿ ಪ್ರಮಾಣ ಮಾಡಿದ ಮೇಲೆ ಕುಸುಮೆಗೆ ಅವರ ವಿಷಯದಲ್ಲಿ ನಂಬಿಕೆ ಉಂಟಾಯಿತು. ಅವರನ್ನು ಅನುಸರಿಸಿ ಅವರ ಮನೆಗೆ ಬಂದಳು.

ಆ ಮುಸ್ಲಿಮನ ಹೆಸರು ಮಸ್ತಾನ್ ಖಾನ್ ಎಂದು. ಅವನಿಗೆ ಎಲ್ಲ

ರೀತಿಯಲ್ಲಿ ತಕ್ಕ ಹೆಂಡತಿ ಬೀಬಿ. ಇವರಿಬ್ಬರು ಬಡವರಾದರೂ ತುಂಬ ದಯಾಪರರೂ, ಭಗವದ್ಭಕ್ತರೂ ಆಗಿದ್ದರು. ಹೀಗಾಗಿ ಅವರು ಆ ಕೇರಿಗೆಲ್ಲ ತುಂಬಾ ಬೇಕಾಗಿದ್ದರು.

ಮಸ್ತಾನ್‌ಖಾನನ ವೃತ್ತಿ ಕುದುರೆಗಳನ್ನು ಸಾಕುವುದು—ಅಂದರೆ ಕಾಸ್ತಾರನ ಕೆಲಸ. ಅವನ ಒಡೆಯನ ಸುಮಾರು ಐವತ್ತು ಕುದುರೆಗಳನ್ನು ಮಸ್ತಾನ್‌ಖಾನನು ನೋಡಿಕೊಳ್ಳುತ್ತಿದ್ದ. ಕುದುರೆಗಳಿಗೆಂದು ವಿಶಾಲವಾದ ಲಾಯ ಕಟ್ಟಲ್ಪಟ್ಟಿತ್ತು. ಅವುಗಳಿಗೆ ಬೇಕಾಗುವ ಹುಲ್ಲು ಹುರುಳಿಗಳನ್ನು ಸಾಕಷ್ಟು ದಾಸ್ತಾನುಮಾಡಿದ್ದರು. ಈ ಕುದುರೆಗಳ ಆರೈಕೆ ನೋಡಿಕೊಳ್ಳಲು ಮಸ್ತಾನನ ಕೈಕೆಳಗೆ ನಾಲ್ಕೈದು ಜನ ಆಳುಗಳು ಇದ್ದರು. ಅವರು ಕುದುರೆಗಳನ್ನು ತೊಳೆಯುವುದು, ಮೈಯುಜ್ಜಿ ಮಾಲೀಸುಮಾಡುವುದು, ಹೊತ್ತು ಹೊತ್ತಿಗೆ ಆಹಾರ ಒದಗಿಸಿ, ಸಂಜೆ ಸುತ್ತಾಡಿಸಿಕೊಂಡು ಬರುವುದು—ಇವೇ ಮೊದಲಾದ ಕೆಲಸಗಳಲ್ಲಿ ತೊಡಗಿದ್ದ. ಅವರ ಮೇಲ್ವಿಚಾರಣೆ ನೋಡಿಕೊಳ್ಳುತ್ತ, ಯಜಮಾನರು ಬಯಸಿದಾಗ ಕುದುರೆಗಳನ್ನು ಸಂಚಾರಕ್ಕೆ ಅಣಿಗೊಳಿಸಿಕೊಡುವುದೇ ಮಸ್ತಾನ್‌ಖಾನನ ಕೆಲಸವಾಗಿತ್ತು. ಅವನು ತನಗೆ ದೊರೆತ ಅಲ್ಪ ಆದಾಯದಲ್ಲಿ ತೃಪ್ತಿಯಿಂದ ಜೀವನ ಮಾಡುತ್ತಾ ತನ್ನ ದಣಿಗಳ ಸೇವೆಯನ್ನು ನಿಷ್ಠೆಯಿಂದ ಮಾಡುತ್ತಾ—ಇತ್ತ ಆಳುಗಳಿಗೂ ಅತ್ತ ದಣಿಗಳಿಗೂ ಬೇಕಾದವನಾಗಿದ್ದ.

ಆ ಮುಸಲ್ಮಾನ್ ದಂಪತಿಗಳಿಗೆ ಕುಸುಮೆಯ ಕರುಣ ಕಥೆಯನ್ನು ಕೇಳಿ ಕರುಳು ಚುರುಕ್ ಎಂದಿತು. ಅವರು ಮೊದಲೇ ದಯಾರ್ದ್ರ ಹೃದಯಿಗಳು. ಕಷ್ಟದಲ್ಲಿ ಇದ್ದವರನ್ನು ಕಂಡರೆ, ಸಂಕಟಪಡುವವರನ್ನು ಕಂಡರೆ ಅವರ ಮನಸ್ಸು ಕರಗಿ ನೀರಾಗುತ್ತಿತ್ತು, ಈಗ ಉಚ್ಚ ಮಹಿಳೆಯಂತೆ ಕಾಣುವ, ಸುಕುಮಾರಿಯಾದ ಕುಸುಮೆ ಯಾರೋ ದುರಾತ್ಮರ ಆಕ್ರಮಕ್ಕೆ ಸಿಕ್ಕಿ ಭಂಗಪಟ್ಟು ಹೇಗೋ ಅವರ ಕೈಯಿಂದ ತಪ್ಪಿಸಿಕೊಂಡು ಬಂದಿರುವಳೆಂಬುದನ್ನು ತಿಳಿದು ಅವಳ ಬಗ್ಗೆ ತುಂಬ ಮರುಕ ಉಂಟಾಗಿತ್ತು; ಅವಳ ಧೈರ್ಯಕ್ಕಾಗಿ ಅಭಿಮಾನವುಂಟಾಗಿತ್ತು. ಸ್ವಜಾತಿಯವರೇ ಹೀಗೆ ಒಬ್ಬ ಹೆಣ್ಣು ಮಗಳನ್ನು ಚಿತ್ರಹಿಂಸೆ ಕೊಟ್ಟು ಗೋಳಾಡಿಸುವುದನ್ನು ಕೇಳಿ ಸಾತ್ವಿಕ ಮಹಮ್ಮದೀಯನಾದ ಮಸ್ತಾನ್‌ಖಾನನ ಹೃದಯದಲ್ಲಿ ಕ್ರೋಧ ಹೊಗೆಯಾಡಿತು. ಕುಸು

ಮೆಯ ಮೇಲೆ ಕೈಮಾಡಲೆತ್ನಿಸಿದವರು ಪಿಶಾಚಿಗಳೆಂದೂ, ಅವರು ಸೈತಾನ ರೆಂದೂ ಬಾಯಿಗೆ ಬಂದಂತೆ ಬೈದ. ತನ್ನ ಮನೆಯಲ್ಲಿ ಕುಸುಮೆ ಯಾವು ದಕ್ಕೂ ಹೆದರಿಕೊಳ್ಳುವ ಕಾರಣವಿಲ್ಲವೆಂದೂ, ತನ್ನನ್ನು ಹಿರಿಯಣ್ಣನೆಂದು ತಿಳಿದು ನೆಮ್ಮದಿಯಾಗಿ, ಮನಬಂದಷ್ಟು ದಿನ ಇರಲು ತನ್ನ ಅಭ್ಯಂತರವಿಲ್ಲ ವೆಂದೂ ತಿಳಿಸಿ, ಅವಳ ಆರೈಕೆಯ ಭಾರವನ್ನು ಸಹಧರ್ಮಿಣಿಯಾದ ಬೀಬಿಗೆ ವಹಿಸಿದ.

ಈ ವೇಳೆಗಾಗಲೇ ಕುಸುಮೆ ಬೀಬಿಯ ತಂಗಿಯೇ ಆಗಿಬಿಟ್ಟಿದ್ದಳು. ಬೀಬಿಯ ಅನಂತ ಕರುಣೆಯ ಶಿಶುವಾಗಿ, ಅವಳ ಪ್ರೀತಿಯ ರಕ್ಷಾಕವಚದಲ್ಲಿ ಅವಳು ತನ್ನ ಎಲ್ಲ ದುಗುಡ, ಶಂಕೆ, ಕಳವಳಗಳನ್ನು ಮರೆತುಬಿಟ್ಟಿದ್ದಳು. ಬೀಬಿಯ ನಿರ್ಮಲಾಂತಃಕರಣವನ್ನೂ, ಸೌಭಾಗ್ಯಸ್ನೇಹಪರತೆಯನ್ನೂ ಕಂಡು ಕುಸುಮಾಜಿಗೆ ತನ್ನ ತಾಯಿಯನ್ನು ಕಂಡಂತೆಯೇ ಆಗಿತ್ತು. ಜಗತ್ತಿನಲ್ಲಿ ವಿಜಯಭದ್ರನಂತಹ ರಾಕ್ಷಸರೂ ಇದ್ದಾರೆ, ಮಸ್ತಾನ್ ಖಾನನಂತಹ ಸಾತ್ವಿಕರೂ ಇದ್ದಾರೆ ಎಂಬುದು ಮೊದಲ ಬಾರಿಗೆ ಅವಳಿಗೆ ಅರಿವಾಯಿತು. ಜಗತ್ತಿನ ತುಂಬ ವಿಜಯಭದ್ರನಂತಹ ರಾಕ್ಷಸರೇ ಇರುವರೆಂದು ಅವಳ ಇದುವರೆಗಿನ ಅನುಭವವಾಗಿತ್ತು. ಮಸ್ತಾನ್ ಖಾನ್ ದಂಪತಿಗಳ ನಡೆನುಡಿ, ಸಾತ್ವಿಕ ಜೀವನವನ್ನು ನೋಡಿ, ಸಹಧರ್ಮಿಯರಿಗಿಂತ ವಿಧರ್ಮಿಯರೆನಿಸಿಕೊಂಡವರೇ ಎಷ್ಟೋ ಉತ್ತಮರೆಂಬ ಭಾವನೆಯುಂಟಾಯಿತು. ಮಸ್ತಾನ್ ಖಾನ್ ದಂಪತಿಗಳ ದೈವಭಕ್ತಿ–ದೀನದಲಿತರ ಬಗ್ಗೆ ಇರುವ ಕರುಣೆ, ಅನ್ಯಮತೀಯರ ಬಗ್ಗೆ ಇರುವ ಸಹಿಷ್ಣುತೆ ಗೌರವಗಳನ್ನು ಕಂಡು ಅವಳಿಗೆ ಹಿಂದೂಗಳ ದ್ವೇಷಿಗಳೆಂದು ಹೇಳಲಾಗಿದ್ದ ಮುಸಲ್ಮಾನರಲ್ಲೂ ಉತ್ತಮ ಪುರುಷರು ಇರುವರೆಂದು ಮನವರಿಕೆಯಾಯಿತು.

ಕುಸುಮಾಜಿ ಊಟಮಾಡಿ ಒಂದೆರಡು ದಿನಗಳಾಗಿತ್ತು. ಅವಳಿಗೆ ಭಯಂಕರ ಹಸಿವು ನೀರಡಿಕೆಗಳಾಗಿತ್ತು. ಇದುವರೆವಿಗೂ ಅವುಗಳ ಕಡೆ ಗಮನ ಹರಿದಿರಲಿಲ್ಲ. ಈಗ ನಿಲ್ಲಲು ಒಂದು ನೆಲೆ ದೊರೆತೊಡನೆ, ಅವಳ ಕ್ಷುದ್ ಭಾದೆ ಅಧಿಕವಾಯಿತು. ಅದನ್ನು ಅರಿತ ಬೀಬಿ, ಮೊದಲು ಒಂದು ಹಂಡೆಯಷ್ಟು ಬಿಸಿನೀರನ್ನು ಕಾಯಿಸಿ, ಕುಸುಮೆಯ ಸ್ನಾನಕ್ಕೆ ಅಣಿಗೊಳಿಸಿದಳು. ಅನಂತರ, ಅವಳು ಶಾಖಾಹಾರಿಯಾದುದರಿಂದ, ಹಣ್ಣುಹಂಪಲು

ಗಳನ್ನೂ, ಹಸುವಿನ ಹಾಲನ್ನೂ ತರಿಸಿ ಅವಳು ತೃಪ್ತಿಯಾಗುವಂತೆ ಉಣಬಡಿಸಿದಳು. ಹೊಟ್ಟೆಗೆ ಆಹಾರ ಬಿದ್ದ ಮೇಲೆ, ಅತಿಯಾಗಿ ದಣಿದಿದ್ದ ಅವಳ ಶರೀರ ದೀರ್ಘ ವಿಶ್ರಾಂತಿಯನ್ನು ಬಯಸಿತು. ಕುಸುಮೆ ಹಾಸಿಕೊಂಡು ಮಲಗಿದವಳು ಮಾರನೆಯ ದಿನದ ತನಕ ಏಳಲಿಲ್ಲ. ಅಂತಹ ದೀರ್ಘ ನಿದ್ರೆಯ ಪದರಿನಲ್ಲಿ ಅವಳು ಬಿದ್ದಿದ್ದಳು.

ಮಾರನೆಯ ದಿನ ಕುಸುಮೆ ಹಾಸಿಗೆಯಿಂದ ಏಳುವ ವೇಳೆಗೆ ಅವಳಿಗಾಗಿ ಒಂದು ಗಂಡಾಂತರ ಕಾದು ಕುಳಿತಿತ್ತು. ಅವಳ ಭಾಗದ ದುರ್ವಿಧಿ ಅಲ್ಲಿಗೂ ಅವಳನ್ನು ಬೆನ್ನಟ್ಟಿಕೊಂಡು ಬಂದಿತ್ತು.

ಆ ದಿನ ಮುಂಜಾನೆಗೇ ಮಸ್ತಾನ್ ಖಾನನ ದಣಿ ಕುದುರೆಗಳನ್ನು ಒಯ್ಯಲು ಅವರ ಮನೆಗೆ ಬಂದಿದ್ದ. ಅವನು ಯಾವುದೋ ತುರುತಿನ ಕೆಲಸದ ಮೇಲೆ ಹೋಗಬೇಕಾಗಿದ್ದುದರಿಂದ, ಕುದುರೆಗಳನ್ನು ತೆಗೆದುಕೊಂಡು ಹೋಗಲು ಅವನೇ ಬಂದಿದ್ದ. ಕುಸುಮಾಜಿಗೆ ಮುಂಜಾನೆಗೇ ಎಚ್ಚರವಾಗಿತ್ತು. ಪ್ರಾತಃ ವಿಧಿಗಳನ್ನು ಪೂರೈಸಲು ಹೊರಗೆ ಬಂದಾಗ ಮಸ್ತಾನ್ ಖಾನನ ದಣಿಯು ಅವಳ ಕಣ್ಣಿಗೆ ಬಿದ್ದ. ಅವನನ್ನು ನೋಡುತ್ತಲೇ ಕುಸುಮೆಗೆ ಅದೇನಾಯಿತೋ ! ತಟ್ಟನೆ ಅವಳು ಚೀರುತ್ತ ಮನೆಯ ಒಳಗೆ ಬಂದು ಬೀಬಿಯ ಬೆನ್ನಹಿಂದೆ ಮುಗುವಿನಂತೆ ಅವಿತುಕೊಂಡಳು. ಅವಳಿಗೆ ಅವನ ಗುರುತು ಒಮ್ಮೆಲೇ ಆಗಿತ್ತು. ಅವನು ಬೇರಾರೂ ಅಲ್ಲದೆ ಕೊರಮುನಾಯಕ ಎಂಬುದನ್ನು ಅವಳು ಕಂಡುಕೊಂಡಳು. ಅವನೇ ಸೇವಕನ ವೇಷದಲ್ಲಿ ಬಂದು, ಕುಸುಮೆಗೆ ಪತ್ರವಿತ್ತು ಅವಳನ್ನು ಮನೆಯಿಂದ ಅಪಹರಿಸಿಕೊಂಡು ಹೋಗಿದ್ದ. ಅವನನ್ನು ದೂರದಿಂದ ನೋಡುತ್ತಲೇ ವಿಜಯಭದ್ರನ ಈ ಚಿತ್ರಗುಪ್ತರಿಂದ ತನಗೆ ಬಿಡುಗಡೆಯೇ ಇಲ್ಲವೇನೋ ಎಂದು ಅವಳು ಭೀತಿಯಿಂದ ಗಡಗಡನೆ ನಡುಗಿದಳು. ಅವಳ ಬಿಳಚಿಕೊಂಡ ಮುಖ, ನಡುಗುವ ಶರೀರವನ್ನು ನೋಡಿ, ಬೀಬಿ ಅದರ ಕಾರಣವನ್ನು ವಿಚಾರಿಸಿದಳು. ಕುಸುಮಾಜಿಗೆ ಅಲ್ಲಿ ಬಾಯಿಬಿಡಲು ಹೆದರಿಕೆಯಾಯಿತೇನೋ. ಅವಳು ಬೀಬಿಯನ್ನು ಕೋಣೆಗೆ ಕರೆದುಕೊಂಡು ಹೋಗಿ ತನ್ನ ಭೀತಿಯ ಕಾರಣವನ್ನೆಲ್ಲ ಹೇಳಿದಳು. ಅವನೇ, ಆ ಕೊರಮುನಾಯಕನೇ ತನ್ನನ್ನು ಅಪಹರಿಸಿ, ದುರುಳನಾದ ವಿಜಯಭದ್ರನಿಗೆ ಒಪ್ಪಿಸಿದ ನೀಚನೆಂದು ಹೇಳಿದಾಗ, ಬೀಬಿಗೂ ನಿಜ

ವಾಗಿಯೂ ಆಶ್ಚರ್ಯ ಹೆದರಿಕೆಗಳು ಏಕಕಾಲದಲ್ಲಿ ಉಂಟಾದುವು. ಏಕೆಂದರೆ ಯಾರನ್ನು ಆ ದಂಪತಿಗಳು ಹೆಣ್ಣು ಮಗಳನ್ನು ಗೋಳಾಡಿಸಿದ ಪಿಶಾಚಿಗಳು, ಸೈತಾನರೆಂದು ಬೈದಿದ್ದರೋ ಅವರು ಬೇರೆ ಯಾರೂ ಅಲ್ಲದೆ ವಿಜಯಭದ್ರ ಕೊರಮನಾಯಕರೆಂದು ಅವಳಿಗೆ ತಿಳಿದಾಗ ಅವಳು ಕ್ಷಣ ಕಾಲ ಕುಳಿತಳು. ಅವಳಿಗೆ ಏನು ಹೇಳಬೇಕೆಂಬುದು ತೋಚಲಿಲ್ಲ. ಆದರೆ ಅವಳ ಮುಖವನ್ನು ಎವೆಯಿಕ್ಕದೆ ನೋಡುತ್ತಾ ಕುಳಿತ ಕುಸುಮಾಜಿಗೆ ಈಗ ತನ್ನ ಮಾನ ಪ್ರಾಣ ಈ ಮುಸಲ್ಮಾನ್ ದಂಪತಿಗಳ ಕೈಯಲ್ಲಿವೆ. ಅವರು ಮನಸ್ಸು ಮಾಡಿದರೆ ತಮ್ಮ ದಣಿಗೆ ಅರ್ಥಾತ್ ತನ್ನ ಶತ್ರುವಿಗೆ ತನ್ನನ್ನು ಒಪ್ಪಿಸ ಬಹುದು—ಇಲ್ಲದೆ ಹೋದರೆ ತನ್ನನ್ನು ತಮ್ಮ ಭಾಷೆಯಂತೆ ಕಾಪಾಡಬೇಕು. ಹೀಗೆ ತನ್ನ ಪ್ರಾಣದ ಮೇಲಿನ ಎಲ್ಲ ಅಧಿಕಾರ ಶಕ್ತಿಯುಳ್ಳ ಅಧಿದೇವತೆ ಯಂತೆ ಬೀಬಿ ಅವಳಿಗೆ ತೋರಿದಳು. ಅವಳು ಬೀಬಿಯ ಬಾಯಿಂದ ಏನು ಬರುವುದೋ ಎಂದು ಕಾತರಳಾಗಿ ಕುಳಿತಿದ್ದಳು.

ಕೊಂಚ ಹೊತ್ತಾದ ಮೇಲೆ ಬೀಬಿ ಕುಸುಮೆಯ ವೃತಡವೃತ್ತ ಹೇಳಿ ದಳು. "ನೀನು ಯಾವುದಕ್ಕೂ ಕಳವಳ ಪಡಬೇಡ ತಂಗಿ. ಈ ಮನೆಯಲ್ಲಿ ನಾನು ಇರುವಾಗ ನಿನಗೆ ಇಲ್ಲಿ ಯಾವ ಭಯವಿಲ್ಲ. ನಮ್ಮ ಪ್ರಾಣ ಹೋದರೂ ನಾವು ಆಶ್ರಿತರನ್ನು ಬಿಟ್ಟುಕೊಡುವುದಿಲ್ಲ—ನೀನು ನಿಶ್ಚಿಂತೆ ಯಿಂದ ಇರು. ಅವರು ಹೊರಗೆ ಹೊರಟುಹೋಗುವವನಕ ನೀನು ಈಚೆಗೆ ತಲೆಯಿಡಬೇಡ, ಈ ಕೋಣೆಯಲ್ಲಿ ಬಚ್ಚಿಟ್ಟುಕೊಂಡಿರು. ನಾನು ಅವರು ಹೊರಟುಹೋದ ಮೇಲೆ ಕರೆಯುತ್ತೇನೆ." ಎಂದು ಆಶ್ವಾಸನವಿತ್ತಳು ಬೀಬಿ.

ಕುಸುಮೆ ಆದರಂತೆ ಉಗ್ರಾಣದ ಕೋಣೆಯಲ್ಲಿ ಹೋಗಿ ಅವಿತು ಕೊಳ್ಳುವುದಕ್ಕೂ ಕೊರಮನಾಯಕ ಮಸ್ತಾನ್ ಖಾನನೊಡನೆ ಮಾತನಾಡಿ ಕೊಂಡು ಮನೆಯೊಳಗೆ ಬರುವುದಕ್ಕೂ ಸರಿಹೋಯಿತು.

ಕೊರಮನಾಯಕನು ಕುದುರೆಯ ಲಾಯಕ್ಕೆ ಹೊರಟಿದ್ದಾಗ ಮಸ್ತಾನ್ ಖಾನನ ಮನೆಯಿಂದ ಹೊರಬಿದ್ದ ಕುಸುಮಾಜಿಯನ್ನು ನೋಡಿದ್ದ. ಅವಳ ಹಿಂದೂ ಉಡಿಗೆ, ಅವಳ ತೇಜಸ್ವಿಯಾದ ಸುಂದರ ಕಾಯವನ್ನು ನೋಡಿ ಅವಳ ಬಗ್ಗೆ ಕುತೂಹಲವಾಗಿತ್ತು. ಅವಳ ವಿಷಯವನ್ನು ಮಸ್ತಾನ್ ಖಾನ

ನೊಡನೆ ಪ್ರಸ್ತಾಪಿಸಲು ಹಿಂದಿರುಗಿ ಬರುತ್ತಿದ್ದಂತೆ, ಅವನನ್ನು ನೋಡಿದ ಕುಸುಮಾಜಿ ಚಿಟ್ಟನೆ ಚೀರಿಕೊಂಡು ಮನೆಯೊಳಕ್ಕೆ ಓಡಿಹೋಗಿದ್ದಳು. ಇದರಿಂದ ಕೊರಮನಾಯಕನಿಗೆ ಇನ್ನಿಷ್ಟು ಅಚ್ಚರಿಯಾಯಿತು. ಈ ಹಿಂದೂ ಸ್ತ್ರೀ ನೋಡಲು ಉಚ್ಚದರ್ಜೆಯ ಯುವತಿಯಂತೆ ಕಾಣುವ ಹೆಣ್ಣು ತನ್ನನ್ನು ನೋಡುತ್ತಲೇ ಹೆದರಿಕೊಂಡು, ಚೀರಿದುದೇಕೆ? ಕೂಡಲೇ ಮನೆಯೊಳಕ್ಕೆ ಓಡಿಹೋದುದೇಕೆ ಎಂಬುದನ್ನು ತಿಳಿಯುವ ಕುತೂಹಲವಾಗಿ ಆ ಬಗ್ಗೆ ಮಸ್ತಾನ್ ಖಾನನನ್ನು ಪ್ರಶ್ನಿಸಿದ. ಇದುವರೆಗೆ ಕುದುರೆಯ ಲಾಯದಲ್ಲಿ ಇದ್ದ ಮಸ್ತಾನ್ ಖಾನನಿಗೆ ಇವುಗಳೊಂದೂ ತಿಳಿದಿರಲಿಲ್ಲ. ಅವನು ಕೊರಮನಾಯಕನ ಕಾತರದ ಪ್ರಶ್ನೆಗಳಿಗೆ ಲೋಕಾರೂಢಿಯಾಗಿ ಉತ್ತರ ಕೊಟ್ಟ. ಅವನ ಮಾತುಕತೆಗಳಿಂದ ಕೊರಮನಾಯಕನ ಕುತೂಹಲ ಇನ್ನಿಷ್ಟು ಬೆಳೆಯಿತು. ಅವಳೇ ತಮ್ಮ ಕಣ್ಣು ತಪ್ಪಿಸಿ ಪರಾರಿಯಾಗಿರುವ ಕುಸುಮಾಜಿ ಎನ್ನುವ ವಿಷಯದಲ್ಲಿ ಸಂಶಯ ಬರಲಿಲ್ಲ, ಮಸ್ತಾನ್ ಖಾನನನ್ನು ಕೆದಕಿಕೆದಕಿ ಪ್ರಶ್ನಿಸಿ, ಅವನಿಂದ ಅವಳ ಎಲ್ಲ ಸಂಗತಿಯನ್ನು ಸಂಗ್ರಹಿಸಿಕೊಂಡ ತಾವು ಯಾರ ಶೋಧನೆಯಲ್ಲಿ ಹಗಲಿರುಳೂ ಅನ್ನ ನೀರು ಬಿಟ್ಟು ಅಲೆಯುತ್ತಿರುವೆವೊ ಆ ವ್ಯಕ್ತಿಯೇ ಮಸ್ತಾನ್ ಖಾನನು ಹೇಳುವ 'ಹಿಂದೂ ಸ್ತ್ರೀ' ಎಂಬುದರ ಬಗ್ಗೆ ಸಂಶಯ ಉಳಿಯಲಿಲ್ಲ. ಆದರೆ ಈ ಸಂಗತಿ – ತನ್ನ ಮನೆಯಲ್ಲಿ ಎಂತಹ ಅಮೂಲ್ಯ ರತ್ನ ಬಂದು ಸೇರಿಕೊಂಡಿದೆ ಎಂಬ ಸಂಗತಿ ಮಸ್ತಾನ್ ಖಾನನಿಗೆ ತಿಳಿದಿಲ್ಲವೆನ್ನುವುದೂ ಖಚಿತವಾಯಿತು. ಇದನ್ನು ಅವನೊಂದಿಗೆ ಪ್ರಸ್ತಾಪಿಸುವ ಮುನ್ನ ಅವನ ಮನಸ್ಸಿನಲ್ಲಿ ಇರುವ ವಿಚಾರವನ್ನು ತಿಳಿದುಕೊಳ್ಳಲು ಕೊರಮನಾಯಕನು, ಮಸ್ತಾನನೊಂದಿಗೆ ತುಂಬ ಸ್ನೇಹವನ್ನು ನಟಿಸುತ್ತಾ ಅವನೊಂದಿಗೆ ಆಪ್ತಾಲೋಚನೆ ಮಾಡುವುದಿದೆ ಎಂದು ಹೇಳಿ ಮನೆಯ ಒಳಗೆ ಬಂದ. ಅವನೊಡನೆ ಬೇರೆಯಾಗಿ ಕುಳಿತು ನೇರ ವಿಷಯಪ್ರಸ್ತಾಪಕ್ಕೆ ಬರದೆ ಯಾವುದೋ ಕೊನೆಯಿಂದ ಮಾತಿಗೆ ಆರಂಭಿಸಿದ.

"ನೋಡು ಮಸ್ತಾನ್. ನೀನು ನನ್ನ ಸೇವಕ—ನನ್ನ ಕುದುರೆಗಳ ಕಾಸ್ತಾರನಾದರೂ ನಿನ್ನನ್ನು ನಾನು ಸ್ನೇಹಿತನೆಂದೇ ಭಾವಿಸಿದ್ದೇನೆ. ಅದೇ ವಿಶ್ವಾಸದಲ್ಲಿ ಇದುವರೆಗೆ ನಿನ್ನನ್ನು ನಡಸಿಕೊಂಡಿದ್ದೇನೆ. ನಿನಗೆ ಯಾವು

ದಕ್ಕೂ ತೊಂದರೆಯಾಗದಂತೆ ನಾನು ನೋಡಿಕೊಂಡಿದ್ದೇನೆ. ಒಂದು ರೀತಿಯಾಗಿ ನಿನ್ನನ್ನು ನನ್ನ ಸ್ವಂತ ಮಗನಂತೆ ನೋಡಿಕೊಂಡಿದ್ದೇನೆ.... ಇದುವರೆಗೆ ನಿನ್ನಿಂದ ನಾನು ಯಾವ ಉಪಕಾರವನ್ನೂ ಬಯಸಿರಲಿಲ್ಲ. ಈಗ ನಿನ್ನಿಂದ ನನಗೆ ಒಂದು ಉಪಕಾರವಾಗಬೇಕಾಗಿದೆ. ನೀನು ಮನಸ್ಸು ಮಾಡಿದರೆ ನಿನ್ನ ಕೈಲಿ ಸಾಧ್ಯ. ಇದು ಒಂದು ರೀತಿಯಾಗಿ ನೀನು ಮಾಡುವ ಉಪಕಾರವಾದರೂ ಇನ್ನೊಂದು ರೀತಿಯಲ್ಲಿ ನಾನು ನಿನಗೆ ಮಾಡುವ ಪುರಸ್ಕಾರವೇ ಹೌದು. ಯಾಕೆಂದರೆ, ಈ ಉಪಕಾರ ಮಾಡಿದ ಮೇಲೆ ನೀನು ನನ್ನ ಸೇವಕನಾಗಿ ಉಳಿಯುವುದಿಲ್ಲ. ಶ್ರೀಮಂತರಾದ ವಿಜಯಭದ್ರರ ಕೃಪಾಕಟಾಕ್ಷಕ್ಕೆ ಬಿದ್ದಮೇಲೆ ನಿನ್ನ ಸಾಂಪತ್ತಿಕ ಸ್ಥಿತಿಯೂ ಉತ್ತಮಗೊಳ್ಳುತ್ತದೆನ್ನಲು ಸಂಶಯವಿಲ್ಲ. ಈಗ ನೀನು ದೊಡ್ಡ ಮನಸ್ಸು ಮಾಡಬೇಕಾಗಿದೆ...." ಎಂದು ಹೇಳಿ ಮಾತು ನಿಲ್ಲಿಸಿದ್ದ.

ಈ ಪೀಠಿಕೆಯನ್ನು ಕೇಳಿ ಮಸ್ತಾನ್ ಖಾನನಿಗೆ ಏನು ಹೇಳಬೇಕೆಂದು ತೋರಲಿಲ್ಲ. ತನ್ನ ದಣಿ ತನ್ನಿಂದ ಯಾವುದೋ ಕೆಲಸವಾಗಬೇಕೆಂದು ಬಯಸುತ್ತಿದ್ದಾನೆ ಎಂದು ಮಾತ್ರ ಅವನಿಗೆ ಅರ್ಥವಾಯಿತು. ದಣಿಯವರು ಸೇವಕನಿಗೆ ಕೆಲಸಮಾಡಲು ಆಜ್ಞಾಪಿಸಬೇಕೇ ಹೊರತು ಹೀಗೆ ಬೇಡಿಕೊಳ್ಳಬೇಕೆ? ಇದು ಯಾಕೋ ಪರಿಸ್ಥಿತಿಯ ವಿಪರ್ಯಾಸವೆಂದು ಮಸ್ತಾನ್ ಖಾನನಿಗೆ ಅನಿಸದೆ ಇರಲಿಲ್ಲ. ಅವನು ಮಾತಿಲ್ಲದೆ ಕುಳಿತು ಕೊರಮನಾಯಕನಿಂದ ಇಂತಹ ಕೆಲಸ ಮಾಡೆಂದು ಅಪ್ಪಣೆ ಬರುವುದೆಂದು ಕಾದು ನಿರಾಶನಾಗಿ, ಅವನೇ ಹೇಳಿದ.

" ಅದು ಏನು ಕೆಲಸ ಹೇಳಿದರೆ ಈ ಮಸ್ತಾನ್ ಖಾನ್ ಖಾವಂದರಿಗೆ ಖಂಡಿತ ಇಲ್ಲವೆಂದು ಹೇಳುವುದಿಲ್ಲ."

"ನೋಡು ಮಸ್ತಾನ್ ಖಾನ್, ನಿನ್ನ ಯೋಗ್ಯತೆ, ನಿನ್ನ ಸ್ವಾಮಿನಿಷ್ಠೆಯನ್ನು ನಾನು ಮೊದಲಿನಿಂದ ಬಲ್ಲೆ. ನಿನ್ನಂಥ ಒಳ್ಳೆಯ ಸೇವಕರನ್ನು ಪಡೆದ ನಾನೇ ಭಾಗ್ಯಶಾಲಿ. ನೋಡು, ನಿನ್ನ ಸದ್ಗುಣಗಳನ್ನು ನಿಮ್ಮ ಅಲ್ಲಾ ಮೆಚ್ಚಿಕೊಂಡೋ ಏನೋ—ನಿನಗೆ ತಿಳಿಯದಂತೆ ನಿನ್ನ ಆಶ್ರಯದಲ್ಲಿ ಒಂದು ಅಮೂಲ್ಯ ರತ್ನವನ್ನು ತಂದು ಬಿಟ್ಟಿದ್ದಾನೆ, ನಿನ್ನ ಆಶ್ರಯಕ್ಕೆ ಬಂದಿರುವ ಈ ಹೆಣ್ಣು ಸಾಮಾನ್ಯ ಹೆಣ್ಣೆಂದು ತಿಳಿಯಬೇಡ. ಅವಳು ರಾಜಪುತ್ರಿ

ಅವಳಿಗಾಗಿ ಶ್ರೀಮಂತರಾದ ವಿಜಯಭದ್ರರು ತಮ್ಮ ಸರ್ವಸ್ವವನ್ನು ಕಳೆದು ಕೊಳ್ಳಲು ಸಿದ್ಧರಾಗಿದ್ದಾರೆ. ಅಂತಹ ಅಮೂಲ್ಯನಿಧಿ ಅವಳು. ಅಂಥಹ ನಿಧಿಯನ್ನು ನೀನು ಮನೆಯಲ್ಲಿ ಇಟ್ಟುಕೊಂಡಿದ್ದರೂ ಅದರ ಬೆಲೆ ನಿನಗೆ ತಿಳಿಯದಿರುವುದೇ ಭಗವಂತನ ಮಾಯೆ! ನಾವು ನೂರಾರು ಮಂದಿ ನಿನ್ನೆ ಯಿಂದ ಶೋಧಿಸುತ್ತಾ ಹೊರಟಿರುವ ಆ ಹೆಣ್ಣು ನಿನ್ನ ಮನೆಯಲ್ಲಿ ತಾನಾಗಿ ಬಂದು ನಿಂತಿದ್ದಾಳೆ ಎಂದರೆ ದೇವರು ನಿನ್ನ ಮೇಲೆ ಎಷ್ಟು ಕರುಣಾಶಾಲಿ— ನಿನ್ನ ಭಾಗ್ಯ ಎಷ್ಟು ದೊಡ್ಡದು ಎಂಬುದು ತಿಳಿಯುತ್ತದೆ. ಈಗ ನೀನು ಮಾಡಬೇಕಾಗಿರುವುದು ಇಷ್ಟೇ. ಅವಳನ್ನು ನೀನು ನಮ್ಮ ವಶಕ್ಕೆ ಒಪ್ಪಿಸು. ಬೇಕಾದರೆ ಜೊತೆಯಲ್ಲಿ ನೀನೂ ಬಾ. ನಿನಗೆ ವಿಜಯಭದ್ರರನ್ನು ಭೇಟಿ ಮಾಡಿಸಿ, ಅವಳನ್ನು ದೊರಕಿಸಿಕೊಟ್ಟವನೆಂದು ಪರಿಚಯ ಮಾಡಿಸುವೆ. ಇವರು ನಿನ್ನ ಮೇಲೆ ಅನುಗ್ರಹಿಸಿ ಏನು ಕೊಟ್ಟರೂ ಕೊಟ್ಟಾರು. ನೀನು ಇಡೀ ಒಂದು ರಾತ್ರಿಯಲ್ಲೇ ಶ್ರೀಮಂತನಾಗಬಹುದು. ಆಲೋಚಿಸು.... ನಾನು ಹೇಳುವುದು ಸುಳ್ಳಲ್ಲ....ನೀನು ಕಾಣುತ್ತಿರುವುದು ಕನಸಲ್ಲ....ನೀನು ನಮ್ಮ ವಶಕ್ಕೆ ಅವಳನ್ನು ಒಪ್ಪಿಸಿದ ವರುಷದಲ್ಲಿಯೇ ನೀನು ಕಾಸ್ತರನಲ್ಲ —ಇಂಥ ನೂರಾರು ಕಾಸ್ತಾರರನ್ನು ಇಟ್ಟುಕೊಳ್ಳಬಲ್ಲ ಶ್ರೀಮಂತ."

ಈ ಎಲ್ಲ ಮಾತು ಕೇಳಿ ಮಸ್ತಾನ್ ಖಾನನ ಮೇಲೆ ಅನಿರೀಕ್ಷಿತ ಪರಿಣಾ ಮವುಂಟಾಯಿತು. ತಾನು ಯಾರನ್ನು ಸಾಮಾನ್ಯ ಹಿಂದೂ ಸ್ತ್ರೀ ಎಂದು ತಿಳಿದಿದ್ದನೋ ಅವಳು ರಾಜಪುತ್ರಿಯೆ? ಅವಳಿಗಾಗಿ ಶ್ರೀಮಂತ ವಿಜಯ ಭದ್ರನು ತನ್ನ ಸರ್ವಸ್ವವನ್ನು ಬಿಟ್ಟು ಕೊಡುವರೆ? ಹಾಗಿದ್ದರೆ ಇವಳೇಕೆ ಅವರನ್ನು ತಿರಸ್ಕರಿಸಬೇಕು? ಅವರ ಪ್ರೀತಿಯನ್ನು ಏಕೆ ಹಿಂಸೆ ಎಂದು ಕರೆಯ ಬೇಕು? ಇವುಗಳೊಂದೂ ಅರ್ಥವಾಗಲಿಲ್ಲ ಮಸ್ತಾನ್ ಖಾನನಿಗೆ. ಇವಳ ಬೆಲೆ, ಯೋಗ್ಯತೆ ಏನೇ ಇರಲಿ. ತಾನು ಇವಳನ್ನು ಕೊರಮನಾಯಕನಿಗೆ ವಶಪಡಿಸಿದೊಡನೆಯೇ ತಾನು ಶ್ರೀಮಂತನಾಗುತ್ತೇನೆ....ಶ್ರೀಮಂತ! ಒಂದೇ ರಾತ್ರಿಯಲ್ಲಿ ನೂರು ಕಾಸ್ತಾರರನ್ನು ಕೈಕೆಳಗೆ ಇಟ್ಟುಕೊಳ್ಳಲು ಶಕ್ತನಾದ ಶ್ರೀಮಂತ!....ಅಹಹ....ಅಹಹ....

ಮಸ್ತಾನ್ ಖಾನನಿಗೆ ತಲೆ ಸುತ್ತು ಬಂತು....ಅವನು ಹುಚ್ಚು ಹಿಡಿದವ ನಂತೆ ನಗುತ್ತ ನಾನು ಶ್ರೀಮಂತ....ನಾನು ಶ್ರೀಮಂತ ಎಂದುಕೊಳ್ಳುತ್ತ

ಅಲ್ಲಿಂದ ಎದ್ದು ಹೊರಟ. ತನ್ನ ಎಲ್ಲ ಶ್ರೀಮಂತಿಕೆಗೆ ಕಾರಣಳಾದ ಕುಸುಮಾಜಿಯನ್ನು ನೋಡಲೆಂದೋ ಏನೋ. ಆದರೆ ಮರುಕ್ಷಣದಲ್ಲಿ ಅದೇನನಿಸಿತೋ ಅವನು ಅಲ್ಲೇ ಕುಳಿತು ಏನನ್ನೋ ಆಲೋಚಿಸುತ್ತಾ ಕುಳಿತ.

ಕೊರಮನಾಯಕ ಮಸ್ತಾನ್ ಖಾನನಿಗೆ ತಾನು ಹೇಳಿದ್ದ ಮಾತುಗಳು ಹುಚ್ಚುಹಿಡಿಸಿರಬೇಕು ಎಂದೆನಿಸಿತು, ಮೊದಲು ಅವನ ಸಂತೋಷವನ್ನು ಕಂಡಾಗ. ಅನಂತರ ಅವನು ಗಂಭೀರವಾಗಿ ವಿಚಾರಮಾಡುತ್ತ ಕುಳಿತುದನ್ನು ಕಂಡು ಬಹುಶಃ ಇದನ್ನು ಆಲೋಚಿಸುತ್ತಿರಬೇಕು—ಎಂದುಕೊಂಡ. ಅವನಂತೆ ಯಾವುದನ್ನೂ ಸಾವಧಾನವಾಗಿ ಆಲೋಚಿಸುವ ವ್ಯವಧಾನ ಕೊರಮನಾಯಕನಿಗೆ ಇರಲಿಲ್ಲ. ಅವನಿಗೆ ಬೇಕಾಗಿದ್ದುದು—ಎರಡೇ ಉತ್ತರ: 'ಉಂಟು', 'ಇಲ್ಲ', ಇವುಗಳಲ್ಲಿ ಒಂದು. ಈ ಉತ್ತರಗಳನ್ನು ನೋಡಿಕೊಂಡು ಕೊರಮನಾಯಕನ ಮುಂದಿನ ಆಲೋಚನೆ.

" ಯಾಕೆ ಮಸ್ತಾನ್ ಖಾನ್, ಮಾತನಾಡದೆ ಕುಳಿತೆ? ನನ್ನ ಸಲಹೆ ನಿನಗೆ ಸೇರಲಿಲ್ಲವೇ ಹೇಗೆ?........ಆತುರಪಡಬೇಡ. ಯಾವುದನ್ನೂ ನಿಧಾನವಾಗಿ ವಿಚಾರಮಾಡಿ ತಿಳಿಸು ! "

—ಎಂದ ಕೊರಮನಾಯಕ.

" ಒಡೆಯ, ಅನ್ನ ಕೊಡುವ ದಣಿ ನೀವು. ನೀವು ಮಾಡುವ ಸಲಹೆ ಸೂಕ್ತವೋ ಅಲ್ಲವೋ ಎಂಬುದನ್ನು ನನಗಿಂತ ನೀವು ಚೆನ್ನಾಗಿ ಬಲ್ಲಿರಿ. ನನ್ನ ಶ್ರೇಯಾಭಿಲಾಷಿಗಳಾದ ನಿಮಗೆ ನನಗೆ ಯಾವುದು ಒಳ್ಳೆಯದೆಂಬುದು ಗೊತ್ತು. ಇಲ್ಲವಾಗಿದ್ದರೆ ನೀವಾಗಿ ನೀವು ಈ ಸಲಹೆಯನ್ನು ಹೇಳುತ್ತಿದ್ದಿರಾ? ನಿಮ್ಮ ಮಾತಿಗೆ ನನ್ನ ಸಂಪೂರ್ಣ ಸಮ್ಮತಿ ಇದೆ. ಆದರೆ.... ನಾವು ಗಂಡ ಹೆಂಡಿರಿಬ್ಬರೂ ಸೇರಿಕೊಂಡು ಅವಳಿಗೆ ಆಶ್ರಯ ನೀಡಿರುವುದರಿಂದ, ನನ್ನ ಬೀಬಿಗೂ ಒಂದು ಮಾತು ತಿಳಿಸಿ, ಅವಳ ಒಪ್ಪಿಗೆಯನ್ನು ಪಡೆದು ಬರುತ್ತೇನೆ. ಯಾಕೆಂದರೆ ಆ ಸ್ತ್ರೀರತ್ನವನ್ನು ಉಪಾಯಾಂತರವಾಗಿ ನಿಮ್ಮ ವಶಕ್ಕೆ ಒಪ್ಪಿಸಲು ಅವಳ ನೆರವೂ ಬೇಕಾಗಿದೆ........" ಎಂದು ಹೇಳಿದ.

ಈ ಮಾತಿನಿಂದ ಕೊರಮನಾಯಕನಿಗೆ ಸಂತೋಷವಾಯಿತು. ಅವನು ಅದರಂತೆ ಮಾಡಬಹುದೆಂದು ಅನುಮತಿ ಕೊಟ್ಟ, ಹೆಂಡತಿಯೊಡನೆ ಆಪ್ತಾಲೋಚನೆ ನಡಸಿ ಹಿಂದಿರುಗುವ ಮಸ್ತಾನ್ ಖಾನನಿಗಾಗಿ ಕಾಯುತ್ತಾ

ಹಳಿತ ಕೊರಮನಾಯಕ.

ಮಸ್ತಾನ್ ಖಾನನು ಹೆಂಡತಿಯಾದ ಬೀಬಿಯನ್ನು ಬೇರೆಯಾಗಿ ಕರೆದು ಅವಳೊಡನೆ ಕೊರಮನಾಯಕನೊಡನೆ ನಡೆದ ಎಲ್ಲ ಮಾತುಕಥೆ ಯನ್ನು ಸವಿಸ್ತಾರವಾಗಿ ಹೇಳಿದ. ಈ ಸಂದಿಗ್ಧ ಪರಿಸ್ಥಿತಿಯಲ್ಲಿ ತಾವು ಮಾಡಬೇಕಾಗಿರುವ ಕರ್ತವ್ಯದ ಬಗ್ಗೆ ಹೆಂಡತಿಯ ಅಭಿಪ್ರಾಯ ಕೇಳಿದ.

ಮಸ್ತಾನ್ ಖಾನ್, ಕೊರಮನಾಯಕನೊಂದಿಗೆ ಅವನಿಗೆ ಪ್ರಿಯವಾ ಗುವ ರೀತಿಯಲ್ಲಿ ಮಾತನಾಡಿದ್ದರೂ ಅವನು ತನ್ನ ಅಂತರಂಗದಲ್ಲಿ ನಡೆಯು ತ್ತಿದ್ದ ತುಮುಲ ಯುದ್ಧವನ್ನು ಹೊರಗೆ ತೋರಿಸಲಿಲ್ಲ. ಅವನು ಈಗ ಒಂದು ಧರ್ಮಸಂಕಟಕ್ಕೆ ಸಿಕ್ಕಿಬಿದ್ದಿದ್ದ. ತಮ್ಮನ್ನೇ ದಿಕ್ಕೆಂದು ತಿಳಿದು, ಶರಣು ಬಂದ ಆ ಅಭಾಗಿನಿಯನ್ನು ತಾವು ಈಗ ಕಾಯುವುದೇ ಇಲ್ಲ—ಶತ್ರುಗಳಿಗೆ ಒಪ್ಪಿಸುವುದೇ, ಎಂಬುದು ಅವನ ಮುಂದೆ ಇದ್ದ ಪ್ರಶ್ನೆ! 'ಏನೇ ಆಗಲಿ ಆಶ್ರಿತ ರನ್ನು ರಕ್ಷಿಸುವುದು ಪುರುಷಧರ್ಮ. ಅದರಲ್ಲಿಯೂ ಕುಸುಮೆ ತುಂಬ ನೊಂದಿ ರುವ ವ್ಯಕ್ತಿ. ಅಬಲೆ. ಅವಳಿಗೆ ರಕ್ಷಣೆ ಕೊಡುವಾಗಲೇ ಅವಳಿಗೆ ಕುರಾನ್ ಮುಟ್ಟಿ ತನ್ನ ಮನೆಯಲ್ಲಿ ಅವಳು ಯಾವುದಕ್ಕೂ ಹೆದರಬೇಕಾಗಿಲ್ಲವೆಂದು, ಅವಳನ್ನು ಸುರಕ್ಷಿತವಾಗಿ ತನ್ನ ಮನೆಗೆ ಮುಟ್ಟಿಸುವುದಾಗಿ ಪ್ರಮಾಣ ಮಾಡಿ ಭಾಷೆ ಕೊಟ್ಟಿದೆ. ಈ ಭಾಷೆಯಂತೆ ನಡೆಯಬೇಕಾದ್ದು ನನ್ನ ಧರ್ಮ' ಎಂದು ಅವನಲ್ಲಿ ಇರುವ ಸದ್ವಿವೇಕ ಹೇಳುತ್ತಿತ್ತು.

"ಕುಸುಮೆ ಒಂದು ಅಮೂಲ್ಯ ನಿಧಿ. ಅವಳಿಗಾಗಿ ತನ್ನ ಸರ್ವಸ್ವವನ್ನು ಬಿಟ್ಟುಕೊಡಲು ಶ್ರೀಮಂತ ವಿಜಯಭದ್ರನು ಸಿದ್ಧನಿದ್ದರೆ, ಅಂತಹ ಅಮೂಲ್ಯ ಸ್ತ್ರೀರತ್ನವನ್ನು ನೀನು ಅಪ್ರಯತ್ನವಾಗಿ ಪಡೆದಿರುವಾಗ, ಅದನ್ನು ಸಲ್ಲಿಸ ಬೇಕಾದವರಿಗೆ ಸಲ್ಲಿಸಿ, ಆ ಮೂಲಕ ಬರುವ ಲಾಭದಿಂದ ನೀನು ಶ್ರೀಮಂತ ನಾಗು. ಇದೊಂದು ಅಮೂಲ್ಯ ಸಮಯ. ಈಗ ಬಿಟ್ಟರೆ ಮತ್ತೆ ಬಾರದು. ಕಾಯುವ ತನಕ ಕಾಸ್ತಾರನಾಗಿರುವುದು ಹೇಗಿದೆ? ಈ ಸ್ತ್ರೀರತ್ನವನ್ನು ಒಪ್ಪಿಸಿ, ಒಂದೇ ರಾತ್ರಿಯಲ್ಲಿ ಶ್ರೀಮಂತನಾಗುವುದು ಹೇಗಿದೆ?"—ಎಂದು ಅಡ್ಡದಾರಿಗೆ ಎಳೆಯಿತು ಅವನ ಅವಿವೇಕವಾಣಿ.

"ಕುಸುಮೆಗೆ ಭಾಷೆ ಇತ್ತುದಾಗಿದೆ. ಭಾಷೆಗೆ ತಪ್ಪಿದರೆ ತನಗೆ ನರಕ ಪ್ರಾಪ್ತಿಯಾಗುತ್ತದೆ....ಅಲ್ಲದೆ ಭಗವಂತನಾದ ಅಲ್ಲಾ ಮೆಚ್ಚುವುದಿಲ್ಲ. ಇದು

ವರೆಗೆ ಮಾಡಿರುವ ಎಲ್ಲ ದಾನಧರ್ಮ ವ್ಯರ್ಥವಾಗುತ್ತದೆ....."

"ಹಾಗಾದರೆ ಕುಸುಮೆಯ ತಲೆ ಕಾಯುವ ಶಕ್ತಿ ನಿನಗೆ ಇದೆಯೇ? ನೀನು ಕುಸುಮೆಯನ್ನು ಒಪ್ಪಿಸುವುದಿಲ್ಲವೆಂದು ಹೇಳುವೆ ಎನ್ನು. ಇದರ ಪರಿಣಾಮ? ಕೊರಮನಾಯಕ ನಿನ್ನ ತಲೆಯನ್ನು ಉರುಳಿಸುತ್ತಾನೆ. ಕುಸುಮೆಯನ್ನು ಹೊತ್ತುಕೊಂಡು ಹೋಗುತ್ತಾನೆ. ಇದರಿಂದ ಏನು ಸಾಧಿಸಿದಂತೆ ಆಯಿತು? ನಿನಗೂ ಸುಖವಿಲ್ಲ, ಕುಸುಮೆಗೂ ಸುಖವಿಲ್ಲ! ನಿನ್ನ ಭಾಷೆಯೂ ಉಳಿಯಲಿಲ್ಲ; ನಿನ್ನ ತಲೆಯೂ ಉಳಿಯಲಿಲ್ಲ! ನಿನ್ನ ಒಂದು ಅವಿಚಾರದ ನಿರ್ಧಾರದಿಂದ ಇಷ್ಟೆಲ್ಲ ಅನರ್ಥ! ಈಗಲೂ ಚೆನ್ನಾಗಿ ಆಲೋಚಿಸಿ ಬದುಕುವ ದಾರಿ ಯಾವುದೆಂದು ನಿರ್ಧರಿಸು........" ಎಂದು ಮನಸ್ಸಿನಲ್ಲಿ ವಿಚಾರದ ತುಮುಲಯುದ್ಧವೇ ನಡೆಯುತ್ತಿತ್ತು.

ಇದನ್ನೆಲ್ಲ ಹೆಂಡತಿಯೊಂದಿಗೆ ಪಾಲುಗೊಂಡ. ಕಡೆಗೆ ಅವನ ವಿವೇಕವೇ ಮೇಲ್ಗೈಯಾಯಿತು. ಅದಕ್ಕೆ ವಿಜಯ ದೊರೆಯಿತು. ಇದರಲ್ಲಿ ಹೆಂಡತಿಯಾದ ಬೀಬಿಯೂ ಅವನಿಗೆ ಸಹಕಾರವಿತ್ತಳು. ಅವಳ ಬೆಂಬಲವಿಲ್ಲದೆ ಇದ್ದರೆ, ಅವಳು ಅವನ ಮಬ್ಬು ಕವಿದ ಮನಸ್ಸಿನ ಮೇಲೆ ತನ್ನ ವಿಚಾರದ ಬೆಳಕನ್ನೇ ಹಾಯಿಸದೆ ಇದ್ದಿದ್ದರೆ ಮಸ್ತಾನ್‌ಖಾನನು ಸೈತಾನನ ಗುಂಪಿನವರ ಹಿತವಾದಕ್ಕೆ ಬಲಿಯಾಗುತ್ತಿದ್ದನೋ ಏನೋ! ಅಂತೂ ಅವನ ಆತ್ಮ ಉದ್ಧಾರವಾಯಿತು. ತಾನು ಸತ್ತರೂ ಸರಿ. ಕುಸುಮಾಜಿಯನ್ನು ಶತ್ರುಗಳ ಪಾಲಿಗೆ ಒಪ್ಪಿಸುವುದಿಲ್ಲ—ಎಂಬ ಕಠೋರ ನಿರ್ಣಯಮಾಡಿದ.

ಈಗ ಉಳಿದುದು ಈ ನಿರ್ಣಯವನ್ನು ಕಾರ್ಯಗತಮಾಡುವುದು. ಕುಸುಮಾಜಿಯ ಹಿತ ಯಾವ ದಾರಿಯಲ್ಲಿ ಹೋದರೆ ಉತ್ಕೃಷ್ಟ ರೀತಿಯಲ್ಲಿ ಸಾಧಿಸುವುದೋ ಆ ದಾರಿಯಲ್ಲಿ ಹೋಗಲು ಆ ದಂಪತಿಗಳು ನಿರ್ಧರಿಸಿದರು. ಆ ಬಗ್ಗೆ ಅವರು ಬಹಳ ಹೊತ್ತು ಮಾತನಾಡಿ, ಮಾಡಬೇಕಾದ ಕೆಲಸವನ್ನು ನಿರ್ಧರಿಸಿದರು.

ಅನಂತರ ಮಸ್ತಾನ್‌ಖಾನನು ಲಗುಬಗೆಯಿಂದ ಕೊರಮನಾಯಕನ ಬಳಿಗೆ ಬಂದು ನಗುಮೊಗದಿಂದ ಹೇಳಿದ.

"ಖಾವಂದ್, ನಮ್ಮ ಪೂರ್ವ ಜನ್ಮದ ಪುಣ್ಯ ವಿಶೇಷದಿಂದಲೆಂಬಂತೆ ತಾವು ಸರಿಯಾದ ವೇಳೆಯಲ್ಲಿ ಬಂದು ನಮಗೆ ತಿಳಿವಳಿಕೆ ಹೇಳಿ ತುಂಬ

ಉಪಕಾರ ಮಾಡಿದ್ದೀರಿ. ನೀವು ಹೇಳುವ ತನಕ ನಮ್ಮಲ್ಲಿ ಆಶ್ರಯಕ್ಕೆ ಬಂದಿರುವ ಆ ಹೆಣ್ಣು ಎಂತಹ ಅಪೂರ್ವನಿಧಿ ಎಂಬುದು ನಮಗೆ ತಿಳಿದಿರಲಿಲ್ಲ. ಬಡತನದಲ್ಲಿ ತೊಳಲುತ್ತಿದ್ದ ನಮಗೆ ಅಪೂರ್ವವಾದ ಗಣಿಯನ್ನು ತೋರಿಸಿದ್ದೀರಿ. ಇದಕ್ಕಾಗಿ ನಾವು ಎಷ್ಟು ಋಣಿಯಾಗಿದ್ದರೂ ಸಾಲದು. ನನ್ನ ಪತ್ನಿ ಬೀಬಿ ತಮ್ಮ ಸಲಹೆಯನ್ನು ಕೇಳಿ ತುಂಬ ಸಂತೋಷಪಟ್ಟಳು. ತಮ್ಮ ಸಲಹೆಯಿಂದ ನಮ್ಮ ಸೌಭಾಗ್ಯದ ಬಾಗಿಲು ತೆರೆಯಿತೆಂದು ತಿಳಿದಳು. ತಾವು ಇನ್ನು ತಡಮಾಡದೆ ಆ ಹೆಣ್ಣನ್ನು ಶ್ರೀಮಂತರಿಗೆ ಒಪ್ಪಿಸಲು ಸಿದ್ಧತೆಮಾಡಿ, ನೀವು ಮೇನೆ ಮೊದಲಾದುವುಗಳ ವ್ಯವಸ್ಥೆಮಾಡಿ ಬಂದರೆ, ನಾವು ಇಲ್ಲಿ ಆಕೆಯನ್ನು ಉಪಾಯವಾಗಿ ನಿಮ್ಮ ವಶಕ್ಕೆ ಒಪ್ಪಿಸುತ್ತೇವೆ. ನಾವು ಮಾಡಲಿರುವ ಸಂಚು ತಿಳಿದರೆ ಅವಳು ರಂಬಾಟಮಾಡಬಹುದು. ಇಲ್ಲವಾದರೆ ಇಲ್ಲಿಂದಲೂ ತಪ್ಪಿಸಿಕೊಂಡು ಹೊರಡಲು ಪ್ರಯತ್ನಿಸಬಹುದು." ಎಂದು ಹೇಳಿ ಕೊರಮನಾಯಕನನ್ನು ಹುರಿದುಂಬಿಸಿ ಮೇನೆಯನ್ನು ತರಲು ಅಟ್ಟಿದ.

ಕೊರಮನಾಯಕನು ಅತ್ತ ಮೇನೆಯನ್ನು ತರಲು ಹೊರಟುದೇ ತಡ, ಇತ್ತ ಮಸ್ತಾನ್ ಖಾನನು ಪತ್ನಿ ಬೀಬಿಯನ್ನು ಕೂಡಿಕೊಂಡು ಕುಸುಮಾಜಿ ಬಚ್ಚಿಟ್ಟುಕೊಂಡಿದ್ದ ಕೋಣೆಗೆ ಬಂದು ಹೆದರಿ ಕುಳಿತಿದ್ದ ಕುಸುಮಾಜಿ, ಹಾಗೂ ಹೆಂಡತಿಯನ್ನು ಕುರಿತು ಹೇಳಿದ.

" ತಂಗಿ, ನಿನ್ನ ಹಣೆಯ ಬರಹ ನೆಟ್ಟಗಿಲ್ಲ. ನಿನ್ನ ಗ್ರಹಚಾರ ಇನ್ನೂ ಹರಿದಿಲ್ಲವೆಂದು ಕಾಣುತ್ತೆ. ಇಲ್ಲವಾದರೆ ಇಲ್ಲಿ ಯಾರಿಗೂಕಾಣದ ಸ್ಥಳದಲ್ಲಿ ನಿನಗೆ ಆಶ್ರಯ ದೊರೆಯಲಾರದಾದ ಮೇಲೆ ನಿನ್ನ ವಿಧಿ ತುಂಬ ಕೆಟ್ಟದ್ದೇ ಸರಿ. ಈಗ ಆದುದಕ್ಕೆ ಚಿಂತಿಸಿ ಫಲವಿಲ್ಲ. ಅದಕ್ಕೆ ವೇಳೆಯೂ ಇಲ್ಲ. ನಿನ್ನ ಇಲ್ಲಿನ ನೀರಿನ ಋಣ ಇಂದಿಗೆ ತೀರಿತೆಂದು ತಿಳಿ. ನೀನು ಈ ಕೂಡಲೆ ಈ ಮನೆಯನ್ನು ಬಿಟ್ಟು ಹೊರಟು, ಕೊರಮನಾಯಕನ ಕೈಯಿಂದ ತಪ್ಪಿಸಿಕೊಳ್ಳಬೇಕಾಗಿದೆ. ಅವನು ಮೇನೆಯನ್ನು ಸಿದ್ಧಗೊಳಿಸಿ ತರುವುದರೊಳಗೆ ಇಲ್ಲಿಂದ ನೀನು ತಪ್ಪಿಸಿಕೊಂಡು ಹೋಗಬೇಕಾಗಿದೆ. ಇಲ್ಲಿಂದ ತಪ್ಪಿಸಿಕೊಳ್ಳಲು ನಿನಗೆ ಕುದುರೆ ಸಿದ್ಧಪಡಿಸಿಕೊಡುತ್ತೇನೆ. ನಿನ್ನ ಜೊತೆಗೆ ಬೀಬಿಯೂ ಬರುತ್ತಾಳೆ. ನೀವಿಬ್ಬರೂ ಎಲ್ಲಾದರೂ ಸಾಗಿಹೋಗಿ ಸುರಕ್ಷಿತವಾದ ಸ್ಥಳದಲ್ಲಿ ತಲೆಮರೆಸಿಕೊಳ್ಳಿ. ನಾನು ಕೊರಮನಾಯಕ ನಿಮ್ಮನ್ನು ಹಿಂಬಾಲಿಸದಂತೆ ಆದಷ್ಟು

ಮಟ್ಟಿಗೆ ತಡೆಯುತ್ತೇನೆ. ಮುಂದೆ ದೈವೇಚ್ಛೆ ಇದ್ದಂತೆ ಆಗುತ್ತದೆ. ಅಲ್ಲಾ ನಿಮ್ಮಿಬ್ಬರಿಗೂ ಒಳ್ಳೆಯದು ಮಾಡಲಿ" ಎಂದು ಹಾರೈಸಿ, ನಿಮಿಷ ಕಾಲ ವ್ಯರ್ಥಮಾಡದೆ ಅವರನ್ನು ಪ್ರಯಾಣ ಸಿದ್ಧರಾಗಲು ಹೇಳಿ, ಜೀನು ಮೊದಲಾದ ಕುದುರೆಯ ಉಪಕರಣಗಳನ್ನು ತೆಗೆದುಕೊಂಡು ಲಾಯಕ್ಕೆ ಹೊರಟ. ಐದು ನಿಮಿಷದಲ್ಲಿ ಎರಡು ಉತ್ತಮ ಅಶ್ವಗಳನ್ನು ಪ್ರಯಾಣಕ್ಕೆ ಸಿದ್ಧಪಡಿಸಿ ತಂದು ಬಾಗಿಲಿನಲ್ಲಿ ನಿಲ್ಲಿಸಿ, ಒಳಗಿದ್ದವರನ್ನು ಕರೆದ.

ಕುಸುಮಾಜಿಗೆ ತನ್ನ ಪ್ರಾಣವನ್ನು ಕಾಯ್ದ ಈ ಮುಸ್ಲಿಂ ಬಂಧುವನ್ನು ಬಿಟ್ಟುಹೋಗಲು ಮನಸ್ಸು ಬರಲಿಲ್ಲ. ಆದರೂ ಹೃದಯವನ್ನು ಕಲ್ಲು ಮಾಡಿ, ಅವರ ಶ್ರೇಯಸ್ಸಾರ್ಥನೆ ಮಾಡಿ, ಕುದುರೆಯನ್ನು ಏರಿ ಕುಳಿತಳು. ಅವಳನ್ನು ಬೀಬಿ ಅನುಕರಿಸಿ, ಅನುಸರಿಸಿದಳು.

ಮುಸ್ತಾನ್ ಖಾನ್ ಅವರಿಬ್ಬರಿಗೂ ಕಡೆಯ ಶುಭಾಶಯಗಳನ್ನು ಕೋರಿದ. ಅನಂತರ ಕುದುರೆಗಳ ಬೆನ್ನು ಚಪ್ಪರಿಸಿ, ಇಬ್ಬರನ್ನೂ ಸುರಕ್ಷಿತವಾದ ಸ್ಥಳಕ್ಕೆ ಮುಟ್ಟಿಸಲು ಹೇಳಿ ಅವರನ್ನು ಕಳುಹಿಸಿಕೊಟ್ಟ.

ಕುದುರೆಗಳು ವಾಯುವೇಗದಲ್ಲಿ ಓಡಿದುವು. ನಿಮಿಷಮಾತ್ರದಲ್ಲಿ ಅವು ಅಲ್ಲಿಂದ ಕಣ್ಮರೆಯಾದುವು. ಮುಸ್ತಾನ್ ಖಾನನಿಗೆ ಆಗ ಒಂದು ನಿಟ್ಟುಸಿರು ಹೊರಬಿತ್ತು. ಅದು ಸಮಾಧಾನದ ನಿಟ್ಟುಸಿರೋ, ಸಂತಾಪದ ನಿಟ್ಟುಸಿರೋ ಹೇಳುವವರಾರು?

ಮುಸ್ತಾನ್ ಖಾನ್ ಅಲ್ಲೇ ಏನನ್ನೋ ಯೋಚಿಸುತ್ತಾ ನಿಂತಿರುವಂತೆಯೇ ಕೊರಮನಾಯಕನು ಮೇನೆಯನ್ನು ತೆಗೆದುಕೊಂಡು ಅಲ್ಲಿಗೆ ಬಂದ

ಅವನು ಬಂದವನೇ ಮುಸ್ತಾನ್ ಖಾನನ ಭುಜವನ್ನು ತಟ್ಟಿ, ಅವನೊಡನೆ, ಮನೆಗೆ ಬಂದ. ಮನೆ ಗದ್ದಲರಹಿತವಾಗಿತ್ತು.

"ಎಲ್ಲಿ ನಿನ್ನ ಬೀಬಿ ಮತ್ತು ಕುಸುಮಾಜಿ?"

"ಒಳಗೆ ಎಲ್ಲೋ ಇರಬೇಕು, ತಾಳಿ ಹುಡುಕುತ್ತೇನೆ"

ಎಂದು ಹೇಳಿ ಒಳಗೋಣೆಗೆ ಬಂದವನು ತಲೆಯ ಮೇಲೆ ಕೈಹೊತ್ತು ಕುಳಿತುಬಿಟ್ಟ. ಎಷ್ಟು ಹೊತ್ತಾದರೂ ಅವನು ಹೊರಗೆ ಬರದೆ ಇರುವುದನ್ನು ನೋಡಿ, ಒಳಕೋಣೆಗೆ ಕೊರಮನಾಯಕ ಬಂದು ನೋಡುತ್ತಾನೆ. ಅಲ್ಲಿ ಮುಸ್ತಾನ್ ಖಾನ್ ತಲೆಯ ಮೇಲೆ ಕೈಹೊತ್ತು ಮಂಕಾಗಿ ಕುಳಿತುಬಿಟ್ಟ

ದ್ದನೆ. ಅವನು ಕುಳಿತ ಭಂಗಿ, ಅವನ ಕಳೆಗುಂದಿದ ಮುಖಗಳನ್ನು ಕಂಡೇ ೋರಮನಾಯಕನಿಗೆ ಕಳವಳಕ್ಕೆ ಕಾರಣವಾಯಿತು. ಅವನು ಉದ್ವೇಗ ಲ್ಲಿ ಕೇಳಿದ.

" ಕುಸುಮಾಜಿ ಎಲ್ಲಿ ? "

" ನನಗೆ ತಿಳಿಯದು."

" ಹಾಗೆಂದರೆ ?"

" ಇಲ್ಲಿಂದ ತಪ್ಪಿಸಿಕೊಂಡು ಎಲ್ಲಿಗೋ ಹೊರಟ್ಟುಹೋಗಿದ್ದಾರೆ."

" ಏನೆಂದಿ ? " ಕೊರಮನಾಯಕನ ತಲೆಯ ಮೇಲೆ ದೊಡ್ಡ ಬಂಡೆ ದ್ದಂತಾಯಿತು—ಅವನ ಮಾತು ಕೇಳಿ ಅವನು ಇದುವರೆಗೆ ಕಟ್ಟಿದ್ದ ಲ್ಲ ಆಶಾಗೋಪುರ ಪುಡಿಪುಡಿಯಾಯಿತು—ಮುಸ್ತಾನ್ ಖಾನನ ಒಂದು ಾತಿನಿಂದ. " ಏನಂದಿ ? ಏನಂದಿ ? " ಒಂದೇ ಸಮನೆ ಒದರಿದ.

" ಅವಳು ನಮ್ಮ ಒಳಸಂಚನ್ನು ಹೇಗೋ ಕಂಡುಕೊಂಡು ಇಲ್ಲಿದ್ದರೆ ನ್ನ ಪ್ರಾಣಕ್ಕೆ ಅಪಾಯವೆಂದು ಯಾವ ಮಾಯದಲ್ಲೋ ತಪ್ಪಿಸಿಕೊಂಡು ೋಗಿದ್ದಾಳೆ."

" ನಿನ್ನ ಹೆಂಡತಿ ಬೀಬಿ ಎಲ್ಲಿ ? "

" ಅವಳು ಮನೆಯಲ್ಲಿ ಇಲ್ಲ. ಬಹುಶಃ ನೆರೆಮನೆಗೆ ಹೋಗಿರ ಹುದು."

" ಸುಳ್ಳು ಬಗುಳುತ್ತಿದ್ದೀಯ ಬೇಕೂಫ್—"

" ನಿಜವನ್ನೇ ಹೇಳುತ್ತಿದ್ದೇನೆ, ಸರ್ಕಾರ್ ! "

" ಹಾಗಾದರೆ ನಿನ್ನ ಹೆಂಡತಿ ಮತ್ತು ಕುಸಮಾಜಿಯವರನ್ನು ಎಲ್ಲಿಗೆ ಳುಹಿಸಿವೆ ಬಗುಳು " ಎಂದು ಬಂದವನೇ ಅವನ ಮೇಲೆ ಬಿದ್ದು ಅವನ ಂಗಿಯನ್ನು ಹಿಡಿದುಕೊಂಡ.

" ಅವರಿಬ್ಬರೂ ತಪ್ಪಿಸಿಕೊಂಡು ಓಡಿಹೋಗಿದ್ದಾರೆ ಸರ್ಕಾರ್ "

" ನೀನೇಕೆ ಅವರನ್ನು ಓಡಿಹೋಗಲು ಬಿಟ್ಟೆ. ನೀನೂ ಅವರ ಂಚಿನಲ್ಲಿ ಸೇರಿರಬೇಕು. ಅಥವಾ ನನ್ನ ಕಣ್ಣಿಗೆ ಮಣ್ಣೆರಚಿ ನನ್ನನ್ನು ಅತ್ತ ಳುಹಿಸಿ, ನೀನು ಅವರನ್ನು ಇತ್ತ ಪುಸಲಾಯಿಸಿ ಕಳುಹಿಸಿರಬೇಕು....ನಿಜ ೇಳು. ಅವರನ್ನು ಎಲ್ಲಿಗೆ ಕಳುಹಿಸಿದ್ದಿ ?"

"ನಾನು ಅವರನ್ನು ಎಲ್ಲಿಗೂ ಕಳುಹಿಸಲಿಲ್ಲ—ಕಳುಹಿಸಿಕೊಡಲು ನಾನು ಯಾರು? ಎಲ್ಲವೂ ಅಲ್ಲಾನ ಇಚ್ಛೆ."

"ತಾಳು ಅಲ್ಲಾನ ಇಚ್ಛೆಯೋ ಅಥವಾ ನಿನ್ನ ಇಚ್ಛೆಯೋ ತೋರಿಸುತ್ತೇನೆ. ಒಳ್ಳೆಯ ಮಾತಿನಲ್ಲಿ ನೀನು ಬಾಯಿ ಬಿಡುವುದಿಲ್ಲ ಬೇಕೂಫ್. ಸರಿಯಾದ ಶಾಸ್ತಿ ಮಾಡಿದರೇನೇ ನಿನಗೆ ಬುದ್ಧಿ ಬರುವುದು"

—ಎಂದು ಅವನ ಮುಖವನ್ನು ಮುಷ್ಟಿಯಿಂದ ಗುದ್ದಿ ನೋಯಿಸಿದ. ಇದರಿಂದ ಅವನ ಮುಖವೆಲ್ಲ ಗಾಯವಾಗಿ, ಮೂಗಿನಿಂದ ರಕ್ತದ ಹೊಳೆ ಹರಿಯಿತು. ಅನಂತರ ಕೋಪೋದ್ರಿಕ್ತನಾದ ಕೊರಮನಾಯಕ ಒರೆಯಿಂದ ಕತ್ತಿಯನ್ನು ಸೆಳೆದು, "ನಾಯಿ. ಈಗ ಬಗುಳು ಅವರನ್ನು ಎಲ್ಲಿಗೆ ಕಳುಹಿಸಿದ್ದೀ?"

"ನಾನು........ಎಲ್ಲಿಗೂ............"

ಅವನ ಮಾತು ಮುಗಿಯುವುದೇ ತಡ. ಕೊರಮನಾಯಕನ ಕೈಲಿದ್ದ ಕತ್ತಿ ಮಸ್ತಾನ್ ಖಾನನ ತಲೆಯನ್ನು ಮುಂಡದಿಂದ ಬೇರ್ಪಡಿಸಿತ್ತು. ಮಸ್ತಾನ್ ಖಾನನು ಹೇಳಬೇಕೆಂದಿದ್ದ ಮಾತು ಅವನಲ್ಲೇ ಉಳಿಯಿತು. ಅವನ ದೇಹ ಮರದ ಕೊರಡಿನಂತೆ ನೆಲಕ್ಕೆ ಉರುಳಿತು. ಅಂತೂ ಮಸ್ತಾನ್ ಖಾನ್ ತನ್ನ ದೇಹವನ್ನೇ ಬಲಿಕೊಟ್ಟು ಕುಸುಮೆಯ ಪ್ರಾಣವನ್ನು ಉಳಿಸಿದ. ತಾನು ಕೊಟ್ಟಿದ್ದ ವಚನವನ್ನು ಪ್ರಾಣ ಹೋದರೂ ಪಾಲಿಸಿ, 'ಮಾತಿಗೆ ತಪ್ಪದ ಮಲ್ಲ'ನೆಂಬ ಬಿರುದಿಗೆ ಅರ್ಹನಾದ.

ಧನ್ಯ! ಮಸ್ತಾನ್ ಖಾನ್!

ಮಸ್ತಾನ್ ಖಾನನು ನೆಲಕ್ಕೆ ಉರುಳಿದ ಮೇಲೆ, ಕೊರಮನಾಯಕ ಕುಸುಮಾಜಿಗಾಗಿ ಮನೆಯನ್ನೆಲ್ಲ ಶೋಧಿಸಿದ್ದ.

ಅವಳು ತಪ್ಪಿಸಿಕೊಂಡು ಹೋಗಿರುವುದು ದೃಢಪಡಿಸಿಕೊಂಡು, ಅವಳನ್ನು ಬೆನ್ನಟ್ಟಿ ಹೋಗಲು ತನ್ನ ಸಂಗಡಿಗರನ್ನು ಕಳುಹಿಸಿ, ತಾನು ಬೇರೊಂದು ದಿಕ್ಕಿನಲ್ಲಿ ಹೊರಟ.

ದಿನಮಣಿಯು ಮಸ್ತಾನ್ ಖಾನನ ಬಲಿದಾನದ ಕಥೆಯನ್ನು ನೋಡಿ ಕೆರಳಿದನೋ ಎಂಬಂತೆ, ಪಶ್ಚಿಮಾಂಗಣವನ್ನೆಲ್ಲ ರಕ್ತಮಯಮಾಡಿ ಸಂತಪ್ತ ಹೃದಯದಿಂದ ಅಸ್ತಮಿಸಿದನು.

# ೭

ಕೊರಮನಾಯಕನ ಕೈಯಿಂದ ತಪ್ಪಿಸಿಕೊಂಡು ಬಂದ ಕುಸುಮಾಜಿ ಮತ್ತು ಬೀಬಿಯರು ಸುರಕ್ಷಿತವಾಗಿ ಮನೆಯನ್ನು ತಲುಪಿದರು. ಮನೆಯಲ್ಲಿ ಈ ಮೂರು ದಿನಗಳಿಂದ ಕುಸುಮಾಜಿಗಾಗಿ ಅನ್ನ ನೀರು ಬಿಟ್ಟು ತಿಪ್ಪಾಜಿ, ಗೋವಿಂದರಾಜ, ಮತ್ತು ಗುರುಗಳು ಕಾದಿದ್ದರು. ಕುಸುಮಾಜಿಯನ್ನು ನೋಡುತ್ತಲೇ ಅವರಿಗೆಲ್ಲ ಆದ ಸಂತೋಷದ ತೀವ್ರತೆಯಲ್ಲಿ ಮಾತು ಮರೆತುಹೋಯಿತು. ತಿಪ್ಪಾಜಿ ಹೋಗಿ ಮಗಳನ್ನು ತಬ್ಬಿಕೊಂಡು,

"ಕಡೆಗೂ ಸುರಕ್ಷಿತವಾಗಿ ಬಂದೆಯಾ ಮಗು" ಎಂದು ಬಡಬಡಿಸಿದಳು. ಅದೊಂದು ಕರುಣಾಜನಕ ನೋಟ.

ಕುಸುಮಾಜಿ ತಾಯಿಯ ಮಡಿಲಿನಲ್ಲಿ ತಲೆ ಇಟ್ಟುಕೊಂಡು ಎಳೆಯ ಮಗುವಿನಂತೆ ಬಿಕ್ಕಿಬಿಕ್ಕಿ ಅತ್ತು ತನ್ನ ಹೃದಯದ ಭಾರವನ್ನು ಹಗುರಮಾಡಿಕೊಂಡಳು. ಈ ಮೂರು ದಿನದಲ್ಲಿ ಅವಳು ಅನುಭವಿಸಿದ್ದ ಕಷ್ಟ-ಸಂಕಟಗಳ ನೋವು ಈ ಒಂದು ಕ್ಷಣದಲ್ಲಿ ಮತ್ತೆ ಕಾಣಿಸಿಕೊಂಡು, ಅವಳ ಹೃದಯವನ್ನು ಹಿಂಡಿತು. ಮರುಕ್ಷಣದಲ್ಲಿ ತಾನು ಎಲ್ಲ ಗಂಡಾಂತರಗಳನ್ನು ಹಾದು ಸುರಕ್ಷಿತವಾಗಿ ಮನೆಯನ್ನು ತಲುಪಿದುದನ್ನು ನೆನೆದು ಹೃದಯವನ್ನು ಹಿಗ್ಗಿತು. ಅವಳು ದುಃಖ ಸಂತೋಷಗಳ ಸಮ್ಮಿಶ್ರಭಾವಾತಿರೇಕವನ್ನು ತಡೆಯಲಾರದೆ ಒಂದೇ ಸಮನೆ ರೋದಿಸಿದಳು.

ತಾಯಿಯ ಪ್ರೀತಿಯ ಮೃದುವಚನಗಳು ಕುಸುಮಾಜಿಯ ಸಂತಪ್ತ ಹೃದಯವನ್ನು ಸಮಾಧಾನಪಡಿಸಿದುವು. ಗೋವಿಂದರಾಜನ ಸ್ನೇಹವಚನಗಳು ಅವಳಿಗೆ ಧೈರ್ಯವನ್ನು ತಂದುಕೊಟ್ಟುವು.

ಈಗ ಅವಳಿಗೆ ತನ್ನ ಇದುವರೆಗಿನ ಸಾಹಸದ ಕಥೆಯನ್ನು ಹೇಳುವ ಧೈರ್ಯ ಉಂಟಾಯಿತು.

ಎಲ್ಲ ಕಥೆಯನ್ನು ಆದ್ಯಂತವಾಗಿ ಹೇಳಿ ತನ್ನೊಡನೆ ಬಂದಿದ್ದ ಬೀಬಿಯನ್ನು ನೋಡಿ,

"ಈ ಮಹಾತಾಯಿ ಇಲ್ಲದೆ ಇದ್ದಿದ್ದರೆ ನಾನು ಎಂದೋ ಕಣ್ಣು ಮುಚ್ಚಿ

ಕೊಳ್ಳುತ್ತಿದ್ದೆ. ಇವಳು ಯಾವುದೋ ಜನ್ಮದ ತಾಯಿ. ನನ್ನನ್ನು ಹೆತ್ತ ಮಗಳಿಗೂ ಅತಿಶಯವಾಗಿ ನೋಡಿಕೊಂಡು, ಹೊಟ್ಟೆಯಲ್ಲಿ ಬಚ್ಚಿಟ್ಟುಕೊಂಡು ಪೊರೆದಳು." ಎಂದು ಅವಳ ಇತಿಹಾಸವನ್ನೆಲ್ಲ ಹೇಳಿ ಮಸ್ತಾನ್ ಖಾನನ ಗತಿ ಏನಾಯಿತೋ ತಿಳಿಯಲು ಚಡಪಡಿಸಿದಳು.

ಕುಸುಮಾಜಿಯ ಕೋರಿಕೆಯಂತೆ ಗೋವಿಂದರಾಜನ ಬಲಗೈಭಂಟನಾಗಿದ್ದ ಅನಾಮಿಕನೆಂಬ ಗೂಢಚಾರನು ಕೂಡಲೇ ಹೋಗಿ ಮಸ್ತಾನ್ ಖಾನನ ಎಲ್ಲಾ ವೃತ್ತಾಂತವನ್ನು ತಿಳಿದು ವರದಿಮಾಡಿದ. ಮಸ್ತಾನ್ ಖಾನನು ಕುಸುಮಾಜಿಗೆ ಕೊಟ್ಟಿದ್ದ ವಚನವನ್ನು ಪಾಲಿಸಲು ತನ್ನ ಪ್ರಾಣವನ್ನು ಬಲಿ ಕೊಟ್ಟನೆಂಬುದನ್ನು ಕೇಳಿ ಎಲ್ಲರೂ ಆಶ್ಚರ್ಯದಿಂದ ಬೆರಗಾದರು; ದುಃಖದಿಂದ ಮರುಗಿದರು; ಆ ಹುತಾತ್ಮನ ಉದಾತ್ತ ಗುಣಗಳಿಗಾಗಿ ಅವರು ಮಾರುಹೋದರು. ಅವನ ವಿಷಯವಾಗಿ ಅಭಿಮಾನಗೌರವಗಳು ಉಂಟಾದುವು.

ಬೀಬಿ ಗಂಡನ ಮರಣದ ಸುದ್ದಿಯನ್ನು ಕೇಳಿ ವಿಸ್ಮಯಪಡಲಿಲ್ಲ. ಅವಳು ಇದನ್ನು ಮೊದಲೇ ಊಹಿಸಿದ್ದಳು. ಕೊರಮನಾಯಕನು ಸಿಟ್ಟಿನ ಭರದಲ್ಲಿ ಮಸ್ತಾನ್ ಖಾನನ ತಲೆಯನ್ನು ನೆಲಕ್ಕೆ ಉರುಳಿಸದೆ ಇರುವುದಿಲ್ಲ. ಕುಸುಮಾಜಿಯ ತಲೆಯನ್ನು ಉಳಿಸಬೇಕಾದರೆ ತನ್ನ ತಲೆಯನ್ನು ಬಲಿಗೊಡದ ಹೊರತು ಗತ್ಯಂತರವಿಲ್ಲವೆಂದು ಅವನು ತನ್ನ ಪ್ರಿಯಪತ್ನಿಗೆ ಅಂತಿಮ ಸಂದೇಶವನ್ನು ಕೊಟ್ಟಿದ್ದ. ಈ ಬಲಿದಾನದಿಂದ ಅವನ ಆತ್ಮ ಉನ್ನತಿಗೇರಿತು. ಗಂಡನು ವೀರಮರಣವನ್ನು ಹೊಂದಿದನೆಂದು ಆ ಬಗ್ಗೆ ಬೀಬಿಯೂ ಹೆಚ್ಚು ಕಾಲ ರೋಧಿಸಲಿಲ್ಲ. ಆದರೂ ತನ್ನ ಗಂಡನ ಮರಣದೊಂದಿಗೆ ತನ್ನ ಮನೆಯೂ ನೆಲಸಮವಾದ ಸಂಗತಿಯನ್ನು ನೆನೆದಾಗ, ಅವಳಿಗೆ ನಿಜವಾಗಿ ಅಳು ಬಂದಿತು. ಅವಳನ್ನು ಸಮಾಧಾನಪಡಿಸಲು ಕುಸುಮಾಜಿಗೆ ಕಷ್ಟವಾಯಿತು.

"ನೀನು ಮುಸಲ್ಮಾನ ಬೀಬಿಯಲ್ಲ ತಾಯಿ—ನನ್ನ ಒಡಹುಟ್ಟಿದ ಸೋದರಿ. ಇನ್ನುಮೇಲೆ ನೀನು ನಮ್ಮ ಮನೆಯಲ್ಲಿಯೇ ಇದ್ದುಬಿಡು."

ಎಂದು ಸಲಹೆ ಮಾಡಿದಳು.

ಆದರೆ ಬೀಬಿಯು ಈ ಸಲಹೆಗೆ ಒಪ್ಪಲಿಲ್ಲ. ಅವಳಿಗೆ ಅವಳ ಏಕೈಕ ಬಂಧುವಾಗಿದ್ದ ವೃದ್ಧ ತಂದೆಯೊಬ್ಬನು ರಾಜಧಾನಿಯಲ್ಲಿ ಇದ್ದ. ಅವನು

ರಮನೆಯ ಕಾವಲುಗಾರನಾಗಿದ್ದ. ಹಿಂದೆ ಅವನು ಯುದ್ಧದಲ್ಲಿ ಸೈನಿಕ ಗಿದ್ದ. ಒಮ್ಮೆ ತುಂಬ ಗಾಯಗೊಂಡು, ಅವನು ಬರುವುದೇ ಕಠಿಣ ಯಿತು. ಆದರೆ ದೈವಸಹಾಯದಿಂದ ಉಳಿದುಕೊಂಡು, ಕಾಲಕ್ರಮದಲ್ಲಿ ಣಮುಖನಾದ. ಅಂದಿನಿಂದ, ಯುದ್ಧರಂಗದಲ್ಲಿ ನೇರ ಪಾತ್ರವಹಿಸ ಗದ ಅವನು ಸೆರಮನೆಯ ಕಾವಲುಗಾರನಾಗಿ ನೇಮಿತನಾಗಿದ್ದ. ಬೀಬಿ ನ್ನ ಗಂಡನು ತೀರಿಕೊಂಡ ಮೇಲೆ ತನ್ನ ತಂದೆಯ ಜತೆಯಲ್ಲಿ ಇರಲು ನಿರ್ಧರಿ ದ್ದಳು. ತಂದೆಯ ವೃದ್ಧಾಪ್ಯದಲ್ಲಿ ಅವನಿಗೆ ದಿಕ್ಕಾಗಿ ತನ್ನ ಮುಂದಿನ ನಕನ್ನು ಕಳೆದುಳಿದ ಮಗನ ರಕ್ಷಣೆಯಲ್ಲಿ ಕಳೆಯಲು ತೀರ್ಮಾನಿಸಿದ್ದಳು. ಗಾಗಿ ಅವಳು ಕುಸುಮೆಯ ಮನೆಯಲ್ಲಿ ಇರಲು ಇಷ್ಟಪಡಲಿಲ್ಲ.

ಈ ನಿರ್ಧಾರವನ್ನು ಕೇಳಿ ಕುಸುಮೆ—ತಿಪ್ಪಾಜಿಯರು, ತಮಗಾಗಿ ನ್ನ ಸರ್ವಸ್ವವನ್ನೇ ಬಲಿಕೊಟ್ಟ ಅವಳಿಗೆ ಅನೇಕ ಬಗೆಯ ಒಡವೆವಸ್ತು ನ್ನು ಬಹುಮಾನವಾಗಿ ಕೊಟ್ಟರು. ಇದನ್ನು ಬೀಬಿ ತೆಗೆದುಕೊಳ್ಳಲಿಲ್ಲ— ನ್ನ ನೆನಪು ಚಿರಂತರವಾಗಿ ಇರಲು ಇದನ್ನು ತೆಗೆದುಕೊಳ್ಳಲೇಬೇಕೆಂದು ಸುಮಾಜಿ ಬಲವಂತಪಡಿಸಿದ ಮೇಲೆ ಅವಳು ಅದನ್ನು ತೆಗೆದುಕೊಂಡಳು.

ಗೋವಿಂದರಾಜನೂ ಬೀಬಿಯ ಮಗನ ಸಲುವಾಗಿ, ಅವನ ಮುಂದಿನ ವನಕ್ಕಾಗಿ ಸಹಾಯಮಾಡಿ, ಬೀಬಿಯ ಋಣಮುಕ್ತನಾಗಲು ಬಯಸಿದ. ನರೆ ಬೀಬಿಯ ಋಣವನ್ನು ಈ ಜನ್ಮದಲ್ಲಿ ತೀರಿಸಬಲ್ಲೆನೆ?—ಎಂದು ಸುಮೆ ತನ್ನನ್ನೇ ಸಾವಿರ ಬಾರಿ ಕೇಳಿಕೊಂಡಿದ್ದಳು.

ಕುಸುಮಾಜಿ ಈ ಬಾರಿ ದೇಹ ಮನಸ್ಸುಗಳಿಗಾದ ಅತಿಯಾದ ಶ್ರಮ ಕಲಿಕೆ ಇಂದಾಗಿ, ಬಹಳ ಕಾಲ ಹಾಸಿಗೆಯನ್ನು ಹಿಡಿದು ಮಲಗಿದಳು. ವಳ ಮೃದು ಹೃದಯವನ್ನು ವಿಜಯಭದ್ರನ ಪೈಶಾಚಿಕ ವರ್ತನೆಯು ಲುಗಿಸಿತ್ತು. ಅವನ ರಾಕ್ಷಸೀ ಸಂಗಡಿಗರ ಕೈಯ್ಯಲ್ಲಿ ಸಿಕ್ಕಿ ಅದು ಜರ್ಜರಿತ ಗಿತ್ತು. ಈ ಹೊಡೆತದಿಂದ ಅವಳು ಚೇತರಿಸಿಕೊಳ್ಳಬೇಕಾದರೆ ಅನೇಕ ನಗಳು ಹಿಡಿದುವು.

ಕುಸುಮಾಜಿ ಈ ವಿಶ್ರಾಂತಿಯ ಕಾಲದಲ್ಲಿ ತನ್ನ ಜೀವನದ ಆಗು ಹೋಗುಗಳನ್ನು ಕುರಿತು ಬಹುವಾಗಿ ಚಿಂತಿಸುತ್ತಿದ್ದಳು. ಅವಳಿಗೆ ತನಗಾಗಿ ಜಯಭದ್ರ ಮತ್ತು ಗೋವಿಂದರಾಜರ ನಡುವೆ ಇಷ್ಟೆಲ್ಲ ಹೋರಾಟ

ನಡೆಯಬೇಕೆ ? ತನ್ನ ಕಾರಣದಿಂದ ಅವರಿಬ್ಬರು ಆಜನ್ಮ ಶತ್ರುಗಳು ಆಗ ಬೇಕೆ? ಸಾಮ್ರಾಜ್ಯದ ಏಳಿಗೆಗಾಗಿ ಶ್ರಮಿಸಬಲ್ಲ ಮಹಾಬಲಶಾಲಿಗಳು ಈಗ ತನ್ನ ಕಾರಣದಿಂದ, ಪರಸ್ಪರ ದ್ವೇಷಸಾಧನೆಯಲ್ಲಿ ತಮ್ಮ ಸರ್ವಶಕ್ತಿ ಸಮಯ ಗಳನ್ನು ಹಾಳುಹಾಡುತ್ತಿರುವವಲ್ಲಾ ಎನ್ನುವ ವ್ಯಥೆ ಅನೇಕ ಬಾರಿ ಬರು ತ್ತಿತ್ತು. ತಾನು ರಾಜಧಾನಿಯಲ್ಲಿರುವ ತನಕ ಗೋವಿಂದರಾಜನಿಗೆ ತನ್ನಿಂದ ಮನಶ್ಶಾಂತಿ ಇಲ್ಲ. ಯಾವ ಗಳಿಗೆಯಲ್ಲಿ ವಿಜಯಭದ್ರನು ತನ್ನ ಮೇಲೆ ಬೀಳುವನೋ ಎಂದು ಸದಾ ಎಚ್ಚತ್ತುಕೊಂಡಿರುವುದರಲ್ಲೇ ಅವನ ಮೋಸಕ್ಕೆ ಪ್ರತಿ ಮೋಸ ಬಗೆಯುವುದರಲ್ಲೇ ಅವನ ಅಮೂಲ್ಯವಾದ ವೇಳೆ ಕಳೆಯು ತ್ತಿದೆ ಎಂದು ಕುಸುಮಾಜಿಯ ಭಾವನೆ. ತನಗಾಗಿ ಮೋಹಪರವಶನಾಗಿ ಅನೇಕ ನಿರಪರಾಧಿಗಳನ್ನು ಕೊಲೆಗೈದು, ತನ್ನ ಮೇಲೆ ವಿಜಯವನ್ನು ಸಾರ ಬಯಸುವ ಶ್ರೀಮಂತ ರಾಜ ಬಂಧು ವಿಜಯಭದ್ರ ? ಇವರಿಬ್ಬರ ಪಣವೆಣ್ಣು ತಾನು! ತನಗಾಗಿ ಇವರಿಬ್ಬರ ಬಲಪ್ರದರ್ಶನ! ಇವೆಲ್ಲವೂ ಎಂತಹ ಅರ್ಥ ವಿಲ್ಲದ ಹುಚ್ಚಾಟ ಎಂದೆನಿಸಿತು ಕುಸುಮೆಗೆ. ತನ್ನಂತಹ ಒಂದು ಸಾಮಾನ್ಯ ಹೆಣ್ಣಿನ ಸಲುವಾಗಿ ವಿಜಯಭದ್ರನಂತಹ ವ್ಯಕ್ತಿ ಇಷ್ಟು ಅವಿವೇಕಿಯಾಗಿ ವರ್ತಿಸುವುದೆಂದರೆ ಇವನನ್ನು ಏನೆಂದು ಕರೆಯಬೇಕು? ತಾನು ಇರುವ ತನಕ ಎರಡು ಅಗ್ನಿಪರ್ವತಗಳ ನಡುವೆ ವಾಸಿಸುವಂತೆ. ತನ್ನಿಂದ ಇವರಿಬ್ಬರ ಶಾಂತಿ, ಸುಖಕ್ಕೆ ಭಂಗ. ಆದುದರಿಂದ, ಸಾಮ್ರಾಜ್ಯದ ನೆಮ್ಮದಿಯ ಸಲು ವಾಗಿ, ಅವರಿಬ್ಬರಲ್ಲಿ ಮೈತ್ರಿ ಏರ್ಪಡುವಂತೆ ಆದರೆ ತಾನು ಯಾವ ತ್ಯಾಗ ಬೇಕಾದರೂ ಮಾಡಲು ಸಿದ್ಧಳಾಗಿದ್ದೇನೆ – ಎಂದುಕೊಂಡಳು. ಆದರೆ ಕುಸು ಮಾಜಿಯ ಈ ಎಲ್ಲ ಆಸೆ ಕೇವಲ ಗಗನ ಕುಸುಮವೇ ಸರಿ. ಮೊದಲಿನಿಂದ ಬದ್ಧ ದ್ವೇಷಿಗಳಾದ ಗೋವಿಂದರಾಜ, ವಿಜಯಭದ್ರರ ನಡುವೆ ಕುಸುಮಾಜಿ ಮೈತ್ರಿ ಯನ್ನು ಏರ್ಪಡಿಸಲು ಸಾಧ್ಯವೇ ಇರಲಿಲ್ಲ. ಅವಳು ಮಾಡುವ ತ್ಯಾಗ ವ್ಯರ್ಥ ವಾಗುತ್ತಿತ್ತೇ ಹೊರತು ಸಾರ್ಥಕವಾಗುತ್ತಿರಲಿಲ್ಲ. ಇದನ್ನು ಮುಗ್ಧಮನಸ್ಸಿನ ಕುಸುಮೆ ಹೇಗೆತಾನೇ ಅರಿಯಬಲ್ಲಳು ?

ಕುಸುಮೆ ಇಂತಹ ನೂರು ಸಮಸ್ಯೆಗಳನ್ನು ಮನಸ್ಸಿನಲ್ಲಿ ವಿಚಾರಮಾಡಿ ಯಾವ ನಿರ್ಣಯಕ್ಕೂ ಬರದೆ ವೃಥಾ ದಣಿದಳೇ ಹೊರತು ಬೇರೆ ಯಾವ ಪ್ರಯೋಜನವಾಗಲಿಲ್ಲ. ದಿನದಿನಕ್ಕೆ ಕುಸುಮೆ ಯಾವುದೋ ವಿಷಯವನ್ನು

ಲೆಗೆ ಹಚ್ಚಿಕೊಂಡು ಕೊರಗುತ್ತಿರುವುದನ್ನೇ ನೋಡಿ, ಅದೇನೆಂದು ಎಷ್ಟು ಳಿಯಲೆತ್ನಿಸಿದರೂ ಸಾಧ್ಯವಾಗದೆ, ಕಡೆಗೆ ತಿಪ್ಪಾಜಿ, ಕುಸುಮೆಯ ಕೊರ ನ್ನು ತನ್ನದೇ ಆದ ರೀತಿಯಲ್ಲಿ ಅರ್ಥಮಾಡಿಕೊಂಡಳು. ಕುಸುಮೆಗೆ ಜಯಭದ್ರನ ಹೆದರಿಕೆಯಿಂದ ನಿದ್ರೆ ಹತ್ತಲಿಲ್ಲವೆಂದೂ, ಮನಸ್ಸಿಗೆ ಸಮಾ ಾನವಿಲ್ಲವೆಂದೂ ಭಾವಿಸಿದಳು. ಈ ಭಯವನ್ನು ಅವಳಿಂದ ದೂರಮಾಡಿ ರೆ ಅವಳು ಮೊದಲಿನಂತೆ ಆಗುವಳೆಂದೂ ಭಾವಿಸಿದಳು. ವಿಜಯಭದ್ರನ ದರಿಕೆಯನ್ನು ದೂರ ಮಾಡಲು ಇದ್ದ ಒಂದೇ ಮಾರ್ಗ—ಮಹಾಪ್ರಭುಗಳ ವಿಗೆ ವಿಜಯಭದ್ರನ ಕಿರುಕುಳವನ್ನು ಹಾಕಿ, ಅವರಿಂದಾದ ವಿಶೇಷ ಬಗೆಯ ಕ್ಷಣೆಯನ್ನು ಪಡೆಯುವುದು. ಈ ಬಗ್ಗೆ ಹಿಂದೆ ಪ್ರಯತ್ನಿಸಲಾಗಿತ್ತು. ದರೆ ಕುಸುಮಾಜಿಯ ಅಪಹರಣ ನಡುವೆ ತಲೆಹಾಕಿದ್ದರಿಂದ ಮಹಾರಾಣಿ ರುಮಲಾದೇವಿಯೊಂದಿಗೆ ನಡೆಯಬೇಕಾಗಿದ್ದ ಭೇಟಿ ನಡೆದಿರಲಿಲ್ಲ. ಈಗ ರತಾಚಾರ್ಯರು ತಿಪ್ಪಾಜಿಯರು ಮಹಾರಾಣಿ ತಿರುಮಲಾದೇವಿಯನ್ನು ಬಗ್ಗೆ ನೋಡಿಬರಲು ನಿಶ್ಚಯಿಸಿದರು.

ಮಹಾರಾಣಿ ತಿರುಮಲಾದೇವಿ ಗುರುಗಳನ್ನೂ ಬಾಲ್ಯದ ಗೆಳತಿ ತಿಪ್ಪಾಜಿ ಯನ್ನೂ ವಿಶ್ವಾಸದಿಂದ ಬರಮಾಡಿಕೊಂಡು, ಅವರ ಕ್ಷೇಮಸಮಾಚಾರಗಳನ್ನು ಚಾರಿಸಿಕೊಂಡಳು. ಅನಂತರ ಬರುವುದಾಗಿ ಹೇಳಿ—ಮತ್ತೆ ಬರದೆ ಂತ ಕಾರಣವನ್ನು ವಿಚಾರಿಸಿದಳು.

ಭರತಾಚಾರ್ಯರು ಕುಸುಮಾಜಿಯ ವೃತ್ತಾಂತವನ್ನೆಲ್ಲಾ ಸವಿಸ್ತಾರ ಾಗಿ ಹೇಳಿದರು. ನಡುನಡುವೆ ತಿಪ್ಪಾಜಿಯೂ ತನ್ನ ಹೇಳಿಕೆಯಿಂದ ಗುರು ಳು ಹೇಳಿದುದನ್ನು ಪುಷ್ಟೀಕರಿಸಿದಳು.

ಮೊಟ್ಟಮೊದಲನೆಯ ಬಾರಿ ಮಹಾರಾಣಿ ತಿರುಮಲಾದೇವಿಗೆ ತಿಪ್ಪಾಜಿ ಮತ್ತು ಕುಸುಮೆಯರು ರಾಜಧಾನಿಯಲ್ಲಿ ಬಂದ ಲಾಗಾಯಿತು ಒಂದು ದಿನ ಾದರೂ ಸುಖವಾಗಿ ಕಳೆದಿಲ್ಲವೆಂದು ತಿಳಿದು ತುಂಬ ವ್ಯಥೆಯಾಯಿತು. ಾನು ತನ್ನ ಗೆಳತಿಯರನ್ನು ದೂರದ ದೇಶದಿಂದ ಕರೆಸಿ, ಅವರನ್ನು ಇಲ್ಲಿ ೊಂದರೆಗೆ ಒಳಪಡಿಸಿದಂತೆ ಆಯಿತಲ್ಲಾ ಎಂದು ತುಂಬ ಮರುಗಿದಳು. ಜಯಭದ್ರನು ಇಷ್ಟು ಕೆಟ್ಟ ಮನುಷ್ಯನೆಂದು ಅವಳೆಂದೂ ತಿಳಿದಿರಲಿಲ್ಲ. ವನ ದೆಸೆಯಿಂದ ಕುಸುಮೆ ಇಷ್ಟೆಲ್ಲ ಕಷ್ಟಪಡಬೇಕಾಯಿತಲ್ಲ! ವಿನಾಕಾರಣ

ವಾಗಿ ನರಳಬೇಕಾಯಿತಲ್ಲ! ಎಂಬುದಾಗಿ ಮಹಾರಾಣಿಯ ಹೃದಯ ಪರಿತಪಿಸಿತು. ಇದನ್ನು ಇಷ್ಟಕ್ಕೇ ಬಿಡಬಾರದು. ವಿಜಯಭದ್ರ ರಾಜ ಕುಟುಂಬಕ್ಕೆ ಸೇರಿದ್ದರೇನಂತೆ, ಅವನು ಸಾಮಾನ್ಯ ಪ್ರಜೆಗಳ ಸುಖಕ್ಕೆ ಕಂಟಕವಾಗಿದ್ದಾನೆ. ಅಂತಹ ದುಷ್ಟರನ್ನು ಸರಿಯಾದ ರೀತಿಯಲ್ಲಿ ಶಿಕ್ಷಿಸದೆ ಹೋದರೆ, ಅವರ ಉಪಟಳ ಹೆಚ್ಚುತ್ತದೆ. ಇದರಿಂದ ಪ್ರಜಾವರ್ಗಕ್ಕೆ ತುಂಬಾ ತೊಂದರೆಯಾಗುತ್ತದೆ—ಎಂದುಕೊಂಡು ಮಹಾರಾಣಿ ಈ ಬಗ್ಗೆ ಮಹಾಸ್ವಾಮಿಯವರಲ್ಲಿ ಮಾತನಾಡಿ, ವಿಜಯಭದ್ರನಿಗೆ ತಕ್ಕ ಶಾಸ್ತಿ ಮಾಡಿಸುವುದಾಗಿ ಆಶ್ವಾಸನವಿತ್ತಳು. ಇನ್ನುಮೇಲೆ ನೆಮ್ಮದಿಯಾಗಿರಲು ಕೋರಿ, ಗೆಳತಿಯನ್ನೂ ಗುರುಗಳನ್ನೂ, ಉಚಿತ ರೀತಿಯಲ್ಲಿ ಸತ್ಕರಿಸಿ, ಬೀಳ್ಕೊಟ್ಟಳು.

ತಿಪ್ಪಾಜಿಗೆ ಆಶ್ವಾಸನವಿತ್ತಿದ್ದಂತೆ ಮಹಾರಾಣಿ ತಿರುಮಲಾದೇವಿ ಸಾಮ್ರಾಟ್ ಕೃಷ್ಣದೇವರಾಯನು ಅಂತಃಪುರಕ್ಕೆ ಒಮ್ಮೆ ಬಂದಿದ್ದಾಗ್ಗೆ ಕುಸುಮಾಜಿಯ ವೃತ್ತಾಂತವನ್ನು ಪ್ರಭುಗಳ ಗಮನಕ್ಕೆ ತಂದಳು.

"ಪ್ರಭುಗಳು ಅನ್ಯಥಾ ಭಾವಿಸಬಾರದು. ಧರ್ಮಸಾಮ್ರಾಜ್ಯದ ರಾಜಧಾನಿಯಾದ ವಿದ್ಯಾನಗರದಲ್ಲಿ ಧರ್ಮಾತ್ಮರೂ, ದೈವಭಕ್ತರೂ ತಮ್ಮ ಪಾಡಿಗೆ ತಾವು ನೆಮ್ಮದಿಯಿಂದ ಬದುಕಲು ಸಾಧ್ಯವಿಲ್ಲವಾಗಿದೆ. ಪ್ರಭುಗಳು ಪರಾಮರ್ಶಿಸಬೇಕು" ಎಂದು ಹೇಳಿ ತಾನು ತಿಪ್ಪಾಜಿಯಿಂದ ಕೇಳಿದ ಎಲ್ಲ ಸಂಗತಿಯನ್ನು ಒಂದನ್ನೂ ಬಿಡದೆ ವಿವರಿಸಿದಳು. ಕಡೆಯದಾಗಿ ಹೇಳಿದಳು.

"ತಿಪ್ಪಾಜಿ ನನ್ನ ಬಾಲ್ಯ ಗೆಳತಿ ಎಂದು ಅವಳ ಪರ ನಾನು ವಾದಿಸುತ್ತಿಲ್ಲ. ನಮ್ಮ ಸಾಮ್ರಾಜ್ಯದಲ್ಲಿ ಇನ್ನೊಬ್ಬರ ಗೊಡವೆಗೆ ಹೋಗದೆ, ತಮ್ಮ ಪಾಡಿಗೆ ತಾವು ನೆಮ್ಮದಿಯಿಂದ ಇರುವವರನ್ನು ವೃಥಾ ಹಿಂಸಿಸಿ ತೊಂದರೆ ಪಡಿಸುವವರನ್ನು ಅವರು ಯಾರೇ ಆಗಿರಲಿ–ಅವರನ್ನು ದಂಡಿಸಿ ಶಿಕ್ಷೆ ವಿಧಿಸುವುದು ಧರ್ಮವಾಗಿದೆ. ಈ ಪ್ರಸಂಗದಲ್ಲಿ ವಿಜಯಭದ್ರರು ನಿಜವಾಗಿಯೂ ಅಪರಾಧಿಗಳೇ ಆಗಿದ್ದರೆ, ಅವರನ್ನು ಸಾಮಾನ್ಯ ಪ್ರಜೆಯಂತೆಯೇ ನ್ಯಾಯಾಲಯದಲ್ಲಿ ವಿಚಾರಣೆಗೆ ಗುರಿಪಡಿಸಿ, ದಂಡಿಸಬೇಕಾದುದು ಧರ್ಮಾವತಾರಕ ಕರ್ತವ್ಯ."

ಈ ಮಾತು ಕೇಳಿ ಕೃಷ್ಣದೇವರಾಯನು ನಗುತ್ತ ಹೇಳಿದ.

"ಆಗಲಿ ಮಹಾರಾಣಿ, ವಿಜಯಭದ್ರರು ನಿಜವಾಗಿಯೂ ಆರೋಪಿ ಳೆಂದು ಸಿದ್ಧವಾದರೆ, ಅವರು ರಾಜಕುಟುಂಬಕ್ಕೆ ಸೇರಿದ್ದರೇನಂತೆ, ಅವರನ್ನು ಾಮಾನ್ಯ ಪ್ರಜೆಯನ್ನು ವಿಚಾರಿಸುವಂತೆ ವಿಚಾರಿಸಿ, ಆರೋಪ ಸಿದ್ಧಪಟ್ಟರೆ ಂಡಿತ ಶಿಕ್ಷಿಸೋಣ." ಎಂದು ಭರವಸೆಯನ್ನೂ ದಯಪಾಲಿಸಿದ ಕೃಷ್ಣ ೇವರಾಯ.

ಇದರಿಂದ ತಿರುಮಲಾದೇವಿಯ ಮನಸ್ಸಿಗೆ ಎಷ್ಟೋ ಸಮಾಧಾನ ಾಯಿತು.

ಆದರೆ ಕೆಲವು ದಿನಗಳು ಕಳೆದರೂ ಮಹಾರಾಜರು ಈ ವಿಷಯದಲ್ಲಿ ಯಾವ ವಿಚಾರಣೆಯನ್ನೂ ಏರ್ಪಡಿಸಲಿಲ್ಲ. ಈ ಮಹಾಸ್ವಾಮಿಯವರ ರ್ಲಕ್ಷವನ್ನು ಕಂಡು ತಿರುಮಲಾದೇವಿಗೆ ನಿಜವಾಗಿಯೂ ಅಚ್ಚರಿ ಉಂಟಾ ಯಿತು. ಅನಂತರ ಗೊತ್ತಾಯಿತು. ಮಹಾಪ್ರಭುಗಳೇಕೆ ಈ ವಿಷಯದಲ್ಲಿ ದಾಸಕ್ತಿ ವಹಿಸಿಬಿಟ್ಟರೆಂದು.

ಕೃಷ್ಣದೇವರಾಯನು ಅದೇ ದಿನ ಚಿನ್ನಾದೇವಿಯ ಅಂತಃಪುರದಲ್ಲಿ ಿನ್ನಾದೇವಿಯೊಡನೆ, ಯಾವುದೋ ಮಾತಿಗೆ ಮಾತು ಬಂದು ವಿಜಯಭದ್ರ ುಸುಮಾಜಿಯ ವೃತ್ತಾಂತವನ್ನು ತಿಳಿಸಿದನಂತೆ. ಈ ವೃತ್ತಾಂತ ಕೇಳಿ, ಿನ್ನಾದೇವಿ ಸಹಜವಾಗಿಯೇ ಸಹೋದರನ ಪಕ್ಷವಹಿಸಿ ಮಾತನಾಡಿದಳಂತೆ. ವಳು ವಿಜಯಭದ್ರನಂತಹ ರಾಜಕುಟುಂಬಕ್ಕೆ ಸೇರಿದ ವ್ಯಕ್ತಿ ಸಾಮಾನ್ಯ ೇಶ್ಯೆಯ ಪುತ್ರಿಗಾಗಿ, ಇಷ್ಟೆಲ್ಲ ಸಾಹಸಪಡುವನೆನ್ನುವ ಮಾತು ಕೇವಲ ಾಸ್ಯಾಸ್ಪದವೆಂದೂ, ಇದರಲ್ಲಿ ವೃಥಾ ಮಿಥ್ಯಾರೋಪಣೆಯೇ ಇರುವುದೆಂದೂ ವೆಲ್ಲವೂ ಸವತಿ ಮಾತ್ಸರ್ಯದ ಆರೋಪಣೆ ಎಂದೂ ಚಿನ್ನಾದೇವಿ ವಾದಿಸಿದ ಂತೆ. ಅದೇ ವೇಳೆಗೆ ಅಲ್ಲಿಗೆ ವಿಜಯಭದ್ರನೂ ಬಂದನು. ಚಿನ್ನಾದೇವಿ ್ರಭುಗಳ ಸಮ್ಮುಖದಲ್ಲೇ ಈ ವೃತ್ತಾಂತದ ಬಗ್ಗೆ ಅವನನ್ನು ವಿಚಾರಿಸಿದಳು. ಜಯಭದ್ರನು ತನ್ನ ವಿರುದ್ಧ ಹೂಡಿದ ಎಲ್ಲ ಆರೋಪಣೆಗಳನ್ನು ಕೇಳಿ ಕ್ಕುಬಿಟ್ಟು—"ಒಳ್ಳೆಯ ಸ್ವಾರಸ್ಯವಾಗಿ ಕಥೆ ಕಟ್ಟಿದ್ದಾರೆ ಯಾರೋ" ಎಂದು ುಪೇಕ್ಷಿಸಿಬಿಟ್ಟನಂತೆ. ಅನಂತರ, ತಾನು ಕುಸುಮಾಜಿಯನ್ನು ಸರಿಯಾಗಿ ೋಡಿಯೇ ಇಲ್ಲವೆಂದೂ, ಅವಳ ವಿಷಯಗಳೊಂದೂ ತನಗೆ ಗೊತ್ತಿಲ್ಲ ಂದೂ, ಅಂತಹವಳನ್ನು ತಾನು ಬಯಸಿದೆನೆನ್ನುವುದು ಕಲ್ಪನೆಯ ಪರಮಾ

ವಧಿಯೆಂದೂ—ತಿಳಿಸಿದ. ಅಲ್ಲದೆ ಈ ಬಗ್ಗೆ ಪ್ರಭುಗಳಿಗೆ ಸಂಶಯ ಉಂಟಾದರೆ ಕೂಡಲೇ ಕುಸುಮಾಜಿಯನ್ನು ಕರೆಸಿ ವಿಚಾರಣೆ ಮಾಡಬೇಕೆಂದೂ, ತನ್ನ ಮೇಲೆ ಆರೋಪಣೆ ಸಿದ್ಧಪಟ್ಟರೆ ತಾನು ಸಂತೋಷವಾಗಿ ಶಿಕ್ಷೆ ಅನುಭವಿಸುವುದಾಗಿಯೂ ತಿಳಿಸಿದನು.

ಈ ಎಲ್ಲ ಹೇಳಿಕೆಯನ್ನು ಕೇಳಿದ ಕೃಷ್ಣದೇವರಾಯನು ತಿರುಮಲಾದೇವಿಯು ಹೇಳಿದ ಕಥೆಯಲ್ಲಿ ಹುರುಳಿಲ್ಲವೆಂದು—ಆ ಬಗ್ಗೆ ಹೆಚ್ಚಿನ ಆಸಕ್ತಿ ವಹಿಸದೆ ಸುಮ್ಮನಾದನು.

ಹೀಗಾಗಿ ವಿಜಯಭದ್ರನ ವಿಚಾರಣೆಯ ಮಾತು ದೂರ ಉಳಿಯಿತು.

ಈ ಸುದ್ದಿ ಅಲ್ಲಿ ಬಿದ್ದು ಇಲ್ಲಿ ಬಿದ್ದು ತಿರುಮಲಾದೇವಿಯ ಕಿವಿಗೂ ಬಿತ್ತು. ಅವಳಿಗೆ ಇದನ್ನು ಕೇಳಿ ತುಂಬ ವ್ಯಥೆಯಾಯಿತು. ಧರ್ಮಾವತಾರರಾದ ಪ್ರಭುಗಳೇ ತಮ್ಮ ಮೋಹದ ಮಡದಿಯ ಮಾತಿಗೆ ಮರುಳಾಗಿ ತಮ್ಮ ರಾಜಧರ್ಮವನ್ನು ಮರೆಯುತ್ತಾ ಬರುತ್ತಿದ್ದಾರಲ್ಲ ಎಂದು ತುಂಬ ಪರಿತಪಿಸಿದಳು. ತಿಪ್ಪಾಜಿ ಬಂದು ಕೇಳಿದರೆ ಅವಳಿಗೆ ತಾನು ಏನು ಉತ್ತರ ಕೊಡಬೇಕೆಂದು ತಿಳಿಯದೆ ತುಂಬ ವ್ಯಾಕುಲಚಿತ್ತಳಾದಳು.

ತಿಪ್ಪಾಜಿ ಒಂದು ದಿನ ಮಹಾರಾಣಿಯನ್ನು ಭೇಟಿಮಾಡಲು ಬಂದಳು. ಮಹಾರಾಣಿಗೆ ತಿಪ್ಪಾಜಿಗೆ ತಲೆ ಕೊಟ್ಟು ಮಾತನಾಡಲು ಸಂಕೋಚವಾಯಿತು. ಇದನ್ನು ಅರಿತ ತಿಪ್ಪಾಜಿ ಹೇಳಿದಳು.

"ಮಹಾರಾಣಿಯವರು ಪರಾಂಬರಿಸಬೇಕು. ನಮ್ಮ ಅಹವಾಲನ್ನು ಮಹಾಪ್ರಭುಗಳು ಸುಳ್ಳೆಂದು ತಿರಸ್ಕರಿಸಿಬಿಟ್ಟರೆಂದು ನಮಗೆ ವರ್ತಮಾನ ಬಂತು. ಈ ಬಗ್ಗೆ ನಾವು ವೃಥಾ ವ್ಯಥೆಪಡುವ ಕಾರಣವಿಲ್ಲ. ನಮ್ಮ ಪಾಲಿನ ರಾಜಧಾನಿಯ ಋಣ ಇಂದಿಗೇ ತೀರಿತೆಂದು ಕಾಣುತ್ತೆ. ನಮಗೆ ನಮ್ಮ ಊರಿಗೆ ಹಿಂತಿರುಗಲು ಅಪ್ಪಣೆಯನ್ನು ದಯಪಾಲಿಸಬೇಕು. ನಮ್ಮಿಂದ ತಮಗೇಕೆ ಇಲ್ಲದ ಚಿಂತೆಗೆ ಕಾರಣವಾಗಬೇಕು, ಪ್ರಭುಗಳಿಗೂ ತಮಗೂ ಏಕೆ ವೃಥಾ ಮನಸ್ತಾಪ ಉಂಟಾಗಬೇಕು? ದಯವಿಟ್ಟು ನಮಗೆ ಹೊರಡಲು ಅಪ್ಪಣೆ ಕೊಡಿ."

—ಎಂದಳು ತಿಪ್ಪಾಜಿ ನಮ್ರ ಭಾವದಲ್ಲಿ.

ತಿರುಮಲಾದೇವಿಗೆ ತನ್ನ ಮಾತು ಪ್ರಭುಗಳಲ್ಲಿ ನಡೆಯುವುದಿಲ್ಲವೆಂದು

ತಿಳಿದಿತ್ತು. ತನ್ನ ಗೆಳತಿಯರು ರಾಜಧಾನಿಯಲ್ಲಿ ಇದ್ದಷ್ಟು ದಿನವೂ ಅವರಿಗೆ ವಿಜಯಭದ್ರನ ಕಾಟ ತಪ್ಪದೆಂದು ತಿಳಿದು, ತಮ್ಮ ನಿಸ್ಸಹಾಯವನ್ನು ನೆನೆದು ದುಃಖಪಟ್ಟು ನಿರ್ವಾಹವಿಲ್ಲದೆ ತಿಪ್ಪಾಜಿಗೆ ಹೊರಡಲು ಅನುಮತಿಕೊಟ್ಟಳು. ಊರಿಗೆ ಹಿಂದಿರುಗಿದ ಗೆಳತಿಗೆ ಉಡುಗರೆಯನ್ನು ಕೊಡಲು ಪ್ರಯತ್ನಿಸಿ ಮಹಾರಾಣಿಯವರು ವಿಫಲರಾದರು. ತಿಪ್ಪಾಜಿ ಮಹಾರಾಣಿಯವರ ಪ್ರೀತಿ ವಿಶ್ವಾಸಗಳ ಮುಂದೆ ಎಲ್ಲ ಉಡುಗರೆ ತೃಣಸಮಾನವೆಂದು ಅವುಗಳನ್ನು ಮುಟ್ಟಲಿಲ್ಲ. ಕಡೆಗೆ ಆಗ್ರಹ ಪಡಿಸಿದ ಮೇಲೆ ಒಂದೆರಡು ಒಡವೆವಸ್ತು ಗಳನ್ನು ಅವಳ ನೆನಪಾಗಿ ತೆಗೆದುಕೊಳ್ಳಬೇಕಾಯಿತು.

ಹೀಗೆ ತಿಪ್ಪಾಜಿ ರಾಜಧಾನಿಯನ್ನು ಬಿಡಲು ನಿಶ್ಚಯಿಸಿದಳು. ಅವಳು ಈ ನಿರ್ಧಾರಕ್ಕೆ ಬರಲು ಕುಸುಮಾಜಿಯೇ ಕಾರಣ. ತಾಯಿಮಕ್ಕಳಿಬ್ಬರಿಗೂ ಕೃಷ್ಣದೇವರಾಯನು ತಮ್ಮ ವಿಷಯದಲ್ಲಿ ವ್ಯಕ್ತಪಡಿಸಿದ್ದ ಅಭಿಪ್ರಾಯ ಕೇಳಿದ ಮೇಲೆ ಒಂದು ನಿಮಿಷವೂ ಈ ನಗರದಲ್ಲಿ ಇರಲು ಅವರಿಗೆ ಮನಸ್ಸಾಗಲಿಲ್ಲ. ತಮ್ಮ ಹೇಳಿಕೆಯನ್ನು ವಿಚಾರಮಾಡಿ, ಯಾವುದು ಸತ್ಯ, ಯಾವುದು ಮಿಥ್ಯವೆಂದು ನಿರ್ಧರಿಸದೆ, ಕೇವಲ ಮೋಹದ ರಾಣಿಯ ಮಾತಿಗೆ ಬೆರಗಾಗಿ, ಪ್ರಭುಗಳು ರಾಜಧರ್ಮವನ್ನು ಮರೆತು—ದುಷ್ಟ ಶಿಕ್ಷಣ ಶಿಷ್ಟಪರಿಪಾಲನಾ ಕಾರ್ಯವನ್ನು ನಿರ್ಲಕ್ಷಿಸಿಬಿಟ್ಟ ಮೇಲೆ ಇನ್ನು ದೇಶದಲ್ಲಿ ನ್ಯಾಯ, ಸತ್ಯ, ಧರ್ಮಗಳಿಗೆ ಬೆಲೆ ಎಲ್ಲಿ? ಇಂತಹ ಪ್ರಭುವಿನ ಆಳ್ವಿಕೆಯಲ್ಲಿ ಇರುವುದಕ್ಕಿಂತ ಕಾಡಿನಲ್ಲಿ ಇರುವುದು ಲೇಸೆಂದು ಅವರಿಗೆ ಅನಿಸಿತು. ಮೊಟ್ಟಮೊದಲನೆಯ ಬಾರಿ ಅವರಿಗೆ ಕೃಷ್ಣದೇವರಾಯನ ಮೇಲೆ ಅಸಮಾಧಾನ, ತಿರಸ್ಕಾರಗಳು ಉಂಟಾಗಿದ್ದುವು. ರಾಜನಾದವನು ಪ್ರಜೆಗಳ ಕಷ್ಟಸುಖಗಳನ್ನು ವಿಚಾರಿಸದೆ, ಹೋದರೆ ಇನ್ನು ಯಾರುತಾನೇ ವಿಚಾರಿಸಿಕೊಳ್ಳಬೇಕು? ದುಷ್ಟರನ್ನು ಪೋಷಿಸುವುದೇ ರಾಜಧರ್ಮವಾದರೆ ಇನ್ನು ಶಿಷ್ಟಪರಿಪಾಲನೆಗೆ ದಾರಿ ಎಲ್ಲಿ? ಅಶಕ್ತರೂ, ದುರ್ಬಲರೂ, ದುಷ್ಟರ ಕೈಯಿಂದ ನರಳವುದೇ ಧರ್ಮವಾದರೆ ನ್ಯಾಯಧರ್ಮಗಳು ಕಾಡಿಗೆ ಹೋಗದೆ ಇನ್ನೇನು? ಇಂತಹ ಅನಾಯಕ, ಅವ್ಯವಸ್ಥೆಗೊಳಪಟ್ಟ ರಾಜ್ಯದಲ್ಲಿ ಇರುವುದು ಯಾವಾಗಲೂ ಅಪಾಯಕರ! ನ್ಯಾಯದ ಸ್ಥಾನದಲ್ಲಿ ಅನ್ಯಾಯ, ಧರ್ಮದ ಸ್ಥಳದಲ್ಲಿ ಅಧರ್ಮ ಕುಳಿತು ಆಡಳಿತ ನಡಸುವಾಗ ಪ್ರಜಾಹಿತ ರಕ್ಷಣೆಯಾಗಲೀ ನೆಮ್ಮದಿ

ಯಾಗಲೀ ಖಂಡಿತ ಸಾಧ್ಯವಿಲ್ಲ! ಇಲ್ಲಿ ಇದ್ದು ಅನೇಕ ತೊಂದರೆಗಳನ್ನು ಅನುಭವಿಸುವುದಕ್ಕಿಂತ ತಮ್ಮ ಊರಾದ ಶ್ರೀರಂಗಪಟ್ಟಣವನ್ನು ಸೇರಿಕೊಳ್ಳು ವುದು ಉತ್ತಮವೆಂದು ಅವರಿಗೆ ಅನಿಸಿತು. ಅಂತಲೇ ತಾಯಿ ಮಕ್ಕ ಳಿಬ್ಬರೂ ಶ್ರೀರಂಗಪಟ್ಟಣಕ್ಕೆ ಹೊರಡಲು ನಿಶ್ಚಯಿಸಿದರು.

ಶ್ರೀರಂಗಪಟ್ಟಣಕ್ಕೆ ಹೊರಡುವುದನ್ನೇನೋ ನಿರ್ಧರಿಸಲಾಯಿತು. ಆದರೆ ಈ ಸುದ್ದಿಯನ್ನು ಗೋವಿಂದರಾಜನಿಗೆ ಹೇಗೆ ತಿಳಿಸಬೇಕೆಂಬುದು ತಾಯಿಮಕ್ಕಳಿಬ್ಬರಿಗೂ ತಿಳಿಯಲಿಲ್ಲ. ಈ ಸುದ್ದಿಯನ್ನು ಕೇಳಿ ಗೋವಿಂದ ರಾಜನ ಮೇಲೆ ವಿಲಕ್ಷಣ ಪರಿಣಾಮ ಉಂಟಾಗುವುದನ್ನು ಅವರಿಬ್ಬರೂ ಬಲ್ಲರು. ಗೋವಿಂದರಾಜನಿಗೆ ಅವರಿಬ್ಬರ ಬಗ್ಗೆ ಅಷ್ಟೊಂದು ಪ್ರೀತಿ ವಿಶ್ವಾಸಗಳಿತ್ತು. ದೈವ ಗೋವಿಂದರಾಜನಿಗೂ ಅವರಿಗೂ ವಿಚಿತ್ರ ಬಾಂಧವ್ಯ ವನ್ನು ಕಲ್ಪಿಸಿತ್ತು. ಈ ಬಾಂಧವ್ಯದ ಬಂಧನವನ್ನು ಕಡಿಮೊಗೆದು, ಇಲ್ಲಿಂದ ಹೊರಟುಹೋಗಲು ಕುಸುಮೆ ನಿರ್ಧರಿಸಿದ್ದಳು. ತನಗಾಗಿ ಅಲ್ಲ. ಗೋವಿಂದರಾಜನ ಅಭ್ಯುದಯಕ್ಕಾಗಿ, ಅವನ ಕಲ್ಯಾಣಕ್ಕಾಗಿ ಅವನನ್ನು ತೊರೆಯಲು ನಿರ್ಧರಿಸಿದ್ದಳು.

ಕುಸುಮೆ ಬಹಳ ಕಾಲ ಆಲೋಚನೆಮಾಡಿ ಕೊನೆಗೆ ಮಾಡಿದ್ದ ದೃಢ ನಿಶ್ಚಯ ಇದು. ತಾನು ಇಲ್ಲಿ ಇರುವ ತನಕ, ತಾನು ಗೋವಿಂದರಾಜನ ಶ್ರೇಯಸ್ಸಿಗೆ, ಕೀರ್ತಿಗೆ ಕಾಲ್ತೊಡಕು. ತನ್ನಲ್ಲಿ ಮೋಹಗೊಂಡಿರುವ ಅವ ನಿಂದ ಉಚ್ಚ ದರ್ಜೆಯ ದೇಶಸೇವೆ ನಡೆಯದೆಂದು ಅವಳು ಮನಗಂಡಿದ್ದಳು. ಸದಾ ತನ್ನ ಬಗೆಗೆ ಚಿಂತಿಸುತ್ತಾ ಕೂಡುವ ಗೋವಿಂದರಾಜನು ತನ್ನ ಕರ್ತವ್ಯ ದಲ್ಲಿ ಚ್ಯುತನಾಗುತ್ತಿರುವನೆಂದು ಎಷ್ಟೋ ಬಾರಿ ಕುಸುಮೆ ಅರಿತಿದ್ದಳು. ತನ್ನ ಪ್ರೀತಿಯೇ ಗೋವಿಂದರಾಜನ ಕೀರ್ತಿಗೆ ರಾಹುವಾದೀತೆಂದು ಅವಳು ಮೊದಲು ತಿಳಿದಿರಲಿಲ್ಲ. ಅವನನ್ನು ಪ್ರೀತಿಸಿ, ವಿಜಯಭದ್ರನ ಹಗೆತನ ವನ್ನು ಗೋವಿಂದರಾಜನಿಗೆ ಸಂಪಾದಿಸಿಕೊಟ್ಟೆ. ಅವರಿಬ್ಬರೂ ಸ್ನೇಹದಿಂದ ಬಾಳಲು ಸಾಧ್ಯವೇ ಇಲ್ಲವೆನ್ನುವಂತೆ ಅವರ ನಡುವೆ ದ್ವೇಷದ ದಾವಾನಲ ವನ್ನೇ ಎಬ್ಬಿಸಿದೆ. ತಾನು ಇಲ್ಲಿ ಇದ್ದರೆ ಅವರಿಬ್ಬರ ದ್ವೇಷ ಹಗೆತನಗಳು ಹೊಸಹೊಸ ರೂಪ ತಾಳಿ ಸಾಮ್ರಾಜ್ಯ ಶಾಂತಿಗೆ ಭಂಗ ತರುವುದು ಖಂಡಿತ. ಹೆಣ್ಣಿನಿಂದ ಹಿಂದೆ ಅನೇಕ ಸಾಮ್ರಾಜ್ಯಗಳೇ ನಾಶವಾದಂತೆ, ತನ್ನಿಂದ

ಮಹಾ ಸಾಮ್ರಾಜ್ಯಕ್ಕೆ ಹಾನಿ ತಟ್ಟಬಾರದು—ಎಂದುಕೊಂಡು ತಾನು ನಗರದಿಂದ ಹೊರಟುಹೋಗಲು ನಿರ್ಧರಿಸಿದ್ದಳು ಕುಸುಮೆ.

ಕುಸುಮಾಜಿ ಹೊರಡುವ ಮುನ್ನ ಗೋವಿಂದರಾಜನನ್ನು ಏಕಾಂತದಲ್ಲಿ ಡು ತಾವು ಶ್ರೀರಂಗಪಟ್ಟಣಕ್ಕೆ ಹೊರಡಲು ನಿಶ್ಚಯಿಸಿರುವ ಸಂಗತಿಯನ್ನೂ ಸಿದಳು. ಈ ಸುದ್ದಿಯನ್ನು ಕೇಳಿ ಗೋವಿಂದರಾಜನಿಗೆ ಸಿಡಿಲು ಬಡಿ ತೆ ಆಯಿತು. ಅವನು ಇದನ್ನು ನಂಬದವನಂತೆ, ಮಿಕಮಿಕನೆ ಕುಸುಮೆ ನ್ನೇ ನೋಡುತ್ತ ಕುಳಿತ.

ಕುಸುಮೆ ತಮ್ಮ ನಿರ್ಧಾರಕ್ಕೆ ಕಾರಣವಾದ ಎಲ್ಲ ಸಂಗತಿಯನ್ನೂ ಲಂಕಶವಾಗಿ ತಿಳಿಸಿದಳು. ಅದನ್ನೆಲ್ಲ ಕೇಳಿ ತಿಳಿದ ಮೇಲೆ ಗೋವಿಂದ ಜ ನೋವಿನ ಧ್ವನಿಯಲ್ಲಿ ಕೇಳಿದ.

"ನೀವು ಇಲ್ಲಿಂದ ಹೊರಡುವ ಮಾತು ವಿನಾ ಬೇರೆ ದಾರಿಯೇ ್ಲವೆ?"

"ಅಂದರೆ?"

"ನಿಮಗೆ ಇಲ್ಲಿ ಯಾವ ಹೆದರಿಕೆ ಇಲ್ಲದಂತೆ ನಾನು ನೋಡಿಕೊಂಡರೆ ಗದೆ?"

"ಈಗ ನಾವು ಹೊರಡುತ್ತಿರುವುದು ವಿಜಯಭದ್ರನಿಗೆ ಹೆದರಿಕೊಂಡು ್ಲ."

"ಹಾಗಾದರೆ ನೀವೇಕೆ ಇಲ್ಲಿಂದ ಹೊರಡಬೇಕು?"

"ನಾವು ಇಲ್ಲಿಯೇ ಇದ್ದುಬಿಡಲು ಬಂದಿಲ್ಲವಲ್ಲ! ನಾವು ಇಲ್ಲಿಗೆ ಾತ್ರಿಕರಾಗಿ ಬಂದೆವು. ನಮ್ಮ ಕೆಲಸ ತೀರಿತು—ಮುಂದೆ ನಮ್ಮ ರಿಗೆ ಪ್ರಯಾಣ ಬೆಳಸಬೇಕಾಗಿದೆ."

"ಮೊದಲು ಇಲ್ಲೇ ಇದ್ದುಬಿಡುವ ಆಶಯ ವ್ಯಕ್ತಪಡಿಸಿದ್ದಿಯಲ್ಲ!"

"ಹೌದು ವ್ಯಕ್ತಪಡಿಸಿದ್ದೆ. ಆದರೆ ಈಗ ನಿರ್ಧಾರವನ್ನು ಬದಲಾಯಿ ಸ್ದೇನೆ. ಇಲ್ಲಿ ನಾನು ಇರುವುದರಿಂದ ಹಾನಿಯೇ ಹೊರತು ನನ್ನಿಂದ ಾರಿಗೂ ಕ್ಷೇಮವಾಗುವುದಿಲ್ಲ."

"ನಿನ್ನ ಮಾತು ನನಗೆ ಅರ್ಥವಾಗುವುದಿಲ್ಲ."

"ನಾನು ಇಲ್ಲಿ ಇರುವುದರಿಂದ ಎಲ್ಲರಿಗೂ ತೊಂದರೆ."

“ಎಲ್ಲರಿಗೂ ಅಂದರೆ ಯಾರಿಗೆ ತೊಂದರೆ ಎಂದು ಸ್ಪಷ್ಟವಾಗಿ ಹೇಳ ಬಾರದೆ ?”

“ಮುಖ್ಯವಾಗಿ ನಿಮಗೆ.”

“ನೀನು ಇರುವುದರಿಂದ ನನಗೆ ತೊಂದರೆ ಎಂದು ನಾನೆಂದಾದರೂ ಹೇಳಿದ್ದೇನೆಯೆ ?”

“ಇಲ್ಲ....”

“ಹಾಗಾದರೆ ಮತ್ತೇಕೆ ಇಲ್ಲದ ಕಲ್ಪನೆಯನ್ನು ತಲೆಯಲ್ಲಿ ತುಂಬಿ ಕೊಂಡು ವೃಥಾ ಶಂಕೆಗೆ ಒಳಗಾಗಿದ್ದಿ ?”

“ರಾಜ, ನೀವು ಎಂದೂ ನನ್ನಿಂದ ತೊಂದರೆಯಾಯಿತೆಂದು ಹೇಳಿಲ್ಲ— ಹೇಳುವುದೂ ಇಲ್ಲ. ನಾ ಬಲ್ಲೆ. ಆದರೆ ನನ್ನ ಮಾತನ್ನು ಕೊಂಚ ಮನ ಸ್ಸಿಟ್ಟು ಕೇಳಿ. ನನಗೂ ನಿಮ್ಮನ್ನು ಬಿಟ್ಟು ಹೋಗಲು ಖಂಡಿತವಾಗಿಯೂ ಇಷ್ಟವಿಲ್ಲ!”

“ಹಾಗಾದರೆ ಹೊರಡುವ ಮಾತು ಏಕೆ ?”

“ನಾನು ಹೊರಡಲೇಬೇಕಾಗಿದೆ.”

“ಏಕೆ ?”

“ನಾನು ನಿಮ್ಮನ್ನು ಹೃತ್ಪೂರ್ವಕವಾಗಿ ಪ್ರೀತಿಸುತ್ತೇನೆ—ಅದಕ್ಕಾಗಿ.”

“ನಿನ್ನ ಮಾತು ಅರ್ಥವಾಗಲಿಲ್ಲ.”

“ನಾನು ನಿಮ್ಮನ್ನು ಪ್ರಾಣಕ್ಕಿಂತ ಅತಿಶಯವಾಗಿ ಪ್ರೀತಿಸುತ್ತೇನೆ. ಆದುದರಿಂದ ನಿಮ್ಮ ಉದ್ಧಾರಕ್ಕಾಗಿ, ನಿಮ್ಮ ಅಭ್ಯುದಯಕ್ಕಾಗಿ ನಾನು ನಿಮ್ಮನ್ನು ತೊರೆದುಹೋಗುತ್ತಿದ್ದೇನೆ. ನನ್ನ ಮಾತನ್ನು ಆಲಿಸಿರಿ. ನಾನು ಇಲ್ಲಿ ಇರುವ ತನಕ ನೀವು ಕೆಂಡವನ್ನು ಸೆರಗಿಗೆ ಕಟ್ಟಿಕೊಂಡಂತೆ, ನಿಮ್ಮ ಎಲ್ಲ ಕೆಲಸಕಾರ್ಯಗಳಲ್ಲಿ ನಾನು ವಿಘ್ನಕಾರಿಣಿ.”

“ನೀನು ಎಂದಿಗೂ ವಿಘ್ನಕಾರಿಣಿಯಲ್ಲ, ನನ್ನ ಸ್ಫೂರ್ತಿದೇವಿ. ನನ್ನ ಎಲ್ಲ ಕೆಲಸಕಾರ್ಯಗಳಿಗೆ ನೀನೇ ಚೈತನ್ಯದಾಯಿನಿ....ಕೇವಲ ಹೃದಯ ಶೂನ್ಯವಾಗಿದ್ದ ವಿಗ್ರಹದಲ್ಲಿ ಹೊಸ ಶಕ್ತಿಯ ಸಂಚಾರ ಮಾಡಿರುವೆ. ನನಗೆ ಈಗ ಹೊಸ ಕಣ್ಣು ಬಂದಿದೆ. ಹೊಸ ಚೇತನ ಬಂದಿದೆ. ಹೀಗಿರುವಲ್ಲಿ ನೀನು ನನ್ನ ಕೆಲಸಕಾರ್ಯಗಳಿಗೆ ವಿಘ್ನಕಾರಿಣಿಯೆ ?”

" ನಾನು ಪಾಪಿ. ನಿಮಗೆ ದ್ರೋಹ ಬಗೆಯುತ್ತಿದ್ದೇನೆ ರಾಜ; ನಿಮ್ಮ
ಲ್ಲ ಹೊಂಗನಸಿಗೆ ನಾನೇ ಕಾರಣಳಾಗಿ, ಈಗ ಪಕ್ಕನೆ ಜಾರಿಕೊಂಡು,
ಮ್ಮ ಹೊಂಗನಸನ್ನೆಲ್ಲ ಮಣ್ಣುಗೂಡಿಸುತ್ತಿದ್ದೇನೆ. ನಾನು ಪಾಪಿ, ನನ್ನನ್ನು
ಮಿಸಿ ರಾಜ " ಎಂದು ಬಡಬಡಿಸಿದಳು.

" ಹಾಗೆ ಹೇಳಬೇಡ ಚಿನ್ನ. ನೀನು ಪಾಪಿಯಲ್ಲ—ಇನ್ನೂ ಪಾಪಿ
ನು. ನನ್ನನ್ನು ನಂಬಿದ ನಿನಗೆ ಒಂದು ದಿನವಾದರೂ ಸುಖವನ್ನು
ಡಲು ಸಮರ್ಥನಾಗದ ಪಾಪಿ ನಾನು. ಇಲ್ಲಿರುವಷ್ಟು ದಿನವೂ ನೀನು
ಂದಲ್ಲ ಒಂದು ಕಾರಣದಿಂದ ಪರಿತಪಿಸುವಂತೆ ಆಯಿತು. ಇಷ್ಟೆಲ್ಲ ಏಕೆ?
ೀನು ನನ್ನನ್ನು, ನನ್ನಂಥ ಹೇಡಿಯನ್ನು ಪ್ರೀತಿಸಿದೆ. ನಿನ್ನ ಪ್ರೇಮಕ್ಕೆ
ನು ತಕ್ಕವನಲ್ಲ....ನಾನು ಪಾಪಿ "

—ಎಂದು ಉದ್ವೇಗದಿಂದ ಹೇಳಿದ.

" ಹಾಗೆ ಹೇಳಬೇಡ ನನ್ನ ದೊರೆ, ನೀವು ಹೇಡಿಯಲ್ಲ. ಪುರುಷ
ಂಹ. ಅಂತಲೇ ನನ್ನ ಪುಟ್ಟ ಹೃದಯದಲ್ಲಿ ನಿಮಗೆ ಎಡೆ ದೊರೆತುದು.
ಮ್ಮ ಬಾಯಲ್ಲಿ ಹೇಡಿ ಎನ್ನುವ ಮಾತು ಬರಬಾರದು. ನಾನು ಹೇಡಿ....
ಮ್ಮನ್ನು ಬಿಟ್ಟು ಹೋಗಲಾರದೆ ವ್ಯಥೆ ಪಡುವ ಹೇಡಿ....ನಾನು ದೌರ್ಭಾಗ್ಯೆ!
ಮ್ಮಂಥ ದೊರೆಯನ್ನು ಬಿಟ್ಟು ಹೋಗಬೇಕಾದ ನಾನು ನಿಜವಾಗಿಯೂ
ೌರ್ಭಾಗ್ಯೆ !....

....ನಾನೇನು ಮಾಡಲಿ ರಾಜ, ನಿಮ್ಮನ್ನು ಬಿಟ್ಟು ಹೊರಡುವುದೆಂದರೆ
ನ್ನ ಹೃದಯವನ್ನು ಛಿದ್ರಗೊಳಿಸಿ ಹೊರಟಂತೆ! ನನ್ನ ಎಲ್ಲ ಹೊಂಗನ
ನ್ನೂ ಧ್ವಂಸಮಾಡಿಹೋದಂತೆ. ಆದರೆ ನಾನೇನು ಮಾಡಲಿ? ನಾನು
ೋಗಲೇಬೇಕಾಗಿದೆ—ನನಗಾಗಿ ಅಲ್ಲ—ನಿಮಗಾಗಿ, ನಿಮ್ಮ ಶ್ರೇಯಸ್ಸಿ
ಗಿ."

" ನೀನು ಹೊರಡುವುದಕ್ಕೂ ನನ್ನ ಶ್ರೇಯಸ್ಸಿಗೂ ಏನು ಸಂಬಂಧ? "

" ಸಂಬಂಧವಿದೆ ರಾಜ, ನಾನು ನಿಮ್ಮವಳಾಗಿ ಇರುವ ತನಕ ಒಂದು
ಣವೆಣ್ಣು ಎಂಬುದನ್ನು ಮರೆಯಬೇಡಿ. ಅಂದರೆ ನನಗಾಗಿ ನೀವು
ಜಯಭದ್ರನ ವೈರವನ್ನು ಎದುರಿಸಲೇಬೇಕು. ಇದು ಶತಸ್ಸಿದ್ಧ.
ಮ್ಮಿಬ್ಬರ ಹೋರಾಟದಲ್ಲಿ ನಿಮ್ಮ ಅಮೂಲ್ಯವಾದ ವೇಳೆ, ಶಕ್ತಿ ಸಾಮರ್ಥ್ಯ

ಗಳು ವ್ಯರ್ಥವಾದರೆ, ಇದರಿಂದ ರಾಷ್ಟ್ರ ಸಂಘಟನೆಗೆ ಹಾನಿಯಲ್ಲವೆ? ನಿಮ್ಮಿಂದ—ಸಾಮ್ರಾಜ್ಯಕ್ಕೆ ಮಹೋನ್ನತ ಸೇವೆ ಸಲ್ಲಬೇಕಾಗಿದೆ. ನೀವು ಸಾಮ್ರಾಜ್ಯದ ಭವ್ಯಮಂದಿರದ ಒಂದು ಬಲವಾದ ಕಂಭ. ನಿಮ್ಮ ಮೇಲಿನ ಜವಾಬ್ದಾರಿ ಬಹು ಹೆಚ್ಚಿನದಿದೆ. ನನ್ನ ಮೇಲಿನ ಮೋಹ ಮಮತೆಗಳಲ್ಲಿ ಮನಸ್ಸು ಕೊಟ್ಟರೆ ನಿಮ್ಮಿಂದ ಶ್ರೇಷ್ಠ ಬಗೆಯ ಸೇವೆ ಸಾಧ್ಯವಾಗದು. ನನ್ನನ್ನು ನೀವು ರಾಷ್ಟ್ರದ ಹಿತಕ್ಕಾಗಿ ಮರೆಯಬೇಕು. ಅಂತಲೇ ನಾನು ರಾಷ್ಟ್ರದ ಹಿತಕ್ಕಾಗಿ ನಿಮ್ಮನ್ನು ಮರೆತು ನನ್ನ ಪ್ರೀತಿಯನ್ನು ಬಲಿಗೊಡುತ್ತಿದ್ದೇನೆ. ನೀವು ಬದುಕಿ ಹಿರಿಯ ವ್ಯಕ್ತಿಗಳಾಗಿ ಬಾಳಬೇಕು! ಆಚಂದ್ರಾರ್ಕ ಕೀರ್ತಿಯನ್ನು ಪಡೆಯಬೇಕೆಂದೇ ನನ್ನ ಪ್ರೇಮವನ್ನು ಬಲಿಗೊಡುತ್ತಿದ್ದೇನೆ! ನೀವು ಬದುಕಿ ಬಾಳಿ ಅನೇಕರಿಗೆ ಮಾರ್ಗದರ್ಶಿಯಾಗಬೇಕೆಂದೇ ನಾನು ನಿಮ್ಮನ್ನು ನನ್ನ ಮೋಹಪಂಜರದಿಂದ ಬಿಡುಗಡೆ ಮಾಡಿ, ಹೋಗುತ್ತಿದ್ದೇನೆ ....ನನ್ನ ತಪ್ಪನ್ನು ಮನ್ನಿಸಿ ದೊರೆ!"

—ಎಂದಳು ದೈನ್ಯದಿಂದ ಕುಸುಮ.

"ಚಿನ್ನಾ, ನೀನು ನನ್ನನ್ನು ಬಿಟ್ಟು ಹೊರಟರೆ ನಾನು ಜಗತ್ತಿನ ಪಾಲಿಗೆ ಇದ್ದೂ ಇಲ್ಲದ ವ್ಯಕ್ತಿ. ನಾನು ಬದುಕಿ ಸತ್ತಂತೆ. ನೀನಿಲ್ಲದ ಮೇಲೆ ನನ್ನ ವ್ಯಕ್ತಿತ್ವಕ್ಕೆ ಬೆಲೆಯಿಲ್ಲ. ನೀನು ಇಲ್ಲದ ಮೇಲೆ ನಾನು ಯಾರಿಗಾಗಿ ಬಾಳಬೇಕು, ಬದುಕಬೇಕು? ಮಹತ್ಕಾರ್ಯ ಸಾಧಿಸಬೇಕು? ನೀನಿದ್ದರೆ ಮಹತ್ಕಾರ್ಯ ಸಾಧನೆ—ಕೀರ್ತಿ—ಶ್ರೇಯಸ್ಸು—ಉದ್ಧಾರ! ನೀನು ಇಲ್ಲವೆ ನನಗೆ ಇವುಗಳೊಂದೂ ಬೇಡ."

"ರಾಜ, ನೀವು ನನ್ನ ವಿಷಯದಲ್ಲಿ ಎಷ್ಟು ಮೋಹಪರವಶರಾಗಿರುವರೆಂಬುದಕ್ಕೆ ನಿಮ್ಮ ಮಾತೇ ಸಾಕ್ಷಿ. ಒಂದು ಸಾಮಾನ್ಯ ಹೆಣ್ಣಿಗಾಗಿ ನೀವು ಇಷ್ಟು ಮೋಹಗೊಂಡಿದ್ದರೆ ನಿಮ್ಮಿಂದ ಯಾವ ದೊಡ್ಡ ಕೆಲಸ ಸಾಧಿಸುತ್ತದೆ? ಅತಿಶಯವಾದ ಮೋಹ ಕೇಡೇ ಆದೀತು. ಅದು ಮಹತ್ವಾಕಾಂಕ್ಷೆಯನ್ನು ಹಾಳುಮಾಡುತ್ತದೆ. ಅಂತಲೇ ನಮ್ಮಿಬ್ಬರಿಗೆ ವಿರಹ ಅನಿವಾರ್ಯ! ನನ್ನ ಮೇಲೆ ನಿಮಗೆ ನಿಜವಾದ ಪ್ರೀತಿ ಇರುವುದೇ ಇಲ್ಲವೇ ಎಂಬುದನ್ನು ನಿರ್ಣಯಿಸಲು ಈ ವಿರಹ. ಅಂತಲೇ ನಾನು ನಿಮ್ಮಿಂದ ದೂರ ಹೋಗುತ್ತಿರುವುದು. ನನ್ನನ್ನು ನೀವು ಹೃದಯಶೂನ್ಯೆ ಎಂದು

ಕರೆದರೂ ಸರಿ. ನೀವು ಮಹೋನ್ನತ ವ್ಯಕ್ತಿಯಾಗಿ ಬಾಳಬೇಕು, ಮಹತ್ಕಾರ್ಯ ಸಾಧಿಸಿ, ಇತಿಹಾಸದಲ್ಲಿ ನಿಮ್ಮ ಕೀರ್ತಿ ಅಮರವಾಗಿ ಉಳಿಯಬೇಕು. ಇದೇ ನನ್ನ ಪ್ರೇಮ ಬಲಿಗೆ ನಾನು ಅಪೇಕ್ಷಿಸುವ ಪ್ರತಿಫಲ !"

ಈ ಮಾತು ಕೇಳಿ ಗೋವಿಂದರಾಜ ಮೂಕನಾಗಿ ಕುಳಿತ. ಅವನಿಗೆ ಏನು ಹೇಳಬೇಕೆಂಬುದು ತೋಚಲಿಲ್ಲ. ಅವನ ಕಣ್ಣೆದುರಿನಲ್ಲಿ ಅವನು ಕಟ್ಟಿದ್ದ ಅರಮನೆ ರಟ್ಟಿನ ಮನೆಯಂತೆ ನೆಲಸಮವಾಗಿತ್ತು. ಅವನಿಗೆ ಹೃದಯದ ಆವೇಗವನ್ನು ತಡೆಯಲಾರದೆ, ದುಃಖ ಉಮ್ಮಳಿಸಿ ಬಂತು. ಎಳೆಯ ಮಗುವಿನಂತೆ ಕುಸುಮೆಯನ್ನು ತಬ್ಬಿಕೊಂಡು ಅವಳ ಎದೆಯಲ್ಲಿ ಮುಖವಿಟ್ಟು ಅತ್ತುಬಿಟ್ಟ.

ಕುಸುಮೆ ಮಾತನಾಡದೆ, ಹಾಗೆಯೇ ಕುಳಿತು ಗೋವಿಂದರಾಜನ ತಲೆಯನ್ನು ಪ್ರೀತಿಯಿಂದ ನೇವರಿಸುತ್ತಿದ್ದಳು. ಅವಳಿಗೂ ದುಃಖದ ಆವೇಗವನ್ನು ತಡೆಯಲಾರದೆ ಹೃದಯ ತತ್ತರಿಸುತ್ತಿತ್ತು. ಗೋವಿಂದರಾಜನಂತೆ ತಾನೂ ಅತ್ತರೆ ಅವನನ್ನು ಸಮಾಧಾನ ಪಡಿಸುವವರು ಯಾರು ? ಎಂದು ಅಳದೇ ಕುಳಿತಳು.

ಕೊಂಚ ಹೊತ್ತಿಗೆ ಗೋವಿಂದರಾಜನ ದುಃಖ ಶಮನವಾಯಿತು. ಈಗ ಕುಸುಮೆಯ ಸರದಿ. ಅವಳು ಮನಸ್ಸು ತೃಪ್ತಿಯಾಗುವ ತನಕ ಗೋವಿಂದರಾಜನ ಭುಜದ ಮೇಲೆ ತಲೆ ಇಟ್ಟು ಅತ್ತಳು. 'ಇದೇ ನಿಮ್ಮ ಕಡೆಯ ರಾತ್ರಿ. ನಾಳೆಯ ದಿನ ಬೆಳಗಾದ ಕೂಡಲೇ ನೀನು ಗೋವಿಂದರಾಜನನ್ನು ಅಗಲುತ್ತೀಯೆ' ಎಂದು ಅವಳ ಹೃದಯ ಸಾರಿ ಹೇಳುತ್ತಿತ್ತು. ಇರುಳಿನ ಮೌನ ಆ ಪ್ರಣಯಿಗಳಿಗೆ ಸರಿಯುತ್ತಿರುವ ವೇಳೆಯ ಕಲ್ಪನೆಯನ್ನು ತಂದುಕೊಟ್ಟಿತು. ಆ ಉನ್ಮತ್ತ ಪ್ರಣಯಿಗಳಿಬ್ಬರು ಒಬ್ಬರ ತೋಳ್ತೆಕ್ಕೆಯಲ್ಲಿ ಒಬ್ಬರು ಪವಡಿಸಿ ತಮ್ಮ ಬಾಳಿನ ದುಃಸ್ವಪ್ನವನ್ನು ಮರೆಯಲೆತ್ನಿಸಿದರು.

# ೮

ಗುಪ್ತವಾಗಿ ಸಿದ್ಧತೆಗಳು ನಡೆದು ತಿಪ್ಪಾಜಿ ಕುಸುಮೆಯರು ಯಾರಿಗೂ ತಿಳಿಸದೆ, ಹೆಚ್ಚಿನ ಗದ್ದಲಕ್ಕೆ ಅವಕಾಶಕೊಡದೆ ರಾಜಧಾನಿಯನ್ನು ಬಿಟ್ಟು ಹೊರಟರು. ಅವರೊಂದಿಗೆ ಮಿತಪರಿವಾರವಿತ್ತು, ಗೋವಿಂದರಾಜ ವೇಷವನ್ನು ಮರೆಸಿಕೊಂಡಿದ್ದ ಹತ್ತಿಪ್ಪತ್ತು ಮಂದಿ ಸೈನಿಕರನ್ನು ಅವರ ಬೆಂಗಾವಲಿಗೆಂದು ನಿಯಮಿಸಿ, ತಾನು ರಾಜಧಾನಿಯ ಎಲ್ಲೆ ಮುಗಿಯುವ ತನಕ ಅವರ ಜತೆಗೆ ಇದ್ದು ಹಿಂದಿರುಗಿದ. ಹೊರಡುವಾಗ ನಗುಮುಖದಲ್ಲೇ ಬೀಳ್ಕೊಟ್ಟರೂ ಕಿತ್ತು ತಿನ್ನುವ ನೋವು ಇಬ್ಬರ ಹೃದಯದಲ್ಲೂ ಇತ್ತು. ಗೋವಿಂದರಾಜ ಶ್ರೀರಂಗಪಟ್ಟಣಕ್ಕೆ ಒಮ್ಮೆ ಬರುವುದಾಗಿ ಮಾತು ಕೊಟ್ಟ. ಅವರವರಲ್ಲಿ ಸಾವಿರ ಮಾತುಕತೆ ನಡೆಯಿತು. ಕಡೆಗೆ ಬರಲಾರದ ಕಾಲುಗಳನ್ನು ಎಳೆದುಕೊಂಡು ಹಿಂದಿರುಗಿ ಬಂದ.

ತಿಪ್ಪಾಜಿ ಯಾರಿಗೂ ತಿಳಿಯದಂತೆ ಹೊರಟುದರ ಕಾರಣ, ತಮ್ಮ ನಿರ್ಗಮನದ ಸಂಗತಿ ವಿಜಯಭದ್ರನಿಗೆ ತಿಳಿಯಬಾರದೆಂದು. ಅವನಿಗೆ ತಿಳಿದರೆ ತಮ್ಮ ಪ್ರಯಾಣಕ್ಕೆ ತೊಂದರೆಯುಂಟಾಗುವುದೆಂದು ಹೊರಡುವ ದಿನವನ್ನು ಯಾರಿಗೂ ತಿಳಿಸಿರಲಿಲ್ಲ. ಆಪ್ತರಾದ ಭರತಾಚಾರ್ಯರು, ತಿರುಮಲಾದೇವಿಯರಿಗೆ ಮಾತ್ರ ತಿಳಿಸಿದ್ದರು. ಅವರುಗಳಿಗೆ ತಿಪ್ಪಾಜಿ ಕುಸುಮೆಯರು ನಗರವನ್ನು ಬಿಟ್ಟು ಹೊರಡುವುದು ಇಷ್ಟವೇ ಇರಲಿಲ್ಲ. ಅದರಲ್ಲೂ ಭರತಾಚಾರ್ಯರಿಗೆ ಇದು ತುಂಬ ನಿರಾಶೆಯನ್ನು ಉಂಟುಮಾಡಿತ್ತು. ಏಕೆಂದರೆ, ಅವರಿಗೆ ಕುಸುಮೆಯ ನೃತ್ಯಕಲಾ ಪ್ರವೀಣತೆಯನ್ನು ಮಹಾಪ್ರಭುಗಳ ಸಮ್ಮುಖದಲ್ಲಿ ಪ್ರದರ್ಶಿಸಬೇಕೆಂಬ ಆಸೆಯಿತ್ತು. ಕುಸುಮೆಯ ಆಕಸ್ಮಿಕ ನಿರ್ಗಮನದಿಂದ ಅವರ ಎಲ್ಲ ಆಲೋಚನೆಗಳೂ ವ್ಯರ್ಥವಾಗಿದ್ದುವು. ಕುಸುಮೆ ಮಹಾಪ್ರಭುಗಳ ಸಮ್ಮುಖದಲ್ಲಿ ನೃತ್ಯ ಪ್ರದರ್ಶನಕ್ಕೆ ಮೊದಲು ಒಪ್ಪಿಕೊಂಡಿದ್ದಳು. ಆದರೆ ಅನಂತರ ಅದೇನು ಕಾರಣವೋ, ಆ ವಿಷಯ ಪ್ರಸ್ತಾಪ ಬಂದಾಗಲೂ ಅವಳು ಮೆಲ್ಲನೆ ಜಾರಿಕೊಳ್ಳ ಹತ್ತಿದಳು. ಮಹಾರಾಜರ ಸಮ್ಮುಖದಲ್ಲಿ ನೃತ್ಯವೇರ್ಪಟ್ಟರೆ ತಾವು ಶ್ರೀರಂಗಪಟ್ಟಣಕ್ಕೆ ಹಿಂದಿರುಗಲು ಸಾಧ್ಯವಾಗದೆ

ಹೋಗಬಹುದೆಂಬ ಹೆದರಿಕೆಯುಂಟಾಗಿತ್ತು. ಇಲ್ಲೇ ಆಸ್ಥಾನ ನರ್ತಕಿಯಾಗಿ ಇರಲು ಸಾಮ್ರಾಟರು ಆಜ್ಞೆಮಾಡಿದರೆ ಅದನ್ನು ಶಿರದಲ್ಲಿ ಹೊತ್ತು ನಡಸುವುದು ಅವಳ ಕರ್ತವ್ಯವಾಗಿರುತ್ತಿತ್ತು. ಈ ಬಲವಂತ ಮಾಘ ಸ್ನಾನವೇ ಬೇಡವೆಂದು, ಮಹಾಪ್ರಭುಗಳ ಇದಿರಿನಲ್ಲಿ ನೃತ್ಯವನ್ನು ತಪ್ಪಿಸಿಕೊಂಡಿದ್ದಳು ಕುಸುಮೆ.

ಈಗ ವಿಜಯಭದ್ರನ ಕಣ್ಣಿಂದ ತಪ್ಪಿಸಿಕೊಳ್ಳಲು ಅವಳು ರಾಜಧಾನಿಯನ್ನು ಬಿಟ್ಟು ಹೊರಟಿದ್ದಳು. ಅವನ ವಿಪರೀತವಾದ ಕಲಾಭಿಮಾನ—ಕಲಾವಿದೆಯನ್ನು ತನ್ನವಳನ್ನಾಗಿ ಮಾಡಿಕೊಳ್ಳುವ ಅಸುರ ಪ್ರವೃತ್ತಿಗೆ ಹೆದರಿ ಕುಸುಮೆ ರಾಜಧಾನಿಯನ್ನು ಬಿಟ್ಟು ಹೊರಟಿದ್ದಳು. ಇವನಿಗೆ ತಿಳಿಯದಂತೆ ಹೊರಡುವುದು ಕಠಿಣ ಕೆಲಸವಾಗಿತ್ತು. ಅವನ ಗೂಢಚಾರರು ಸದಾ ಕುಸುಮಾಜಿಯ ಚಲನವಲನಗಳನ್ನು ಕಣ್ಣಿಟ್ಟು ಕಾಯುತ್ತಿದ್ದರು. ಅವರ ಕಣ್ಣಿಗೆ ಮಣ್ಣೆರಚಿ, ಊರು ಸೇರುವುದು ಬಹು ಪ್ರಯಾಸದ ಕೆಲಸವಾಗಿತ್ತು. ಅದಕ್ಕೆ ತಾಯಿಮಕ್ಕಳಿಬ್ಬರೂ ಒಂದು ಉಪಾಯ ಮಾಡಿದ್ದರು. ಅವರು ತಮ್ಮ ಪ್ರಯಾಣದ ದಿಕ್ಕನ್ನೇ ಬದಲಾಯಿಸಿ ಬಿಟ್ಟಿದ್ದರು. ಹೊರ ನೋಟಕ್ಕೆ ಅವರು ತೀರ್ಥಯಾತ್ರೆಗೆ ಹೊರಟ ಯಾತ್ರಿಕರಂತೆ ವೇಷವನ್ನು ಮರೆಸಿಕೊಂಡು ತಿರುಮಲೈಕ್ಷೇತ್ರಕ್ಕೆ ಯಾತ್ರೆ ಹೊರಟಿದ್ದರು. ಅಲ್ಲಿಂದಾಚೆ, ಚಿತ್ತೂರಿನ ಮಾರ್ಗವಾಗಿ, ಮುಳುಬಾಗಿಲ ಮೇಲೆ ಹೊರಟು ಶ್ರೀರಂಗಪಟ್ಟಣವನ್ನು ತಲುಪಬೇಕೆಂದು ಅವರ ಆಲೋಚನೆಯಾಗಿತ್ತು. ಇದು ಒಂದು ರೀತಿಯಾಗಿ ಸೂಕ್ತವಾಗಿತ್ತು. ಇದರಿಂದ ಕ್ಷೇತ್ರಯಾತ್ರೆಯೂ ಆಗಿತ್ತು; ಶತ್ರುಗಳನ್ನು ದಾರಿತಪ್ಪಿಸಿದಂತೆಯೂ ಆಗಿತ್ತು.

ಆದರೆ ವಿಜಯಭದ್ರನ ಬೇಟೆನಾಯಿಗಳು ತಿಪ್ಪಾಜಿ ಕುಸುಮಾಜಿಯರಿಗಿಂತ ಬುದ್ಧಿಶಾಲಿಗಳಾಗಿದ್ದುವು. ಅವು ಈ ತಾಯಿಮಕ್ಕಳ ಕಾರಸ್ಥಾನವನ್ನು ಪತ್ತೆಮಾಡಿಯೇ ಬಿಟ್ಟುವು.

ತನ್ನ ಕಣ್ಣಿಗೆ ಮಣ್ಣೆರಚಿ ಗುಪ್ತವಾಗಿ ರಾಜಧಾನಿಯನ್ನು ಬಿಟ್ಟು ಶ್ರೀರಂಗಪಟ್ಟಣಕ್ಕೆ ಹೊರಡಲು ಕುಸುಮಾಜಿ ಚಂದ್ರಗಿರಿಯ ಮಾರ್ಗ ಹಿಡಿದಿರುವಳೆಂದು ವಿಜಯಭದ್ರನಿಗೆ ತಿಳಿದೊಡನೆಯೇ, ಬೇಟೆ ತನ್ನ ಬಲೆಯೊಳಗೆ ಬಿದ್ದುಹೋಯಿತೆಂದು ಅವನು ಹರ್ಷಿಸಿದ. ಅವನು ಕೂಡಲೇ ತನ್ನ ಅನು

ಚರರಾದ ಕೊರಮನಾಯಕ ಭರಮನಾಯಕರೊಡನೆ, ಪೂರ್ವಭಾವಿಯಾಗಿ ಸಾಕಷ್ಟು ಸಂಖ್ಯೆಯಲ್ಲಿ ಶಸ್ತ್ರಸಜ್ಜಿತ ಸೇನೆಯನ್ನು ಕಳುಹಿಸಿ, ಆ ತಾಯಿ ಮಕ್ಕಳಿಗೆ ಕೊಂಚವೂ ಅನುಮಾನ ಬರದ ರೀತಿಯಲ್ಲಿ ಅವರನ್ನು ಹಿಂಬಾಲಿಸಿ ಹೋಗಬೇಕೆಂದು ಅಪ್ಪಣೆಮಾಡಿದ.

ಕುಸುಮಾಜಿ ಚಂದ್ರಗಿರಿಯನ್ನು ಸುರಕ್ಷಿತವಾಗಿ ತಲುಪಿದಳು. ಅಲ್ಲಿಯ ತನಕ ಗೋವಿಂದರಾಜನು ಕಳುಹಿಸಿದ್ದ ಸೈನಿಕರು ಅವರ ಜೊತೆಗೆ ಬಂದು, ಅವರಿಗೆ ಇನ್ನು ಯಾವ ಭಯವಿಲ್ಲದೆ ಮಾರ್ಗಾನುಕ್ರಮಣ ಮಾಡಬಹುದೆಂದು ಭರವಸೆ ಇತ್ತು ರಾಜಧಾನಿಗೆ ಹಿಂತಿರುಗಿದರು.

ಇದನ್ನು ಕಾಯುತ್ತಿದ್ದ ವಿಜಯಭದ್ರನಿಗೆ ಈಗ ತುಂಬ ಸಂತೋಷವಾಯಿತು. ಕುಸುಮಾಜಿಯ ಮೇಲೆ ಕೈಮಾಡಲು ಇದ್ದ ಆ ಒಂದು ಪ್ರತಿಬಂಧಕವೂ ಈಗ ನಿವಾರಿಸಲ್ಪಟ್ಟಿತ್ತು. ಅವಳನ್ನು ಯಾವ ಗಳಿಗೆಯಲ್ಲಿ ಬೇಕಾದರೂ ತನ್ನವಳನ್ನಾಗಿ ಮಾಡಿಕೊಳ್ಳಬಹುದು, ಎನ್ನುವ ಭರವಸೆಯಿಂದ ವಿಜಯಭದ್ರ ಸಂತೋಷದಿಂದ ವ್ಯವಹರಿಸಿದ.

ಕುಸುಮಾಜಿ, ತಿಪ್ಪಾಜಿಯರು ಚಂದ್ರಗಿರಿಗೆ ಬರುವ ವೇಳೆಗೆ ಅಲ್ಲಿ ಒಂದು ದೊಡ್ಡ ಯಾತ್ರಿಕರ ತಂಡ, ತಿರುಮಲೈ ಕ್ಷೇತ್ರಕ್ಕೆ ಹೊರಡುವುದಿತ್ತು. ಅವರೊಂದಿಗೆ ಇವರೂ ಸೇರಿಕೊಂಡು, ತಿರುಪತಿಗೆ ಹೊರಟರು.

ಯಾತ್ರೆ ಸುಗಮವಾಗಿ ನೆರವೇರಿತು. ತಾಯಿಮಕ್ಕಳಿಬ್ಬರ ಬಹಳ ಕಾಲದ ಹರಕೆ ಈಡೇರಿತ್ತು. ಅವರು ಆಕಾಶಗಂಗೆ, ಪಾಪನಾಶಿನಿಯಲ್ಲಿ ಮಿಂದು ಪುನೀತರಾದರು. ರಾಮಕಣಜಕ್ಕೆ ಹರಕೆಯನ್ನು ಸಲ್ಲಿಸಿದರು. ತಮ್ಮನ್ನು ಸುರಕ್ಷಿತವಾಗಿ ಊರು ತಲುಪಿಸಲು ವೆಂಕಟೇಶ್ವರಸ್ವಾಮಿಯನ್ನು ಅನನ್ಯ ಭಕ್ತಿಯಿಂದ ಪ್ರಾರ್ಥಿಸಿದರು. ಅನಂತರ ಬೆಟ್ಟವಿಳಿದು—ಚಿತ್ತೂರಿನ ಮಾರ್ಗವಾಗಿ, ಮುಳುಬಾಗಿಲು ಕ್ಷೇತ್ರಕ್ಕೆ ಹೊರಟರು.

ಅನಿರೀಕ್ಷಿತವಾಗಿ ಬಂದೊದಗಿದ ತಿರುಪತಿಯ ಯಾತ್ರೆ ಅವರ ಮೇಲೆ ವಿಲಕ್ಷಣ ಪರಿಣಾಮವನ್ನು ಉಂಟುಮಾಡಿತ್ತು. ಅದರಲ್ಲೂ ಕುಸುಮೆಯಂತೂ ಕಾಯಾ ವಾಚಾ ಮನಸಾ ಯಾತ್ರಿಕಳೇ ಆಗಿದ್ದಳು. ಅವಳ ಉಡುಪು—ನಡೆನುಡಿ ಎಲ್ಲವೂ ವಿರಕ್ತರದು; ಇಹ ಜೀವನದಲ್ಲಿ ವೈರಾಗ್ಯ ಹೊಂದಿದವರಂತೆ ಇತ್ತು. ನಿಜಕ್ಕೂ ಕುಸುಮೆ ಈ ಕೆಲವು ದಿನಗಳಿಂದ

ಸ್ತ್ರಳೇ ಆಗಿದ್ದಳು. ಅವಳು ಅಧ್ಯಾತ್ಮ ಚಿಂತನೆಯಲ್ಲಿ, ಭಗವನ್ನಾಮ
ೀರ್ತನೆಯಲ್ಲಿ ಆದಷ್ಟು ಕಾಲವನ್ನು ಕಳೆಯುತ್ತಿದ್ದಳು. ಸದಾ ಪಾರ
ರ್ಥಿಕ ವಿಷಯಗಳಲ್ಲೂ, ಸಾಧು ಸಂತರ ಚರಿತ್ರೆ, ವಚನಾಮೃತ, ಬೋಧನೆ
ರ ಸಂಕೀರ್ತನೆಗಳಲ್ಲೂ ಮನಸ್ಸನ್ನು ಕೊಡುತ್ತಿದ್ದಳು. ಈಗ ಅವಳಿಗೆ
ು ಬಗೆಯ ಮನಶ್ಶಾಂತಿ ದೊರೆತ್ತಿತ್ತು. ಅವಳಿಗೆ ವಿಜಯಭದ್ರನ ಹೆದ
ರೂಗಲಿ, ಅವನ ದುಷ್ಟಪರಿವಾರದವರ ನೆನಪಾಗಲೀ ಉಂಟಾಗುತ್ತಿರ
ತಾವು ಶ್ರೀಹರಿಯ ರಕ್ಷಣೆಯಲ್ಲಿ ಇರುವುದರಿಂದ, ತಮಗೆ ಯಾವ
ುವೂ ಇಲ್ಲ ಎಂದುಕೊಳ್ಳುವಷ್ಟು ಅವಳ ಮನಸ್ಸು ಪರಿಪಾಕಗೊಂಡಿತ್ತು.
ಚಂದ್ರಗಿರಿಯಲ್ಲಿ ವಿಶ್ರಾಂತಿಯನ್ನು ತೆಗೆದುಕೊಂಡ ಮೇಲೆ ಅವರು
ೃ ಪರಿವಾರವನ್ನು ಆದಷ್ಟು ಮಿತಗೊಳಿಸಿ, ತ್ವರೆಯಾಗಿ ಗೃಹಾಭಿಮುಖ
ು ತೆರಳಿದರು.

ಮಾರ್ಗ ಅನೇಕ ಹಳ್ಳಿಗಳ ಮೇಲೆ ಹಾದು ಹೋಗಿತ್ತು. ಅವರು
್ರಾರಿನ ಸಮೀಪಕ್ಕೆ ಬರುವ ವೇಳೆ ದಾರಿ ದಟ್ಟವಾದ ಕಾಡಿನಲ್ಲಿ ಹಾದು
ದೊಡ್ಡ ದೊಡ್ಡ ಅನೇಕ ಕಾಡುಮರಗಳು ಬೆಳೆದಿದ್ದುವು. ಅದು ನಿರ್ಜನ
ುದ್ದು, ಕೇವಲ ದುಷ್ಟಮೃಗಗಳ ರಾಜ್ಯವಾಗಿತ್ತು; ಮೇನೆಯನ್ನು ಹೊತ್ತ
ೀಯಿಗಳು ನಡುಮಧ್ಯಾಹ್ನವಾದುದರಿಂದ, ವಿಶ್ರಮಿಸಿಕೊಳ್ಳಲು ಸರಿಯಾದ
ದೊರೆಯದೆ ಬೇಗಬೇಗನೆ ಹೆಜ್ಜೆ ಹಾಕಿ, ವೇಗವಾಗಿ ಹೊರಟಿದ್ದರು.

ಇದ್ದಕ್ಕಿದ್ದ ಹಾಗೆ ಎಲ್ಲಿಂದಲೋ ಒಂದು ಕಲ್ಲು ಬಂದು ಮೇನೆಗೆ ಬಡಿ
ತು. ಬೋಯಿಗಳು ಗಾಬರಿಯಾಗಿ ಸುತ್ತಲೂ ನೋಡಿದರು. ಯಾರೂ
ಟ್ಟಿಪಥಕ್ಕೆ ಗೋಚರಿಸದೇ ಇದ್ದುದರಿಂದ, ಅವರು ತಮ್ಮ ನಡಗೆಯನ್ನು
ಂದುವರಿಸಿದರು. ಅವರು ನಾಲ್ಕು ಹೆಜ್ಜೆ ಹೋಗುವುದರಲ್ಲಿ ಮತ್ತೆ ಮೇನೆಗೆ
ಮ್ಮನೆ ಕಲ್ಲುಗಳು ಬಂದು ಬಡಿಯ ಹತ್ತಿದುವು. ಬೋಯಿಗಳು ಮೇನೆ
ನ್ನು ನೆಲಕ್ಕೆ ಇಳಿಸಿ, ಕಲ್ಲುಗಳನ್ನು ಬೀಸುವವರು ಯಾರೆಂದು ತಿಳಿಯಲು
ತ್ತಲೂ ನೋಡಿದರು.

ಮೇನೆಯನ್ನು ನೆಲಕ್ಕೆ ಇಳಿಸಿದೊಡನೆಯೇ, ಮರಗಳ ಹಿಂದೆ ಬಚ್ಚಿಟ್ಟು
ಂಡಿದ್ದ ಸುಮಾರು ಹತ್ತಿಪ್ಪತ್ತು ಮಂದಿ, ಧಾಂಡಿಗರು ಕೈಯಲ್ಲಿ ಮಚ್ಚು
ತಗೋಲು ದೊಣ್ಣೆಗಳನ್ನು ಜಳುಪಿಸುತ್ತಾ ಮೇನೆಯನ್ನು ಮುತ್ತಿದರು.

ಮೇನೆಯ ಮೇಲೆ ಹಟಾತ್ತನೆ ನಡೆದ ಈ ಆಕ್ರಮಣದಿಂದ ಕುಸುಮಾಜಿಯ ಪರಿವಾರದವರಿಗೆ ದಿಗ್ಭ್ರಮೆಯಾಯಿತು; ಏನು ಮಾಡಲೂ ತೋಚಲಿಲ್ಲ. ಅವರು ತಮ್ಮ ಮೇಲೆ ಯಾರೋ ಕಳ್ಳರು ಬಿದ್ದರೆಂದು ಭಾವಿಸಿ, ಅವರನ್ನು ಎದುರಿಸಲು ಸಿದ್ಧರಾದರು.

ಆದರೆ ಕಳ್ಳರು ಅಧಿಕ ಸಂಖ್ಯೆಯಲ್ಲಿ ಇದ್ದುದರಿಂದಲೂ ಅವರಲ್ಲಿ ಹರಿತವಾದ ಆಯುಧಗಳು ಇದ್ದುದರಿಂದಲೂ, ಬಹು ಬೇಗನೆ, ಮೇನೆಯೊಡನೆ ಬಂದಿದ್ದವರೆಲ್ಲ ಅವರ ಕೈಸೆರೆಯಾದರು. ಮೇನೆಯಲ್ಲಿ ಇದ್ದ ತಿಪ್ಪಾಜಿ, ಮತ್ತು ಕುಸುಮಾಜಿಯರು ಗಾಬರಿಯಿಂದ ಹೊರಗೆ ತಲೆಹಾಕಿದೊಡನೆ, ಅವರ ತಲೆಗೆ ಕಪ್ಪುವಸ್ತ್ರಗಳ ಮುಸುಕನ್ನು ಎಳೆದು—ಅವರ ಕೈಕಾಲುಗಳನ್ನು ಕಟ್ಟಿ ಅದೇ ಮೇನೆಯಲ್ಲಿ ಅವರನ್ನು ಹಾಕಿಕೊಂಡು ನಾಯಕನನ್ನು ಹಿಂಬಾಲಿಸಿ ಹೊರಟರು.

ತಾಯಿಮಕ್ಕಳಿಗೆ ಒಮ್ಮೆಲೆ ತಾವು ಕತ್ತಲೆಯ ಬೃಹದ್ಗರ್ಭದಲ್ಲಿ ಪ್ರವೇಶಿದಂತೆ ಆಯಿತು. ತಮ್ಮನ್ನು ಹೀಗೆ ಸೆರೆಹಿಡಿದವರು ಯಾರು? ತಮ್ಮನ್ನು ಅವರು ಎಲ್ಲಿಗೆ ಒಯ್ಯುತ್ತಿದ್ದಾರೆ ಎಂಬುದು ಅವರಿಗೆ ತಿಳಿಯದಾಗಿತ್ತು. ಬಾಯಿಗೆ ಬಟ್ಟೆ ತುರುಕಿದ್ದುದರಿಂದ ಅವರು ಮಾತನಾಡಲು ಸಾಧ್ಯವಾಗಿರಲಿಲ್ಲ. ಉಸಿರಾಟಕ್ಕೆ ತುಂಬ ಕಷ್ಟವಾಗಿತ್ತು. ಕೈಕಾಲುಗಳನ್ನು ಕೂಡಿಸಿ, ಒಂದು ರೀತಿಯಲ್ಲಿ ಕಟ್ಟಿಹಾಕಿದ್ದುದರಿಂದ ಸ್ವಲ್ಪ ಹೊರಳಿದರೂ ಅವುಗಳು ನೋಯುತ್ತಿದ್ದುವು. ತಮ್ಮನ್ನು ಈ ಬಗೆಯಾಗಿ ಹಿಂಸಿಸುವರು ಯಾರು? ಅವರ ಉದ್ದಿಶ್ಯವಾದರೂ ಏನಿರಬಹುದು ಎಂದು ಎಷ್ಟು ಆಲೋಚಿಸಿದರೂ ಅವರಿಗೆ ಬಗೆ ಹರಿಯಲಿಲ್ಲ. ಬಹುಶಃ ಯಾರೋ ಅಡವಿಯ ಕಳ್ಳರು ತಮ್ಮನ್ನು ಸುಲಿಯಲು ಹೀಗೆ ಸೆರೆಹಿಡಿದು ಒಯ್ಯುತ್ತಿರಬೇಕು ಎಂದು ಭಾವಿಸಿದರು. ಆದರೆ ಅವರು ಕಳ್ಳರೇ ಆಗಿದ್ದರೆ ತಮ್ಮ ಬಳಿಯಲ್ಲಿ ಇರುವ ಸಮಸ್ತ ಸಂಪತ್ತನ್ನೂ ದೋಚಿಕೊಂಡು ತಮ್ಮನ್ನು ತಮ್ಮ ಪಾಡಿಗೆ ಬಿಟ್ಟು ಹೊರಟು ಹೋಗಬೇಕಾಗಿತ್ತು. ಆದರೆ ತಮ್ಮನ್ನು ಬಂಧಿಸಿ ಎಲ್ಲಿಗೋ ಕರೆದೊಯ್ಯುತ್ತಿದ್ದಾರೆ. ಇಂತಹ ಕಡೆಗೆ ಕರೆದೊಯ್ಯುತ್ತಿರುವರೆಂದು ತಿಳಿಯದಂತೆ ಮುಖಕ್ಕೆ ಕರಿಯ ಬಟ್ಟೆಯನ್ನು ಹಾಕಿದ್ದಾರೆ. ಈ ಎಲ್ಲ ಕೆಲಸಗಳ ಹಿಂದಿರುವ ಅವರ ಉದ್ದಿಶ್ಯವಾದರೂ ಏನು ಎಂಬುದನ್ನು ಆಲೋಚಿಸುತ್ತ ಅವರು ಕುಳಿತಿರುವಾಗಲೇ

ಮೇನೆಯನ್ನು ನೆಲಕ್ಕೆ ಇಳಿಸಿದ ಅನುಭವವಾಯಿತು. ಬಹುಶಃ ತಮ್ಮ ಪ್ರಯಾ ಣಕ್ಕೆ ಕೊನೆ ಬಂದಿರಬೇಕೆಂದು ಅವರು ಭಾವಿಸಿದರು.

ಮೇನೆಯನ್ನು ನೆಲಕ್ಕೆ ಇಳಿಸಿದ ಮೇಲೆ ಅದರ ಬಾಗಿಲನ್ನು ತೆಗೆದು, ನಾಲ್ವರು ಬಲಶಾಲಿಯಾದ ವ್ಯಕ್ತಿಗಳು ಅವರಿಬ್ಬರನ್ನು ಹೊತ್ತುಕೊಂಡು ಅಲ್ಲೇ ಗಿಡಮರಗಳ ಮರೆಯಲ್ಲಿ ಕಂಡೂ ಕಾಣದಂತೆ ಇದ್ದ ಒಂದು ಹಾಳು ಮಂಟಪವೆಡೆಗೆ ಹೋದರು.

ನೋಡಲು ಅದೊಂದು ಹಾಳುಮಂಟಪದಂತೆ ಇದ್ದರೂ ಮಂಟಪದ ಒಂದು ಬದಿಯಲ್ಲಿ ಎರಡು ಕೋಣೆಗಳು ಹೊಂದಿಕೊಂಡು ಇದ್ದುವು. ಹಿಂದೆ ಒಂದು ಕಾಲದಲ್ಲಿ ಅದು ಪೂಜಾರಿಯ ಮನೆಯಾಗಿತ್ತಂತೆ. ಅಲ್ಲಿಗೆ ಸುಮಾರು ಒಂದು ಫರ್ಲಾಂಗ್ ದೂರದಲ್ಲಿ ಪಾಲಾರ್ ನದಿಯು ಹರಿಯುತ್ತಿತ್ತು. ಅದನ್ನು ಮತ್ತೊಂದು ಕಿರು ಹೊಳೆಯು ಸೇರಿತ್ತು. ಈ ಸಂಗಮದಲ್ಲಿ ಒಂದು ಸಣ್ಣ ದೇವಾಲಯವನ್ನು ಯಾರೊ ಕಟ್ಟಿ ಅಲ್ಲಿ ಲಿಂಗವನ್ನು ಪ್ರತಿಷ್ಠಾಪಿಸಿದ್ದರು. ಹಿಂದೆ ಇದಕ್ಕೆ ಪೂಜೆ ಸಂತತವಾಗಿ ನಡೆಯುತ್ತಿತ್ತು. ಆದರೇನು ಕಾರಣವೋ ಈ ದೇವಾಲಯ ಅವನತಿ ಹೊಂದಿ, ಅಲ್ಲಿ ಪೂಜೆ ಮಾಡಿಕೊಂಡಿದ್ದ ಪೂಜಾ ರಿಯು ಮನೆಯನ್ನು ಬಿಟ್ಟು ಓಡಿ ಹೋಗಿದ್ದ. ಆಗಲಾಯಿತು ಆ ದೇವರಿಗೆ ತಲೆಯ ಮೇಲೆ ಒಂದಿಷ್ಟು ನೀರು ಹಾಕುವವರೂ ಇಲ್ಲವಾಗಿತ್ತು. ವರ್ಷಕ್ಕೆ ಒಮ್ಮೆ ಕಾರ್ತೀಕ ಮಾಸದಲ್ಲಿ ಆ ದೇವರನ್ನು ಅಕ್ಕಪಕ್ಕದ ಊರಿನ ಭಕ್ತಾದಿ ಗಳು ವಿಚಾರಿಸಿಕೊಂಡು, ನಾಲ್ಕು ಬಿಲ್ವಪತ್ರೆಯನ್ನು ತಲೆಯ ಮೇಲೆ ಹಾಕಿ ಬರುತ್ತಿದ್ದರು. ಪೂಜಾರಿಯ ಮನೆ ಹಾಳುಬಿದ್ದು, ಪುಂಡುಪೋಕರಿಗಳ ವಿಲಾಸ ಗೃಹವಾಗಿತ್ತು.

ಕುಸುಮಾಜಿ ತಿಪ್ಪಾಜಿಯನ್ನು ಹೊತ್ತುಕೊಂಡು ಬಂದು ಈ ಮಂಟಪ ದಲ್ಲಿ ಇಳಿಸಿದರು. ಅಲ್ಲಿ ನಾಯಕರ ಅಪ್ಪಣೆಯಂತೆ ಅವರಿಬ್ಬರನ್ನೂ ಒಂದೊಂದು ಕೋಣೆಯಲ್ಲಿ ಬಂಧಿಸಿದರು. ಅನಂತರ ನಾಯಕನು ಬಂಧಿಗಳನ್ನು ಸರಿ ಯಾಗಿ ನೋಡಿಕೊಳ್ಳಲು ಉಳಿದವರಿಗೆ ಹೇಳಿ, ತನ್ನ ಒಡೆಯನಿಗೆ ಈ ಸಂತೋಷದ ಸಮಾಚಾರವನ್ನು ತಿಳಿಸಲು ಕುದುರೆಯನ್ನೇರಿ ಹೊರಟು ಹೋದ.

ಕುಸುಮೆ ಕಣ್ಣುಬಿಟ್ಟು ನೋಡಿದಾಗ ತಾನು ಒಂದು ಅಸಹ್ಯ ವಾಸನೆ

ಬರುವ, ದೂಳು ತುಂಬಿದ ಒಂದು ಕೋಣೆಯಲ್ಲಿ ಇರುವುದನ್ನು ಅರಿತಳು. ಅವಳು ಕೈಕಾಲುಗಳಿಗೆ ಬಿಗಿದಿದ್ದ ಎಲ್ಲ ಕಟ್ಟುಗಳನ್ನು ಬಿಚ್ಚಿದ್ದರು. ಇದರಿಂದಾಗಿ ಕುಸುಮೆ ಅತ್ತಿತ್ತ ಓಡಾಡಬಹುದಾಗಿತ್ತು. ತನ್ನ ತಾಯಿ ಏನಾದಳೆಂಬುವೇ ಅವಳಿಗೆ ಮೊದಲು ಒಂದು ಯೋಚನೆ. ಬಹುಶಃ ತನ್ನಂತೆಯೇ ಅವಳನ್ನೂ ಜೇರೆಪೆಯಲ್ಲಿ ಬಂಧಿಸಿರಬೇಕೆಂದು ಊಹಿಸಿದಳು. ಅವಳು ಕೋಣೆಯನ್ನೆಲ್ಲ ಒಮ್ಮೆ ಶೋಧಿಸಿದಳು. ಒಂದು ಕಡೆ ಗೋಡೆ ಬಿರುಕು ಬಿಟ್ಟಿತ್ತು. ಅದರ ಮೂಲಕ ನೋಡಿದಾಗ ಆ ಇನ್ನೊಂದು ಕೋಣೆಯಲ್ಲಿ ತನ್ನ ತಾಯಿಯನ್ನು ಬಂಧಿಸಿರುವುದು ತಿಳಿಯಿತು. ಈ ಗೋಡೆಯ ಮೂಲಕ ಅವರು ಪರಸ್ಪರ ಕಣ್ಣುಪಟ್ಟುಕೊಂಡು ನೋಡಬಹುದಾಗಿತ್ತೇ ಹೊರತು ಮಾತನಾಡಲು ಸಾಧ್ಯವಿರಲಿಲ್ಲ. ಒಬ್ಬರ ಧ್ವನಿ ಮತ್ತೊಬ್ಬರಿಗೆ ಕೇಳಿಸುತ್ತಿರಲಿಲ್ಲ. ಗೋಡೆ ಅಷ್ಟು ದಪ್ಪವಾಗಿ ಇತ್ತು. ಕುಸುಮೆ ಈ ಕಿಂಡಿಯಲ್ಲಿ ತನ್ನ ತಾಯಿಯನ್ನು ನೋಡಿ ಸಮಾಧಾನ ಹೊಂದಿದಳು. ಅಂತಲೇ ತಿಪ್ಪಾಜಿಯೂ ಮಗಳ ಮುಖವನ್ನು ಆ ಕಿರು ಸಂದಿಯಲ್ಲಿ ನೋಡಿ ತೃಪ್ತಿಗೊಂಡಳು. ತಮ್ಮನ್ನು ಈ ಸ್ಥಿತಿಗೆ ತಂದವರನ್ನು ಶಪಿಸಿದಳು.

ಕುಸುಮೆ ಕೋಣೆಯಿಂದ ತಪ್ಪಿಸಿಕೊಳ್ಳಲು ಸಾಧ್ಯವಿದೆಯೇ ಎಂದು ಅತ್ತಿತ್ತ ಅಡ್ಡಾಡಿದಳು. ಆದರೆ ಕೋಣೆಯ ಗೋಡೆಗಳು ತುಂಬಾ ಭದ್ರವಾಗಿದ್ದುವು. ಎಲ್ಲೂ ತಪ್ಪಿಸಿಕೊಂಡು ಹೋಗಲು ಅನುಕೂಲವಿರಲಿಲ್ಲ. ಹೊರಗಡೆ ಅವರ ಮೇಲೆ ಸರ್ಪಕಾವಲು ಕುಳಿತ ಸುಮಾರು ಇಪ್ಪತ್ತು ಮಂದಿ ಭಟರನ್ನು ನೋಡಿ, ತಮಗೆ ಇವರ ಕೈಯಿಂದ ಮುಕ್ತಿ ಇಲ್ಲವೆಂದು ಅರಿತಳು. ಇಷ್ಟಾದರೂ ಕುಸುಮೆಗೆ ಅವರು ಯಾರು? ತನ್ನನ್ನು ಕೈಸೆರೆ ಹಿಡಿದು ಹೀಗೆ ಹಿಂಸಿಸುವ ಕಾರಣವೇನು? ಎಂಬುದು ತಿಳಿಯಲಿಲ್ಲ. ಅವರು ಕಳ್ಳರೆಂದು ಅವಳು ತಿಳಿದಿದ್ದಳೇ ಹೊರತು—ವಿಜಯಭದ್ರನ ಸೇವಕರು ಅವರು, ಎಂಬುದು ಅವಳಿಗೆ ತಿಳಿಯಲಿಲ್ಲ. ಅವಳಿಗೆ ಈ ವಿಷಯ ತಿಳಿಯಲು ಎಷ್ಟೋ ವೇಳೆ ಬೇಕಾಯಿತು.

ಹೊರಗೆ ತನ್ನ ಒಡೆಯನನ್ನು ಕರೆತರಲು ಕುದುರೆಯನ್ನೇರಿ ಹೊರಟಿದ್ದ ಭರಮನಾಯಕ ವಿಜಯಭದ್ರನೊಡನೆ ಕೊಂಚ ಹೊತ್ತಿಗೆ ಅಲ್ಲಿಗೆ ಹಿಂದಿರುಗಿ ಬಂದ. ಆಗಲೇ ಕುಸುಮೆಗೆ ಗೊತ್ತಾದುದು—ತಾವು ರಾಜ

ಧಾನಿಯನ್ನು ಬಿಟ್ಟು ಇಷ್ಟು ದೂರ ಬಂದೂ ವಿಜಯ ಭದ್ರನ ಕೈಗೆ ಸಿಕ್ಕಿ ಬಿದ್ದೆವೆಂದು ಅವಳಿಗೆ ಒಮ್ಮೆಲೇ ಆಶ್ಚರ್ಯ ದುಃಖಗಳು ಉಂಟಾದುವು. ಇಲ್ಲಿಗೆ ವಿಜಯಭದ್ರನು ಹೇಗೆ ಬಂದನೆಂಬುದು ಅವಳಿಗೆ ತಿಳಿಯದಾಯಿತು. ಈ ಕಳ್ಳರಿಗೂ ವಿಜಯಭದ್ರನಿಗೂ ಏನು ಸಂಬಂಧವೆನ್ನುವುದೂ ತಿಳಿಯ ದಾಯಿತು. ಬಹುಶಃ ತನ್ನನ್ನು ಕಳ್ಳರು ಹಿಡಿದು, ವಿಜಯಭದ್ರನಿಗೆ ಒಪ್ಪಿಸಿರ ಬೇಕು ಎಂದು ತರ್ಕಮಾಡಿದಳು. ಆ ಮುಗ್ಧೆಗೆ ರಾಜಧಾನಿಯನ್ನು ಬಿಟ್ಟು ಬಂದಲಾಗಾಯಿತು ವಿಜಯಭದ್ರನು ತನ್ನಅನುಚರರೊಂದಿಗೆ ತನ್ನ ಹಿಂದೆಯೇ ಬರುತ್ತಿದ್ದನೆಂಬುದು ಹೇಗೆ ತಿಳಿಯಬೇಕು ?

ವಿಜಯಭದ್ರ, ಅವನ ಭಂಟ ಭರಮನಾಯಕ ಇವರನ್ನು ನೋಡದ ಮೇಲೆ ಕುಸುಮೆ ತನ್ನ ಭವಿಷ್ಯವೇನಾಗುವುದೆಂಬುದನ್ನುನಿರ್ಧರಿಸಿದಳು. ಇನ್ನು ತಾನು ಇವರ ಬಲೆಯಿಂದ ತಪ್ಪಿಸಿಕೊಳ್ಳಲು ಸಾಧ್ಯವೇ ಇಲ್ಲ. ವಿಜಯ ಭದ್ರ ಕಡೆಗೂ ತನ್ನ ಮೇಲೆ ಸೇಡು ತೀರಿಸಿಕೊಂಡೇ ಬಿಟ್ಟಿದ್ದಾನೆ ! ಅವನ ಕಣ್ಣಿಗೆ ಮಣ್ಣೆರಚಿ ರಾಜಧಾನಿಯಿಂದ ಯಾರಿಗೂ ತಿಳಿಯದಂತೆ ಯಾತ್ರಿಕ ವೇಷದಲ್ಲಿ ಬೇರೆ ಮಾರ್ಗ ಹಿಡಿದು ಬಂದಿದ್ದರೂ ತನ್ನನ್ನು ಅವನು ಶೋಧಿ ಸಿಯೇ ಬಿಟ್ಟಿದ್ದಾನೆ! ಅಷ್ಟು ಮಾತ್ರವೇ ಅಲ್ಲ. ತಮ್ಮನ್ನು ತನ್ನ ಅನುಚರ ರಿಂದ ಬಂಧಿಸಿಯೂ ಬಿಟ್ಟಿದ್ದಾನೆ ! ಇನ್ನು ಅವನ ಕೈಯಿಂದ ತಪ್ಪಿಸಿ ಕೊಳ್ಳಲು ಸಾಧ್ಯವೇ ಇಲ್ಲ. ಇಲ್ಲಿಗೆ ತನ್ನ ಕಥೆ ಪೂರೈಸಿತೆಂದೇ ಸರಿ. ತನ್ನ ಅವಸಾನ ಸನ್ನಿಹಿತವಾದಂತೆಯೇ ಸರಿ. ಈ ನರಾಧಮನಿಗೆ ಸರಿಯಾದ ಬುದ್ಧಿ ಕಲಿಸಿ ತೀರಿಕೊಳ್ಳಬೇಕು—ತಾನು ಸತ್ತರೂ ಸರಿ. ಅವನಿಗೆ ತಾನು ಸಿಗ ಬಾರದು" ಎಂದು ನಿರ್ಧರಿಸಿದಳು ಕುಸುಮೆ.

ವಿಜಯಭದ್ರನು ಮೀಸೆಯನ್ನು ಹುರಿಮಾಡಿಕೊಂಡು, ಭರಮನಾಯಕ ನನ್ನು ಅನುಸರಿಸಿ, ಕುಸುಮೆ ಇದ್ದ ಕೋಣೆಗೆ ಬಂದ. ಅವನನ್ನು ನೋಡು ತ್ತಲೇ ಹಾವನ್ನು ಮೆಟ್ಟಿದವಳಂತೆ ಕುಸುಮೆ ಎದ್ದು ನಿಂತಳು. ವಿಜಯ ಭದ್ರನ ಸಂಜ್ಞೆಯಂತೆ ಭರಮನಾಯಕನು ಬಾಗಿಲನ್ನು ಬಂಧಿಸಿ ಹೊರಟು ಹೋದ.

ಕೋಣೆಯಲ್ಲಿ ಕುಸುಮೆ ವಿಜಯಭದ್ರರಿಬ್ಬರೇ ಉಳಿದರು.

ವಿಜಯಭದ್ರ ಸಂತೋಷದಿಂದ ಮೈಯುಬ್ಬಿಸಿಕೊಂಡು, ಕಾಮವಿಹ್ವಲ

ನಾದ ಪಶುವಿನಂತೆ ನಿಂತಿದ್ದ.

ಕುಸುಮೆ ಕಠೋರ ನಿಶ್ಚಲಮತಿಯಾಗಿ ಸೆಟೆತು ನಿಂತಿದ್ದಳು ಅವಳನ್ನು ನೋಡಿ, ಮುಗುಳ್ನಗೆ ನಗುತ್ತ ವಿಜಯಭದ್ರನೇ ಮಾತನಾಡಿಸಿದ "ನನ್ನನ್ನು ನೀನು ಇಲ್ಲಿ, ಈ ಸ್ಥಿತಿಯಲ್ಲಿ ನಿರೀಕ್ಷಿಸಿದ್ದಿರಲಾರೆ; ಅಲ್ಲವೆ ಕುಸುಮ? ಏನು ಮಾಡಲಿ, ನೀನು ರಾಜಧಾನಿಯಿಂದ ಯಾರಿಗೂ ತಿಳಿಯ ದಂತೆ ಊರಿಗೆ ಹೊರಟೆ. ಆದರೆ ನಿನ್ನ ಜೊತೆಯಲ್ಲಿ ನನ್ನ ಹೃದಯವನ್ನೂ ಅಪಹರಿಸಿಕೊಂಡು ಹೊರಟಿರುವೆ ಎಂಬುದನ್ನು ಮಾತ್ರ ನೀನು ತಿಳಿಯ ದಾಪೆ. ನೀನು ಎಲ್ಲಿ ಹೊರಟರೆ ಅಲ್ಲಿ ವಿಜಯಭದ್ರನ ದೇಹ—ಮನಸ್ಸು ! ನಿ ಗಾಗಿ ನಾನು ಎಷ್ಟು ಕಾತರನಾಗಿರುವೆನೆಂಬುದನ್ನು ನೀನು ಕಾಣೆ. ನಿನ್ನನ್ನು ನನ್ನ ರಾಣಿಯನ್ನಾಗಿ ಮಾಡಿಕೊಂಡು, ಸುಖದ ಸುಪ್ಪತ್ತಿಗೆಯಲ್ಲಿ ಓಲಾಡ ವಂತೆ ಮಾಡಲು ನಾನು ಇಷ್ಟಪಟ್ಟಿದ್ದೆ. ನನ್ನ ಇಷ್ಟವನ್ನು ನೀನು ಕಾ ಕಸವಾಗಿ ಭಾವಿಸಿದೆ. ನನ್ನನ್ನು ನೀನು ತಿರಸ್ಕರಿಸಿದೆ. ಆದರೆ, ನೀನ ನನ್ನನ್ನು ತಿರಸ್ಕರಿಸಿದರೂ ನಿನ್ನ ಮೇಲೆ ನನಗೆ ತಿರಸ್ಕಾರ ಹುಟ್ಟುವ ಬದಲ ಮತ್ತೆ ಮತ್ತೆ ಮೋಹ ಉಕ್ಕುತ್ತಿತ್ತು. ಹೇಗಾದರೂ ಮಾಡಿ ನಿನ್ನನ್ನು ನನ ವಳನ್ನಾಗಿ ಮಾಡಿಕೊಳ್ಳಬೇಬೇಕೆಂಬ ಸಂಕಲ್ಪದಿಂದ, ನಾನು ನಿನಗಾಗಿ ಪಟ್ಟ ಪಾಡು—ಮಾಡಿದ ಸಾಹಸ ನೀನೇ ಬಲ್ಲೆ. ಇನ್ನು ವ್ಯರ್ಥ ಪ್ರತಿಭಟನೆಯನು ತೋರಿ ಪ್ರಯೋಜನವಿಲ್ಲ, ನೀನು ನನ್ನ ಕೈವಶವಾಗಿದ್ದೀಯೆ. ನಾನು ಹೇ ದಂತೆ ಕೇಳಿದರೆ ನಿನಗೇ ಕ್ಷೇಮ. ಸುಮ್ಮನೆ ಅರ್ಥವಿಲ್ಲದ ಆದರ್ಶಕ್ಕೆ ಬ ಬಿದ್ದು ನಿನ್ನ ಬದುಕನ್ನು ಹಾಳುಮಾಡಬೇಡ." ಎಂದು ಕುಸುಮಾ ಯನ್ನು ಮುಟ್ಟಲು ಹೋದ. ಕುಸುಮೆ ಸರ್ರನೆ ಅಲ್ಲಿಂದ ಜಾರಿದಳು.

" ನೀನು ಎಷ್ಟು ಸಾಹಸಪಟ್ಟರೂ ನನ್ನಿಂದ ತಪ್ಪಿಸಿಕೊಳ್ಳಲಾರೆ. ಇ ನಿನಗೆ ಯಾರೂ ಸಹಾಯಕ್ಕೆ ಬರಲಾರರು. ಸುಮ್ಮನೆ ವ್ಯರ್ಥವಾದ ಪ್ರ ಭಟನೆಯಿಂದ ಪ್ರಯೋಜನವಿಲ್ಲ" ಎಂದು ಹೇಳಿ ಕುಸುಮೆಯ ಬಳಿ ಧಾವಿಸಿ ಅವಳ ಕೈ ಹಿಡಿದುಕೊಂಡ.

" ನೀಚ ! ದೂರ ಸರಿ ! ನನ್ನನ್ನು ಮುಟ್ಟಬೇಡ ! "

ಎಂದು ಹೂಂಕರಿಸಿದಳು ಕುಸುಮೆ. ಅವಳ ರಣಗರ್ಜನೆಯನ ಕೇಳಿ ವಿಜಯಭದ್ರ ಒಂದು ಕ್ಷಣ ಅವಾಕ್ಕಾಗಿ ನಿಂತ. ಮರುಕ್ಷಣದಲ್ಲಿ ವಿಕ

ವಾದ ನಗು ನಗುತ್ತ

“ನೀಚ! ಯಾರು ನೀಚ?—ನಾನಲ್ಲ. ಆ ನಿನ್ನ ಗೋವಿಂದರಾಜ ನೀಚ—ನನ್ನಿಂದ ನಿನ್ನನ್ನು ಹಾರಿಸಿದ ಅವನು ನೀಚ! ನಿನ್ನನ್ನು ಉಳಿಸಿ ಕೊಳ್ಳಲಾಗದ ಆ ರಣಹೇಡಿ ನೀಚ, ತಿಳಿಯಿತೆ?” ಎಂದ.

ಈ ಮಾತು ಕೇಳಿ ಕುಸುಮಾಜಿ ಕೆರಳಿದಳು.

“ಅವರ ಪಾದದೂಳಿಗೆ ಇರುವ ಯೋಗ್ಯತೆ ನಿನಗೆ ಇದ್ದರೆ ಸಾಕಾಗಿದೆ. ಅವರ ಹೆಸರನ್ನು ನಿನ್ನ ಹೊಲಸು ನಾಲಗೆಯಲ್ಲಿ ಉಚ್ಚರಿಸಿ ಅಪವಿತ್ರಗೊಳಿಸ ಬೇಡ.”

“ಅವನ ಯೋಗ್ಯತೆಯನ್ನು ನೀನೇ ಹೊಗಳಬೇಕು. ಅವನನ್ನು ನಂಬಿ ನಿನಗೆ ಎಂತಹ ದುರ್ಗತಿ ಪ್ರಾಪ್ತವಾಗಿದೆ ನೋಡು? ಅಂದೇ ನೀನು ನನ್ನವಳಾಗಿದ್ದಿದ್ದರೆ ನಿನಗೆ ಇಷ್ಟೊಂದು ಭವಣೆ ಬರುತ್ತಿರಲಿಲ್ಲ! ಈ ವೇಳೆಗೆ ನೀನು ಮಹಾರಾಣಿಯಂತೆ, ಮೆರೆಯುತ್ತಿದ್ದಿ. ಈಗಲೂ ಕಾಲ ಮಿಂಚಿ ಹೋಗಿಲ್ಲ. ನೀನು ನನ್ನ ವಿಷಯದಲ್ಲಿ ಪ್ರಸನ್ನಳಾದರೆ ನಿನ್ನ ಹಿಂದಿನ ನಡ ವಳಿಕೆ ಎಲ್ಲವನ್ನೂ ಕ್ಷಮಿಸಿಬಿಡಲು ಸಿದ್ಧವಾಗಿದ್ದೇನೆ. ಅದು ಬಿಟ್ಟು ನೀನು ಅವಿವೇಕಿಯಾಗಿ ವರ್ತಿಸಿದರೆ—ವಿಜಯಭದ್ರ ಎಷ್ಟು ಕ್ರೂರಿಯಾಗಬಲ್ಲ ಎಂಬುದನ್ನು ತೋರಿಸಿಕೊಡುತ್ತೇನೆ. ನಿನಗೆ ಬದುಕುವ ಆಸೆ ಇದ್ದರೆ ನಾನು ಹೇಳಿದಂತೆ ಕೇಳು! ಇಲ್ಲವಾದರೆ ನನ್ನ ಕ್ರೋಧದ ಪರಿಚಯ ನಿನಗೆ ಮಾಡಿಕೊಡಬೇಕಾಗುತ್ತದೆ....” ಎಂದು ಅವಳನ್ನು ಕ್ಷಣಕಾಲ ದುರು ಗುಟ್ಟಿಕೊಂಡು ನೋಡಿದ. ಕುಸುಮಾಜಿಯಿಂದ ಮಾತು ಬರದೆ ಇರುವು ದನ್ನು ಕಂಡು ತನ್ನ ಮಾತು ಬಹುಶಃ ಅವಳ ಮನಸ್ಸಿಗೆ ನಾಟಿರಬೇಕೆಂದು ಊಹಿಸಿ, ಸಲಿಗೆ ವಹಿಸಿ ಅವಳ ಕೈಯನ್ನು ಹಿಡಿದು ಅವಳನ್ನು ಬರಸೆಳೆದು ಆಲಿಂಗಿಸಲು ಪ್ರಯತ್ನಿಸಿದ.

ಕುಸುಮೆ ಇದುವರೆಗೆ ಸುಮ್ಮನಿದ್ದಳು. ಈಗ ಸುಮ್ಮನಿರಲಿಲ್ಲ. ಅವಳು ಬಳಿಗೆ ಬಂದ ವಿಜಯಭದ್ರನನ್ನು ಬಲವನ್ನೆಲ್ಲಾ ಬಿಟ್ಟು ದೂರ ನೂಕಿ, ಕೆರ ಳಿದ ಕಾಳಿಯಂತೆ ನಿಂತಳು.

ತನ್ನನ್ನು ಈ ಸ್ಥಿತಿಯಲ್ಲಿಯೂ ಕುಸುಮೆ ತಿರಸ್ಕರಿಸುವಳೆಂದು ವಿಜಯ ಭದ್ರ ತಿಳಿದಿರಲಿಲ್ಲ. ಅವನಿಗೆ ಕೂಡಲೇ ರೋಷ ಉಕ್ಕಿತು. ತನ್ನನ್ನು

ನೂಕಿ ಕುಸುಮೆ ತುಂಬ ಅಪಮಾನ ಮಾಡಿದಳೆಂದು ಭ್ರಮಿಸಿದ. ಕುಸುಮೆಯ ಸೊಕ್ಕನ್ನು ಮುರಿಯಲು, ಅಮಲೇರಿದ ಸಲಗದಂತೆ, ಅವಳ ಮೇಲೆ ಬಿದ್ದು, ಅವಳ ಕೋಮಲ ಕಾಯವನ್ನು ಹಿಸುಕಿದ. ಅವನ ವಜ್ರಮುಷ್ಟಿಗೆ ಸಿಕ್ಕಿದ ಕುಸುಮೆ ತತ್ತರಿಸಿದಳು. ಇನ್ನು ತನ್ನ ಕಥೆ ಮುಗಿಯುತ್ತ ಬಂತೆಂದು ತಿಳಿಯಿತು. ಅವಳಿಗೆ ಅದೇನು ಹೊಳೆಯಿತೋ ! ಕೂಡಲೇ, ವಿಜಯಭದ್ರನ ಸೊಂಟಕ್ಕೆ ಸಿಕ್ಕಿಸಿದ್ದ ಖಡ್ಗವನ್ನು ಅವನಿಗೆ ತಿಳಿಯದಂತೆ ಹೊರಗೆಳೆದು ತನ್ನನ್ನು ಹೊತ್ತುಕೊಂಡು ಹೊರಟ ವಿಜಯಭದ್ರನ ತೋಳನ್ನು ಕಚ್ಚಿ ಛಂಗನೆ ಹಾರಿ, "ಪಾಪಿ ಸಾಯಿ !" ಎಂದೆನ್ನುತ್ತ ಅವನ ಎದೆಗೆ ಗುರಿ ಇಟ್ಟು ಚೂರಿಯನ್ನು ಎಸೆದಳು. ಆದರೆ ವಿಜಯಭದ್ರನ ಅದೃಷ್ಟದಿಂದ ಅದು ಗುರಿ ತಪ್ಪಿ, ಗೋಡೆಗೆ ಬಡಿಯಿತು. ವಿಜಯಭದ್ರ ಹಠಾತ್ತನೆ ನಡೆದ ಈ ಘಟನೆಯಿಂದ ಗಾಬರಿಗೊಂಡು, ಕ್ಷಣಕಾಲ ದಿಗ್ಭ್ರಮೆಗೊಂಡು ನಿಂತ! ಮರುಕ್ಷಣದಲ್ಲಿ ಕುಸುಮೆ ಗೋಡೆಯ ಬಳಿ ಬಿದ್ದಿದ್ದ ಆ ಖಡ್ಗವನ್ನು ಸಮೀಪಿಸಿ ಕೈಗೆ ತೆಗೆದು ಕೊಂಡುದನ್ನು ನೋಡಿ, ಅವಳಿಂದ ಅದನ್ನು ಕಿತ್ತುಕೊಳ್ಳಲು ಅವಳ ಮೇಲೆ ಬಿದ್ದ. ಆದರೆ ಈ ವೇಳೆಗೆ ಕಾರ್ಯ ಮಿಂಚಿಹೋಗಿತ್ತು. ಕುಸುಮೆ ತನ್ನ ಸಂಕಲ್ಪವನ್ನು ಈಡೇರಿಸಿಕೊಂಡುಬಿಟ್ಟಿದ್ದಳು. ವಿಜಯಭದ್ರನ ಕೈಗೆ ಕುಸುಮೆ ಸಿಗುವ ಮುನ್ನವೇ ಅವಳು ಅವನ ಕೈಯಿಂದ ಜಾರಿಕೊಂಡಿದ್ದಳು. ಆ ಹರಿತವಾದ ಖಡ್ಗ ಕುಸುಮೆಯ ಹೃದಯದಲ್ಲಿ ನೆಲಸಿ, ಅವಳನ್ನು ವಿಜಯಭದ್ರನ ಕೈಯಿಂದ—ಅವನ ಅತ್ಯಾಚಾರದಿಂದ—ಪಾರುಮಾಡಿತ್ತು. ಕಡೆಗೂ ಕುಸುಮೆ ವಿಜಯಭದ್ರನಿಗೆ ದಕ್ಕದೆ ಹೋದಳು. ಅವಳ ಘಾತುಕತನಕ್ಕೆ ವಿಜಯಭದ್ರನು ಕೆರಳಿ ಕೆಂಡವಾದ. ಅವನಿಗೆ ತಾನೇನು ಮಾಡುತ್ತಿರುವೆನೆಂಬುದು ತಿಳಿಯಲಿಲ್ಲ. ಸೇಡಿನ ಕೈಗೆ ಸಿಕ್ಕಿದ ಅವನ ಮನಸ್ಸು, ಕುಸುಮೆಯ ದೇಹದ ಮೇಲೆ ಪ್ರತೀಕಾರ ಬಯಸಿತು. ಅವನು ಒರೆಯಿಂದ ಕತ್ತಿಯನ್ನು ಸೆಳೆದು ಕುಸುಮೆಯ ಸುಂದರ, ಕೋಮಲ ಕಾಯ ವನ್ನು ಕೊಚ್ಚಿದ. ಅದನ್ನು ಹಿಡಿದೆಳೆದು ನಾಯಿ ನರಿಗಳಿಗೆ ಹಂಚುವಂತೆ ತುಂಡು ತುಂಡು ಮಾಡಿ, ತನ್ನ ಸೇಡನ್ನು ತೀರಿಸಿಕೊಂಡ.

ಇದನ್ನೆಲ್ಲ ಆ ಗೋಡೆಯ ಕಿಂಡಿಯಿಂದ ನೋಡುತ್ತಲಿದ್ದ ತಿಪ್ಪಾಜಿಗೆ, ಕುಸುಮೆ ಆತ್ಮಹತ್ಯಮಾಡಿಕೊಂಡು ನೆಲಕ್ಕೆ ಬಿದ್ದುದು ತಿಳಿಯಿತು. ಮುಂದೆ

ುದೊಂದೂ ಅವಳಿಗೆ ತಿಳಿಯಲಿಲ್ಲ. ಅವಳು ಕುಸುಮೆಯ ಸಾವಿಗಾಗಿ ತ್ತು ದುಃಖಿಸಲಿಲ್ಲ. ಕುಸುಮೆಯ ಸಾವು ಎಲ್ಲರ ಸಾವಿನಂತೆ ನಿಶ್ಚಿತವಾಗಿತ್ತು. ದರೂ ಅವಳದು ಎಂತಹ ಸಾವು?

ಕುಸುಮೆ ಕಡೆ ತನಕ ತಾನು ಪರಿಶುದ್ಧಳಾಗಿಯೇ ಉಳಿದಳು. ಅತ್ಯಾ ರಿಗೆ ಮಣಿಯದೆ ತಾನಾಗಿ ಸಾವನ್ನು ಅಪ್ಪಿದ ಧೀರೆ! ಗೋವಿಂದರಾಜನಿಗೆ ೕಸಲಾದ ದೇಹವನ್ನು ಅಪವಿತ್ರಗೊಳಿಸಲಿಲ್ಲ. ಕಡೆ ತನಕ ಅವನ ಪ್ರೇಮದ ಡರನ್ನು ನಂದಿಸಲಿಲ್ಲ. ಅಂತಹ ದಿವ್ಯ ಪ್ರೇಮ ಅವಳದು! ತಾನು ಮಿಸಿದ ವ್ಯಕ್ತಿಯನ್ನೇ ತನ್ನ ಸಕಲ ಸೌಭಾಗ್ಯವನ್ನೇ ಬಲಿ ಇತ್ತು, ಕಡೆ ಕ ಆ ಪ್ರೇಮದ ಪ್ರಣತೆ ನಂದದಂತೆ ನಿಷ್ಠೆಯ ತೈಲವೆರೆಯುತ್ತ ಸಾವನ್ನು ಪ್ಪಿದ್ದಳು. ಅವಳು ಎಂತಹ ಪತಿವ್ರತೆಯರಿಗೂ ಕಡಮೆಯಲ್ಲ. ಅದು ಕಾಲಕ್ಕೂ ಆದರ್ಶವಾಗಿ ಉಳಿಯಬಲ್ಲ ಅಮರ ಪ್ರೇಮ! ಇಂಥ ಪ್ರೇಮ ದ ತನ್ನ ಜೀವನವನ್ನು ಉಜ್ವಲಗೊಳಿಸಿದ ಕುಸುಮೆಗಾಗಿ ಯಾಕೆ ಃಖಿಸಬೇಕು, ಎಂದುಕೊಂಡಳು ತಿಪ್ಪಾಜಿ.

ಕುಸುಮೆ ಸತ್ತು ಸ್ವರ್ಗ ಸೇರಿದಳು.

ಅಂಥಹ ಅಪೂರ್ವ ರತ್ನವನ್ನು ಕಳೆದುಕೊಂಡ ತಾನು ನಿರ್ಭಾಗ್ಯ ದುಕೊಂಡಳು ತಿಪ್ಪಾಜಿ.

ತಿಪ್ಪಾಜಿ ಅಳಲಿಲ್ಲ. ಮಗಳಿಗಾಗಿ ರೋದಿಸಲಿಲ್ಲ. ಅವಳು ಕಲ್ಲು ಗ್ರಹದಂತೆ ಆ ಕೋಣೆಯಲ್ಲಿ ನಡೆಯುತ್ತಿದ್ದ ಹೃದಯವಿದ್ರಾವಕ ದೃಶ್ಯ ನ್ನು ನೋಡುತ್ತಾ ಮೈಮರೆತಳು. ಅವಳು ಮೈ ತಿಳಿದೇಳುವ ವೇಳೆಗೆ, ಳನ್ನು ಭರಮನಾಯಕ ಎಳೆದುಕೊಂಡು ಹೋಗಿ ವಿಜಯಭದ್ರನ ಸಮ್ಮುಖ ನಿಲ್ಲಿಸಿದ್ದ! ವಿಜಯಭದ್ರನು ಕುಸುಮೆಯ ಮೇಲೆ ಸೇಡು ತೀರಿಸಿ ಂಡುದು ಸಾಲದೆ—ತಿಪ್ಪಾಜಿಯ ಮೇಲೆ ಈಗ ಸೇಡು ತೀರಿಸಿಕೊಳ್ಳಲು ಳಭೈರವನಂತೆ ನಿಂತಿದ್ದ. ಕುಸುಮೆ ತನಗೆ ಮಣಿಯದೆ ಯಾವ ಗತಿಯನ್ನು ುಭವಿಸಿದಳೆಂದು ಅವಳ ತಾಯಿಗೆ ತೋರಿಸುವುದೇ ಅವನ ಉದ್ದಿಶ್ಯ ಗಿತ್ತು. ಅವಳು ತನ್ನ ಮಗಳ ವಿಕಾರವಾದ ರೂಪವನ್ನು ನೋಡಿ ತೋಷಪಡಲೆಂದು ತಿಪ್ಪಾಜಿಯನ್ನು ಅಲ್ಲಿಗೆ ಕರೆಸಿದ್ದ!

ತಿಪ್ಪಾಜಿ ಛಿದ್ರಛಿದ್ರವಾಗಿ ಬಿದ್ದಿದ್ದ ಕುಸುಮೆಯ ದೇಹವನ್ನು

ನೋಡಲಾರದೆ ಮುಖ ಮುಚ್ಚಿಕೊಂಡಳು. ದುಃಖವನ್ನು ತಡೆಯಲಾರದೆ, ಬಾಯಿಗೆ ಬಂದಂತೆ ವಿಜಯಭದ್ರನನ್ನು ಬೈದಳು.

ಆದರೆ ಅವಳಿಗೆ ವಾಸ್ತವ ಸತ್ಯ ಅರಿವಾಗಲು ಹೆಚ್ಚು ಕಾಲ ಬೇಕಾಗ ಲಿಲ್ಲ. ಅವಳಿಗೆ ತನ್ನ ಮಗಳ ಈ ದುರ್ಮರಣಕ್ಕೆ ಕಾರಣವಾದ ವಿಜಯ ಭದ್ರನ ಮೇಲೆ ಭಯಂಕರ ಸಿಟ್ಟು ಬಂತು. ಅವನನ್ನು ಕೊಲ್ಲಲು ಮೇಲೆ ಬೀಳುವಂತೆ ಎದ್ದಳು. ಆದರೆ ವಿಜಯಭದ್ರ ಅಲ್ಲಿಂದ ಕಣ್ಮರೆಯಾಗಿದ್ದ. ಅವನು ತನ್ನ ಭಂಟನಾದ ಭರಮನಾಯಕನಿಗೆ ಏನನ್ನೋ ಹೇಳಿ ಕುದುರೆಯ ಮೇಲೆ ಹೊರಟು ಹೋಗಿದ್ದ.

ವಿಜಯಭದ್ರನ ಮೇಲೆ ಬೀಳಲು ಬಂದಿದ್ದ ತಿಪ್ಪಾಜಿಗೆ ಭರಮನಾಯ ಕನು ಎದುರಾದ. ಅವನ ಮೇಲಿನ ಸಿಟ್ಟು ಇವನ ಮೇಲೆ ಮೇರೆ ಮೀರಿ ಹರಿ ಯಿತು. ಭರಮನಾಯಕ ತಿಪ್ಪಾಜಿಯು ಅಸಹಾಯಕಳೆಂಬುದನ್ನು ನೋಡದೆ, ಅವಳನ್ನು ಗಾಯಗೊಳಿಸಿ, ನೆಲಕ್ಕೆ ಕೆಡಹಿದ. ತಿಪ್ಪಾಜಿಯ ತಲೆಗೆ ಕತ್ತಿಯ ಪೆಟ್ಟು ಬಿದ್ದು, ಅವಳು ಸತ್ತಂತೆ ನೆಲಕ್ಕೆ ಉರುಳಿದಳು. ಅವಳನ್ನು ನಿಜಕ್ಕೂ ಸತ್ತಿರುವಳೆಂದೇ ಭಾವಿಸಿ, ಅವಳ ದೇಹವನ್ನು ಏನುಮಾಡಬೇ ಕೆಂದು ಕ್ಷಣಕಾಲ ಭರಮನಾಯಕ ಆಲೋಚಿಸಿದ. ವಿಜಯಭದ್ರನು ಹೋಗುವಾಗ ಅವನಿಗೆ ಹೇಳಿಹೋಗಿದ್ದ : ತಿಪ್ಪಾಜಿಯನ್ನು ಆ ಸ್ಥಳದಲ್ಲಿಯೇ ಮುಗಿಸಿ, ಅವಳನ್ನೂ ಕುಸುಮಾಜಿಯ ಜೊತೆಯಲ್ಲಿ ಕಾಡಿನ ಮೃಗಗಳಿಗೆ ಚಲ್ಲಿಕೊಟ್ಟು ಹೋಗಬೇಕೆಂದು ತಿಳಿಸಿದ್ದ. ಅದರಂತೆ ಕುಸುಮಾಜಿ ಯೊಂದಿಗೆ ತಿಪ್ಪಾಜಿಯನ್ನೂ ಕಾಡಿನ ಮೃಗಗಳಿಗೆ ಚಲ್ಲಿಕೊಡಬೇಕೆಂದು— ಭರಮನಾಯಕನಿಗೆ ಅನಿಸಿತು. ತಿಪ್ಪಾಜಿಯ ದೇಹವನ್ನು ಮುಗಿಸುವ ಮುನ್ನ ಅವನಿಗೆ ಹಠಾತ್ತನೆ ಒಂದು ಆಲೋಚನೆ ಬಂದಿತು. ಅವಳನ್ನು ಒಂದು ಚೀಲ ದಲ್ಲಿ ಹಾಕಿ, ಬಳಿಯಲ್ಲಿಯೇ ಹರಿಯುತ್ತಿದ್ದ ಪಾಲಾರ್ ನದಿಗೆ ಹಾಕುವ ಮನ ಸ್ಸಾಯಿತು. ಅದರಂತೆ, ಹೆಣದ ಹಾಗೆ ಬಿದ್ದಿದ್ದ ತಿಪ್ಪಾಜಿಯ ದೇಹವನ್ನು ಒಂದು ಚೀಲದಲ್ಲಿ ತುರುಕಿ, ಅದರ ಬಾಯಿಯನ್ನು ಕಟ್ಟಿ ನದಿಯಲ್ಲಿ ಹಾಕಿ ಬಂದನು; ಅಲ್ಲಿಗೆ ಆ ತಾಯಿ ಮಕ್ಕಳ ಕಥೆ ಮುಗಿಯಿತೆಂದು ಅವರುತಿಳಿದರು.

# ೯

ಪಾಲಾರ್ ನದಿಯ ನೀರು ತುಂಬು ಹೊನಲಾಗಿ ಭೋರ್ಗರೆಯುತ್ತಾ ಹರಿಯುತ್ತಿತ್ತು. ಮಳೆಗಾಲದ ಅತಿವೃಷ್ಟಿಯಿಂದಾದ ನೀರು ಪ್ರವಾಹವಾಗಿ ನಾಲ್ಕು ಕಡೆಯಿಂದ ಬಂದು, ನದಿಯ ದಡವನ್ನು ಮುಳುಗಿಸಿ, ಹರಿಯುತ್ತಿತ್ತು. ಸಾಮಾನ್ಯವಾಗಿ ನಿರ್ಭಯವಾಗಿ ನದಿ ದಾಟುತ್ತಿದ್ದವರಿಗೂ ನದಿಯ ಇಂದಿನ ಅಬ್ಬರವನ್ನು ಕಂಡು ನದಿಗೆ ಕಾಲು ಇಡಲು ಹೆದರಿಕೆಯಾಗುತ್ತಿತ್ತು. ಪ್ರವಾಹದ ಸೆಳೆತ ಅಷ್ಟು ಹೆಚ್ಚಾಗಿತ್ತು. ಪ್ರವಾಹದೊಂದಿಗೆ ಅನೇಕ ಗಿಡಮರಗಳೂ ಮನೆಮಾರುಗಳೂ ಕೊಚ್ಚಿಕೊಂಡು ಬರುತ್ತಿದ್ದುವು. ಈ ಬಾರಿ ಪ್ರವಾಹದಿಂದ ಎರಡು ಗ್ರಾಮಗಳು ಕೊಚ್ಚಿ ಹೋದುವಂತೆ. ಊರಿನ ಜನರನ್ನು ನಿರ್ಗತಿಕರನ್ನಾಗಿ ಮಾಡಿತಂತೆ. ಇಂತಹ ಪ್ರವಾಹದಲ್ಲಿ ನದಿಯ ದಡದಲ್ಲಿಯೇ ಇದ್ದ ಸುರಪುರವು ನೀರಿನಲ್ಲಿ ಕೊಚ್ಚಿ ಹೋಗದೆ ಇದ್ದುದು ಹೆಚ್ಚು. ಅದು ಒಂದು ದಿಬ್ಬದ ಮೇಲೆ ಇರುವುದರಿಂದ ಪಾಲಾರ್ ನದಿಯ ನೀರು ಅದರ ತಂಟೆಗೆ ಹೋಗಿರಲಿಲ್ಲ.

ಸುರಪುರವು ನದಿಯ ದಂಡೆಯ ಒಂದು ಸಣ್ಣ ಹಳ್ಳಿ. ಸುಮಾರು ಐನೂರು ಮಂದಿ ಜನಸಂಖ್ಯೆ ಇದ್ದರೆ ಹೆಚ್ಚು. ಇಲ್ಲಿ ಇರುವವರೆಲ್ಲ ಸಾಮಾನ್ಯವಾಗಿ ಬೆಸ್ತರು; ಕೂಲಿಕಾರರು. ಎಲ್ಲೋ ಒಬ್ಬಿಬ್ಬರು ಮಾತ್ರ ಅನುಕೂಲವಂತರಿದ್ದರು. ಉಳಿದವರೆಲ್ಲ ಸಾಮಾನ್ಯವಾಗಿ ಕೂಲಿಯನ್ನು ನಂಬಿಕೊಂಡು ಹೊಟ್ಟೆ ಹೊರೆಯುತ್ತಿದ್ದರು.

ಚಂಗಪ್ಪ ಇಂತಹ ಬಡಕುಟುಂಬಗಳಲ್ಲಿ ಒಬ್ಬ. ಅವನು ಬೆಸ್ತರವನು. ಅವನ ಕಸಬು ಅಂಬಿಗನ ಕೆಲಸ. ಅಂದರೆ ಹೊಳೆಯನ್ನು ದಾಟಿಸುವುದು. ಸಾಮಾನ್ಯವಾಗಿ ಬೇಸಗೆಯಲ್ಲಿ ಹೊಳೆಯಲ್ಲಿ ಹೆಚ್ಚಿಗೆ ನೀರು ಇರುತ್ತಿರಲಿಲ್ಲ. ಆಗ ಜನರು ಹೊಳೆಯನ್ನು ನಡೆದೇ ಹಾಯುತ್ತಿದ್ದರು. ಅಂತಹವರ ಸಲುವಾಗಿ ದೋಣಿ ಇರಲಿಲ್ಲವಾದರೂ ಸಾಮಾನುಗಳನ್ನು ನೀರಿನ ಮೇಲೆ ಸಾಗಬೇಕಾದ ಪ್ರಸಂಗ ಬಂದಾಗ ಚಂಗಪ್ಪನ ದೋಣಿ ಉಪಯೋಗಕ್ಕೆ ಬೀಳುತ್ತಿತ್ತು. ಮಳೆಗಾಲದಲ್ಲಂತೂ ದೋಣಿಗೆ ಸಾಮಾನ್ಯವಾಗಿ ಬಿಡುವು ಇರುತ್ತಿರ

ಲಿಲ್ಲ. ಹೀಗೆ ವರ್ಷದ ಎಲ್ಲ ಕಾಲದಲ್ಲಿ ಅವನು ಪಾಲಾರ್ ನದಿಯನ್ನು ನಂಬಿಕೊಂಡಿದ್ದ. ಇದರಿಂದ ಅವನ ಕಿರು ಸಂಸಾರದ ಹೊಟ್ಟೆ ಹೇಗೋ ಹೊರೆಯ ಬಹುದಾಗಿತ್ತು.

ಈಗ ಚಂಗಪ್ಪ ದೋಣಿಯನ್ನು ನಂಬಿಕೊಂಡು ಕೂತಿರಲಿಲ್ಲ. ಅವನ ಮಗನು ವಯಸ್ಸಿಗೆ ಬರುವ ತನಕ ದೋಣಿಯನ್ನು ಅವನು ಜೀವನೋಪಾಯಕ್ಕೆ ಆಶ್ರಯಸಿದ್ದ. ಈಗ ಮಗ ಚಲ್ಲಂ ದೊಡ್ಡವನಾಗಿದ್ದ. ಅವನು ದೃಢಕಾಯನಾದ ಕಟ್ಟಾಳು. ಒಮ್ಮೊಮ್ಮೆ ತಂದೆಗೆ ದೋಣಿ ನಡಸುವುದರಲ್ಲೂ ಅವನು ನೆರವಾಗುತ್ತಿದ್ದ. ಮತ್ತೆ ಕೆಲವು ವೇಳೆಯಲ್ಲಿ, ಹಳ್ಳಿಯ ಜಮೀನುದಾರರಿಂದ ಒಂದೆರಡು ತುಂಡು ಗದ್ದೆಯನ್ನು ಗೇಣಿಗೆ ತೆಗೆದುಕೊಂಡು ಅದನ್ನು ಬೇಸಾಯಮಾಡುತ್ತಿದ್ದ. ತನ್ನ ವಿರಾಮ ಕಾಲದಲ್ಲಿ, ದೋಣಿಗೆ ಕೆಲಸವಿಲ್ಲದೆ ಇರುವಾಗ, ಮೀನು ಷಿಕಾರಿಯಂತೂ ಇದ್ದೇ ಇರುತ್ತಿತ್ತು. ಅದು ಅವನ ಪ್ರಿಯವಾದ ಬೇಟೆಯೂ ಹೌದು. ಮನೆಗೆ ತರಕಾರಿಯನ್ನು ಒದಗಿಸುವ ಹವ್ಯಾಸ್ಯವೂ ಹೌದು.

ಚಂಗಪ್ಪನ ಸಂಸಾರವೆಲ್ಲ ಮೂವರಲ್ಲಿ ಮುಗಿದು ಹೋಗಿತ್ತು. ಮನೆಯಲ್ಲಿ ಅವನು, ಅವನ ಮಗ ಚಲ್ಲಂ ಮತ್ತು ಲಚ್ಚಿ ಇಷ್ಟೇ ಜನ. ಚಂಗಪ್ಪನ ಪತ್ನಿ, ಲಚ್ಚಿ ಇನ್ನೂ ಮಗುವಾಗಿರುವಾಗಲೇ ಅವರಿಬ್ಬರನ್ನು ತಬ್ಬಲಿ ಮಾಡಿ ತೀರಿಕೊಂಡಿದ್ದಳು. ಆಗಲಾಯಿತು ಮಕ್ಕಳನ್ನು ಜೋಪಾನಮಾಡುವ ಜವಾಬ್ದಾರಿ ಚಂಗಪ್ಪನ ಹೆಗಲಿಗೆ ಬಿದ್ದಿತ್ತು. ಅವನು ಅದನ್ನು ತುಂಬ ಶ್ರದ್ಧೆಯಿಂದಲೇ ನಿರ್ವಹಿಸಿದ್ದ. ಈಗ ಚಂಗಪ್ಪನಿಗೆ ವಯಸ್ಸು ಆಗಿದೆ. ಅವನಿಗೆ ತನ್ನ ಮಕ್ಕಳ ನೆನಪು ಎಂತಹ ಅಮೂಲ್ಯವಸ್ತು ಎಂದು ಈಗ ಮನವರಿಕೆಯಾಗಿದೆ. ಮಗನು ಈಗ ನಡುಹರೆಯದಲ್ಲಿದ್ದಾನೆ. ಮನೆಯ ಬಹುಮಟ್ಟಿನ ಸಂಪಾದನೆ ಅವನದೇ. ಅವನು ತಂದುದನ್ನು ಒಪ್ಪವಾಗಿ ಅಡಿಗೆಮಾಡುವುದರಿಂದ ತೊಡಗಿ ತಂದೆ ಮತ್ತು ಅಣ್ಣಂದಿರ ಯೋಗಕ್ಷೇಮದ ತನಕ ಎಲ್ಲ ಜವಾಬ್ದಾರಿಯನ್ನೂ ಲಚ್ಚಿ ವಹಿಸಿದ್ದಾಳೆ. ಅವಳೀಗ ಹರೆಯದ ಯುವತಿ—ಸುಮಾರು ಇಪ್ಪತ್ತರ ಪ್ರಾಯ. ಅವಳಿಗೆ ಈಗ ಮದುವೆಯಾಗಬೇಕು. ಆದರೆ ಮದುವೆಮಾಡಿಬಿಟ್ಟರೆ ಮಗಳು ತನ್ನಿಂದ ಹೊರಗೆ ಹೋಗುವಳೆಂದು ತಂದೆ, ಇನ್ನೂ ಅವಳ ಮದುವೆಯನ್ನು ಮುಂದೆ ತಳ್ಳುತ್ತಾ ಬಂದಿದ್ದಾನೆ. ಅವನ

ಉದ್ದಿಶ್ಯ ಲಚ್ಚಿಯನ್ನು ಅಂತಿಂತಹ ಮನೆಗೆ ಕೊಡಲೇ ಬಾರದು. ಉಣ್ಣಲು ತಿನ್ನಲು ಇಲ್ಲದಿದ್ದರೂ ಚಿಂತೆಯಿಲ್ಲ. ಯೋಗ್ಯನಾದ ಯುವಕನಿಗೆ ಅವಳನ್ನು ಮದುವೆ ಮಾಡಿಕೊಟ್ಟು ತನ್ನ ಮನೆಯಲ್ಲಿಯೇ ಇಟ್ಟುಕೊಳ್ಳಬೇಕೆಂಬುದು ಚಂಗಪ್ಪನ ಆಸೆ. ಇದರ ಜೊತೆಗೆ ಒಮ್ಮೊಮ್ಮೆ ತನ್ನ ಮಗನ ಮದುವೆಯ ಆಸೆಯೂ ಆಗುತ್ತದೆ. ಅವನ ಮಡದಿ ಮೊಮ್ಮಕ್ಕಳ ಕಲ್ಪನೆಯೂ ಬರುತ್ತದೆ. ಅವರಿಗೂ ತನ್ನ ಮಗಳು ಅಳಿಯಂದಿರಿಗೂ ಸರಿಹೋಗದೆ ಇದ್ದರೆ?–ಎನ್ನುವ ಭೀತಿಯೂ ಉಂಟಾಗುತ್ತದೆ. ಅದಕ್ಕೆ ಈಗಿನಿಂದಲೇ ಅವನು ಹಂಚಿಕೆ ತೆಗೆದಿದ್ದಾನೆ. ಮಗನಿಗೆ ಒಳ್ಳೆಯ ಕಡೆಯಿಂದ ಹೆಣ್ಣು ತಂದು, ಮಗ ಸೊಸೆಯರನ್ನು ತನ್ನ ಕಣ್ಣಮುಂದೆಯೇ ಬೇರೆ ಮನೆಮಾಡಿ ನಿಲ್ಲಿಸುವ ಆಲೋಚನೆ. ತಾನು. ಮಗಳು ಅಳಿಯನ ಜೊತೆಗೆ ತನ್ನ ವೃದ್ಧಾಪ್ಯವನ್ನು ಕಳೆಯುವ ಆಲೋಚನೆ, ಇದನ್ನೆಲ್ಲ ಕುರಿತು ತನ್ನ ಮಗ ಮತ್ತು ಮಗಳಿಗೆ ಕಳೆದ ಹತ್ತುವರ್ಷಗಳಿಂದ ಹೇಳುತ್ತ ಬಂದಿದ್ದಾನೆ. ಅವರ ಕೈಯಲ್ಲಿ 'ಮರುಳು' 'ಹುಚ್ಚು' 'ಕನಸು' ಎಂದು ಹೀಯಾಳಿಸಿಕೊಂಡೂ ಇದ್ದಾನೆ. ಆದರೆ ತನ್ನ ಕನಸುಗಳೆಲ್ಲ ಕೇವಲ ಅರ್ಥವಿಲ್ಲದ ಅಸಾಧ್ಯವಾದ ಕನಸಲ್ಲವೆಂಬುದು ಅವನಿಗೆ ತಿಳಿದಿದೆ. ಹುಡುಗರ ಜೊತೆಯಲ್ಲೇನು, ಚರ್ಚೆ ಎಂದು ಅವನು ಹುಡುಗರ ಮಾತನ್ನು ಕೇಳಿ ನಕ್ಕುಬಿಡುತ್ತಾನೆ....

ಹೀಗೆಯೇ ಅವನ ದಿನಗಳು ಸರಿದಿವೆ.

ಚಂಗಪ್ಪನೆಂದರೆ ಊರಿನವರಿಗೆಲ್ಲ ತುಂಬಾ ಪ್ರಾಣ. ಅವನ ವಯಸ್ಸಿಗೆ ಅವರು ಕೊಡುವ ಮರ್ಯಾದೆಗಿಂತಲೂ ಅವನ ತಿಳಿವಳಿಕೆಗೆ ಹೆಚ್ಚು ಗೌರವ ಕೊಡುತ್ತಿದ್ದರು. ಅವನ ತಿಳಿವಳಿಕೆ—ನ್ಯಾಯಬದ್ಧ ತೀರ್ಪುಗಳನ್ನು ಮೆಚ್ಚಿಕೊಂಡ ಹಳ್ಳಿಗರಿಗೆಲ್ಲ ಅವನು ಊರಿನ ಹಿರಿಯನಾಗಿದ್ದ. ಅವನನ್ನು ಕೇಳದೆ ಯಾವ ಪಂಚಾಯತಿ ಇಲ್ಲ. ದೊಡ್ಡ ಜಮೀನುದಾರರೂ, ಸಾಹುಕಾರರೆನಿಸಿಕೊಂಡಿದ್ದವರೂ ಚಂಗಪ್ಪನ ಮಾತು ಬಂದಾಗ, ಅವನ ಅಭಿಪ್ರಾಯಕ್ಕೆ ಬೆಲೆ ಕೊಡುತ್ತಿದ್ದರು.

ಅವನ ಮಕ್ಕಳಾದ ಚಲ್ಲಂ ಮತ್ತು ಲಚ್ಚಿಯರೂ ತಮ್ಮ ರೀತಿಯಲ್ಲೇ ಊರಿನ ಎಲ್ಲ ಗಂಡು, ಹೆಣ್ಣುಗಳಿಗೆ ಬೇಕಾದವರಾಗಿದ್ದರು.

ಮೊದಲಿನಿಂದಲೂ ಲಚ್ಚಿ ಒಂದು ತರಹದ ಹುಡುಗಿ. ಅವಳು ಬಡಬಡನೆ

ಮಾತನಾಡಿದುದನ್ನು ಊರಿನಲ್ಲಿ ಯಾರೂ ಕೇಳಿ ಅರಿಯರು. ಸ್ವಯಂ ಚಂಗಪ್ಪನೇ ಕೇಳಿಲ್ಲವೆಂದ ಮೇಲೆ ಇನ್ನೇನು ಲಚ್ಚಿ ಮಾತು ಅರಿಯದ ಮುಗ್ಧೆ ಎಂಬ ಮಾತಿಗೆ ಪಾತ್ರಳಾಗಿದ್ದಳು. ಬಾಲ್ಯದಲ್ಲೇ ಅವಳಿಗೆ ತಾಯಿ ಇರಲಿಲ್ಲ, ತಂದೆ ಜೀವನ ನಿರ್ವಹಣಕ್ಕೆ ದೋಣಿಯನ್ನು ನಂಬಿ ಕುಳಿತಿದ್ದ. ಅವನಿಗೆ ತನ್ನವರೆನ್ನದ ಬೇರೆ ಹೆಣ್ಣು ದಿಕ್ಕರಲಿಲ್ಲ. ಸಣ್ಣ ಮಗುವನ್ನು ನೋಡಿಕೊಳ್ಳುವವರಿಲ್ಲದ ಮೇಲೆ ಮನೆಯಲ್ಲಿ ಹೇಗೆ ಬಿಡುವುದು ಎಂದು ಮಗಳನ್ನು ದೋಣಿಯಲ್ಲಿ ಕೂಡಿಸಿಕೊಂಡು, ತನ್ನ ವೃತ್ತಿಯನ್ನು ನಡಸಿಕೊಳ್ಳುವುದರ ಜೊತೆಗೆ ಮಗಳನ್ನೂ ಸಾಕಿ ದೊಡ್ಡವಳನ್ನಾಗಿ ಮಾಡಿದ್ದ. ಹೀಗಾಗಿ ಲಚ್ಚಿ ಹತ್ತು ವರುಷ ಕಾಲ ದೋಣಿಯಲ್ಲಿಯೇ ಬೆಳೆದಳೆನ್ನಬೇಕು. ದೋಣಿಯಲ್ಲೇ ಬೆಳೆದ ಅವಳಿಗೆ—ಮಾತಿಗೆ ಯಾರು ಸಿಕ್ಕಬೇಕು. ಮಾತನಾಡಬೇಕಾದರೆ ತಂದೆ. ಅವನು ಪ್ರಯಾಣಿಕರೊಂದಿಗೊ ಅಥವಾ ತನ್ನ ಇತರ ಚಿಂತೆಗಳಲ್ಲೋ ಮುಳುಗಿದ್ದರೆ, ಅವಳಿಗೆ ಅವಳೇ ಗೆಳತಿ. ಬೇಸರವಾದರೆ ನದಿಯನ್ನು ನೋಡುತ್ತ ಕುಳಿತುಕೊಳ್ಳುತ್ತಿದ್ದಳು. ನದಿಯ ನೀರು ಅವಳ ತಾಯಿಯಾಗಿ ಗೆಳತಿಯಾಗಿ ಅವಳೊಡನೆ ಮಾತನಾಡುತ್ತಿತ್ತು. ಅವಳ ಚಿರಂತರ ಸಂಗಾತಿಯಾಗಿ ಅವಳಿಗೆ ಸೃಷ್ಟಿಯ ಅನೇಕ ಅದ್ಭುತಗಳ ರಹಸ್ಯವನ್ನು ಬೋಧಿಸುತ್ತಿತ್ತು. ಅವಳು ಮೌನದ ಮಹಾ ಪಾಠವನ್ನು ಕಲಿತುದು ಆಗಲೇ. ಅಲ್ಲಿಂದಾಚೆಗೆ ಅವಳು ಮಾತು ಆಡುವುದೇ ಕಡಮೆಯಾಗಿತ್ತು. ಮಾತನಾಡಲು ಬರುವುದೇ ಇಲ್ಲವೇನೊ, ಅವಳು ಮೂಗಿ ಏನೋ ಎನಿಸುವ ಮಟ್ಟಿಗೆ ಅವಳ ಮೌನ ಇರುತ್ತಿತ್ತು. ಇದು ಒಂದು ರೀತಿಯಲ್ಲಿ ನದಿ ಕಲಿಸಿಕೊಟ್ಟ ಶ್ರೇಷ್ಠ ಪಾಠವಾದರೂ ಲೋಕದ ಕಣ್ಣಿನಲ್ಲಿ ಒಂದು ಅವಗುಣವಾಗಿ ಪರಿಣಮಿಸಿತ್ತು. ಹುಡುಗಿಯನ್ನು ಅವರೆಲ್ಲರೂ ಮೂಕಿ ಎಂದೇ ಕರೆಯಲು ಆರಂಭಿಸಿದ್ದರು. ಇದರಿಂದಾಗಿ, 'ತಂಗಿ ಮೂಕಿಯಲ್ಲ—ಮಾತನಾಡಬಲ್ಲಳು. ಆದರೆ ಅವಳಿಗೆ ಮಾತು ಬೇಕಿಲ್ಲ ಎಂಬುದನ್ನು ಸಿದ್ಧಪಡಿಸಿ ತೋರಿಸುವುದರಲ್ಲಿ, ಈ ಕೆಲವು ವರ್ಷಗಳಿಂದ ಚಲ್ಲಂನ ವೇಳೆ ಸರಿಯುತ್ತಿತ್ತು. ಅವನು ತಂಗಿಗೆ ಮಾತು ಕಲಿಸುವುದರಲ್ಲಿ ತನ್ನ ಮಾತನಾಡುವ ಚಪಲವನ್ನು ತೀರಿಸಿಕೊಳ್ಳುತ್ತಿದ್ದ. ಅಂತೂ ನೋಡಿದವರ ಕಣ್ಣಿಗೆ ಅವರಿಬ್ಬರೂ ಆದರ್ಶ ಅಣ್ಣ ತಂಗಿಯರು.

ಲಚ್ಚಿಗೆ ಹತ್ತು ವರ್ಷ ದಾಟಿದ ಕೂಡಲೇ ಅವಳ ಸ್ಥಾನ ದೋಣಿ
ಬಂದ ಮನೆಗೆ ವರ್ಗಾಯಿಸಲ್ಪಟ್ಟಿತು. ಅಲ್ಲಿಂದಾಚೆಗೆ, ಮನೆಯ ಎಲ್ಲ
ಹಕೃತ್ಯ ಅವಳ ತಲೆಯ ಮೇಲೆ ಬಿದ್ದಿತ್ತು. ಅವಳೇ ಅಡಿಗೆ ಮಾಡುವುದು.
ನೆ ಕೆಲಸಗಳನ್ನೆಲ್ಲ ತುಂಬ ಶ್ರದ್ಧೆಯಿಂದ, ಜಾಣ್ಮೆಯಿಂದ ಮಾಡಿ ಈ
ಯಸ್ಸಿಗಾಗಲೇ, ಒಂದು ಜೀವಮಾನದ ಗೃಹಕೃತ್ಯದ ಅನುಭವವನ್ನು
ಂಪಾದಿಸಿಕೊಂಡಿದ್ದಳು.

ಇವಳ ಗೃಹಕೃತ್ಯವೆಲ್ಲ ಅಡಿಗೆ ಮಾಡಿ, ಮನೆಯನ್ನು ಗುಡಿಸಿ, ತಂದೆ
ಣ್ಣಂದಿರಿಗೆ ಊಟಕ್ಕೆ ಇಟ್ಟು, ಪಾತ್ರೆ ತೊಳೆಯುವುದು, ಬಟ್ಟೆ ಒಗೆಯು
ದು—ಕಾಳುಕಡ್ಡಿಗಳನ್ನು ಒಪ್ಪಗೊಳಿಸುವುದು—ಇವುಗಳಲ್ಲಿ ಮುಗಿದು
ೋಗುತ್ತಿತ್ತು. ಇವುಗಳು ಅಭ್ಯಾಸಬಲದಿಂದ ತನಗೆ ತಾನೇ ನಡೆದು
ೋಗುತ್ತಿತ್ತು. ಅವಳಿಗೆ ದಿನದ ಬಹುಭಾಗ ವಿರಾಮ ದೊರೆಯುತ್ತಿತ್ತು.
ಃ ವಿರಾಮಕಾಲದಲ್ಲಿ ಅವಳಿಗೆ ಹೊತ್ತು ಕಳೆಯುವುದು ಹೇಗೆಂದು
ಮಸ್ಯೆಯಾಗುತ್ತಿತ್ತು. ಅದಕ್ಕೆ ಅವಳು ಒಂದು ಉಪಾಯ ಕಂಡುಹಿಡಿ
ದ್ದಳು. ಕೇವಲ ಹಟ್ಟಿಯಿಂದ ನಾಲ್ಕು ಹೆಜ್ಜೆ ದೂರದಲ್ಲಿ ಹರಿಯುತ್ತಿದ್ದ
ದಿಯ ಬಳಿ ಒಂದು ಕಲ್ಲಿನ ಮೇಲೆ ಕುಳಿತು ನೀರಿನಲ್ಲಿ ಕಾಲು ಚಾಚಿ
ೊಂಡು, ಕಾಡು ಲತೆಗಳ ಜೊತೆಯಲ್ಲೋ, ಹಕ್ಕಿಗಳ ಜೊತೆಯಲ್ಲೋ,
ಡುತ್ತ, ಹಾಡುತ್ತ ಕಾಲ ಕಳೆಯುತ್ತಿದ್ದಳು. ಹೀಗೆ ಕುಳಿತು ಅನೇಕ
ಂಟೆಗಳನ್ನು ದಿನಗಳನ್ನು ಕಳೆಯಬಲ್ಲಳು. ಒಮ್ಮೊಮ್ಮೆ ಸುತ್ತಲೂ ಬೆಳೆ
ರುವ ವನಸುಮಗಳನ್ನು ಆರಿಸಿ, ಅವುಗಳನ್ನು ಮಾಲೆ ಕಟ್ಟಿ ಮುಡಿದು
ೊಂಡು, ನೀರಿನಲ್ಲಿನ ಪ್ರತಿರೂಪವನ್ನು ನೋಡುತ್ತ ಮೈಮರೆಯುತ್ತಿದ್ದಳು.
ಗ ಅವಳೊಬ್ಬಳು ವನದೇವಿಯಂತೆ ಕಂಗೊಳಿಸುತ್ತಿದ್ದಳು.

ಇದೂ ಬೇಸರವಾಯಿತೆಂದರೆ ಮನೆಗೆ ಬಂದು—ತಂದೆಯು ಬಹಳ ಶ್ರದ್ಧಾ
ಕ್ತಿಯಿಂದ ಓದುತ್ತಿದ್ದ ತೆಲುಗು ರಾಮಾಯಣದ ಓಲೆಗರಿ ಪ್ರತಿಯನ್ನು
ದಿಕೊಳ್ಳುತ್ತಿದ್ದಳು. ಅದೂ ತನ್ನಲ್ಲಿಯೇ. ಅಲ್ಲಿನ ಕಥೆಯನ್ನು
ೂರು ಬಾರಿ ಓದಿದ್ದರೂ ಮತ್ತೆ ಮತ್ತೆ ಓದಲು ತೊಡಗಿದರೆ ಅವಳು ಮೈ
ರೆತು ಕೂತುಕೊಳ್ಳುತ್ತಿದ್ದಳು. ಹೀಗೆ ಯಾವ ಕಾಲದಲ್ಲೂ ಅವಳು
ಂದು ಬಗೆಯ ತನ್ಮಯತೆ ವ್ಯಕ್ತಪಡಿಸುತ್ತಿದ್ದುದರಿಂದ, ಇದೇ ಚಂಗಪ್ಪ

ನಿಗೂ, ಚಲ್ಲಂಗೂ ಚಿಂತೆಗೆ ಕಾರಣವಾಗಿತ್ತು—ಅವರು ಎದುರಿಗೆ ಹೇಳ ದಿದ್ದರೂ, ವಯಸ್ಸಾದ ಹಾಗೆ, ಮಗಳು ವ್ಯವಹಾರದಲ್ಲಿ ಪೆದ್ದಳಾಗು ತ್ತಿರುವಳೆಂದು ಅವರ ಭಾವನೆ. ಅವಳ ಸರಳತೆ, ಮುಗ್ಧತೆಗಳನ್ನು ಅವರು ಮೆಚ್ಚಿಕೊಂಡರೂ—ಪ್ರಪಂಚದ ದೃಷ್ಟಿಯಲ್ಲಿ ಆಲೋಚಿಸಿದಾಗ ಅವುಗಳಿಂದ ಅವಳ ಜೀವನಕ್ಕೆ ಕೆಡುಕೇ ಆದೀತೆಂದು ಅಂಜಿಕೆ ಅನೇಕ ಬಾರಿ ಉಂಟಾಗುತ್ತಿತ್ತು. ಇದನ್ನು ಆಡಿ ತೋರಿಸಿದರೆ ಅವಳ ಮನಸ್ಸೆಲ್ಲಿ ನೋಯುವುದೋ ಎಂದು ಅವರು ಸುಮ್ಮನೆ ಇರುತ್ತಿದ್ದರು.

ಇಂದು ಸಂಜೆ ಸೂರ್ಯಾಸ್ತವಾದರೂ ಅಣ್ಣ ಮೀನು ಹಿಡಿಯಲು ನದಿಯ 'ಹೊಳೆಯ ಮುಖಕ್ಕೆ' ಹೋಗಿದ್ದವನು ಮನೆಗೆ ಹಿಂದಿರುಗಿ ಬರದೆ ಇದ್ದುದರಿಂದ, ಅಡಿಗೆಯ ಕೆಲಸವನ್ನು ಮುಗಿಸಿ, ಅಣ್ಣನಿಗಾಗಿ ಅವಳು ಇದಿರು ನೋಡುತ್ತ ನದಿಯ ದಂಡೆಯಲ್ಲಿ ಕುಳಿತಿದ್ದಳು. ತಂದೆಗೆ ಈಚೆಗೆ ಕೆಲವು ದಿನಗಳಿಂದ ಮೈಯಲ್ಲಿ ಹುಶಾರಿರಲಿಲ್ಲ. ಅವನು ಹಾಸಿಗೆ ಹಿಡಿದು ಮಲಗಿದ್ದುದರಿಂದ, ಎಲ್ಲ ಕೆಲಸಗಳೂ ಚಲ್ಲಂನ ಮೇಲೆಯೇ ಬಿದ್ದಿತ್ತು. ಅವನು ತನ್ನ ವ್ಯವಸಾಯದ ಜೊತೆಗೆ ಅಂಬಿಗತನವನ್ನೂ ನಿರ್ವಹಿಸಿಕೊಂಡು ಹೋಗು ತ್ತಿದ್ದ. ಇಂದು ನದಿಯನ್ನು ದಾಟಲು ಹೆಚ್ಚು ಮಂದಿ ಪ್ರಯಾಣಿಕರು ಇರಲಿಲ್ಲ. ಮನೆಯಲ್ಲಿ ಬೇರೆ ತರಕಾರಿ ಇಲ್ಲದುದರಿಂದಲೋ ಅಥವಾ ಅವನ ಬೇಟೆಯ ಚಟ ಕೆರಳಿತ್ತೋ ಅಂತೂ, ಅವನು ದೋಣಿಯನ್ನು ನಡಸಿಕೊಂಡು 'ಹೊಳೆಯ ಮುಖ'ಕ್ಕೆ ಹೋಗಿದ್ದ.

ಹೊಳೆಯ ಮುಖ ಇದ್ದುದು ನದಿಯ ಮೇಲ್ಭಾಗದಲ್ಲಿ—ಮನೆಗೆ ಸುಮಾರು ಒಂದು ಮೈಲಿ ದೂರದಲ್ಲಿ ಒಂದು ಸಣ್ಣ ಹೊಳೆ ಪಾಲಾರ್ ನದಿ ಯನ್ನು ಸೇರುತ್ತದೆ. ಅದಕ್ಕೆ ಸಮೀಪದಲ್ಲೆ ಮಾಲಿಂಗನ ಮಂಟಪ ಇರು ವುದು. ಅಲ್ಲಿ ಕಾರ್ತೀಕಮಾಸದಲ್ಲಿ ನಡೆಯುವ ಪೂಜೆಯಲ್ಲಿ ಚಂಗಪ್ಪನೂ ಮಗ ನೊಂದಿಗೆ ಭಾಗವಹಿಸುತ್ತಿದ್ದ. ಈ ಸಂಗಮ ಸ್ಥಳವನ್ನು "ಹೊಳೆಯ ಮುಖ"ವೆಂದು ಕರೆಯುತ್ತಿದ್ದರು. ಈ ಹೊಳೆಯ ಮುಖದಲ್ಲಿ ಮೀನುಗಳು ಸಂವೃದ್ಧಿಯಾಗಿ ಇದ್ದುವು. ಅನೇಕ ಬಗೆಯ ಮೀನುಗಳು ಅಲ್ಲಿನ ನೀರಿನಲ್ಲಿ ವಾಸಿಸುತ್ತಿದ್ದುವು. ಚಲ್ಲಂಗೆ ಬೇಸರವಾದರೆ, ಮೀನು ಹಿಡಿಯಬೇಕೆಂದು ಎನಿಸಿದರೆ, ದೋಣಿಯನ್ನು ನಡಸಿಕೊಂಡು ಇಲ್ಲಿಗೆ ಬಂದು ಮೀನು ಹಿಡಿಯು

ತ್ತಿದ್ದ. ಇಲ್ಲಿಗೆ ಬಂದು ಅವನೆಂದೂ ಬರಿಗೈಯಲ್ಲಿ ಹಿಂದಿರುಗುತ್ತಿದ್ದುದೇ ಇಲ್ಲ. ಇಲ್ಲಿಗೆ ಬಂದನೆಂದರೆ ಎಂಟು ಹತ್ತು ದಿನಗಳ ವರೆಗೆ ಸಂವೃದ್ಧಿಯಾಗುವಷ್ಟು ಮೀನಿನ ಬೇಟೆಯಾಗುತ್ತಿತ್ತು.

ಇಂದು ಮೀನಿನ ಬೇಟೆಯಾಡಲು ಮೂರು ಗಂಟೆಗೇ ಹೊರಟಿದ್ದ ಚಲ್ಲಂ ಸಂಜೆ ಸರಿದರೂ ಮನೆಗೆ ಬಂದಿರಲಿಲ್ಲ. ಆಕಾಶದಲ್ಲಿ ತಿಂಗಳ ಬೆಳಕು ಇದ್ದರೂ, ಈ ವೇಳೆಗೆ ಅವನು ಎಲ್ಲಿದ್ದರೂ ಮನೆಯನ್ನು ಸೇರಿಕೊಳ್ಳುತ್ತಿದ್ದ. ಅನಂತರ ಸಂಜೆಗತ್ತಲಿನಲ್ಲಿ ಮನೆಯವರೆಲ್ಲರೂ ಊಟಮಾಡಿ, ಕೆಲವು ಕಾಲ ಅದೂ ಇದೂ ಮಾತಿನಲ್ಲಿ ವೇಳೆ ಕಳೆದು ಮಲಗುತ್ತಿದ್ದರು. ದಿನವೆಲ್ಲ ದುಡಿದ ಅವರಿಗೆ ನಿದ್ರೆಯು ಅಪ್ಯಾಯಮಾನವಾದ ವಿಶ್ರಾಂತಿ.

ಇಂದು ಊಟದ ವೇಳೆಯಾದರೂ ಅಣ್ಣನು ಬರವೆ ಇದ್ದುದರಿಂದ, ಲಚ್ಚಿಗೆ ಕಳವಳವಾಗಿ ಅವಳು ನದಿಯ ದಂಡೆಯಲ್ಲಿ ಕುಳಿತು ನದಿಯ ಮೇಲ್ಭಾಗದಲ್ಲಿ ದೋಣಿಯ ಸುಳುವು ಇದೆ ಏನೋ ಎಂದು ಕುತೂಹಲದಿಂದ ನೋಡುತ್ತಿದ್ದಳು. ಅವಳ ಕುತೂಹಲಕ್ಕೆ ಸರಿಯಾಗಿ, ದೂರದಲ್ಲಿ ದೋಣಿಯೊಂದು ಬರುತ್ತಿರುವುದು ಕಾಣಿಸಿತು. ಅದು ಚಲ್ಲಂನ ದೋಣಿ ಎಂಬುದೂ ಸ್ಪಷ್ಟವಾಯಿತು. ದೋಣಿಯನ್ನು ಬೇಗಬೇಗನೆ ಹುಟ್ಟುಹಾಕಿಕೊಂಡು ಬರುವುದನ್ನು ಅರಿತು, ಅವನಿಗೂ ಮನೆಗೆ ಬರುವ ಆತುರವಾಗಿದೆ ಎಂದು ಬಗೆದಳು. ಅವಳು ದೋಣಿ ಬಂದುದನ್ನು ತಂದೆಗೆ ವರದಿ ಮಾಡಲು ಮನೆಯೊಳಕ್ಕೆ ಹೋಗಿ, ಮತ್ತೆ ಕೆಲವು ನಿಮಿಷ ಬಿಟ್ಟುಕೊಂಡು ಹೊರಗೆ ಬಂದಳು. ಈ ವೇಳೆಗೆ ದೋಣಿ ತನ್ನ ಸ್ವಸ್ಥಾನಕ್ಕೆ ಬಂದು ನಿಂತಿತು. ಅಣ್ಣ ತಂಗಿಯನ್ನು ಕೂಗಿ ಹೇಳಿ, ದೋಣಿಯ ಬಳಿಗೆ ಬರಲು ಹೇಳಿದ. ಬೋಣಿಯು ತುಂಬ ಮೀನಿನ ಬುಟ್ಟಿಗಳಿರಬಹುದೆಂದೂ, ಅವುಗಳನ್ನು ಇಳಿಸಿಕೊಳ್ಳಲು ತನ್ನನ್ನು ಅವನು ಕರೆಯುವನೆಂದೂ ಲಚ್ಚಿ ಭಾವಿಸಿದಳು. ಆದರೆ ಅವಳು ಬಂದು ನೋಡುತ್ತಾಳೆ! ದೋಣಿಯಲ್ಲಿ ಒಂದು ಹೆಣ್ಣಿನ ದೇಹವು ಗಾಯದಿಂದ, ವಿರೂಪಗೊಂಡು ಬಿದ್ದಿದೆ! ಬಟ್ಟೆಗಳು ಅಸ್ತವ್ಯಸ್ತವಾಗಿ ಹರಡಿದೆ. ಅವಳನ್ನು ದಡಕ್ಕೆ ಸಾಗಿಸಲೆಂದೇ ಚಲ್ಲಂ ತಂಗಿಯನ್ನು ಕರೆದುದು.

ಲಚ್ಚಿಗೆ ಆ ಹೆಣ್ಣಿನ ವಿಕಾರದ ದೇಹವನ್ನು ನೋಡಿ ಮೊದಲಿಗೆ ಹೆದರಿಕೆ, ಗಾಬರಿಗಳಾದುವು. ಅನಂತರ ಅವಳು ಬದುಕಿರುವಳೆಂದೂ—ಎಲ್ಲೋ

ಅಲ್ಪಸ್ವಲ್ಪ ಕುಟುಕು ಜೀವ ಉಳಿದಿರಬಹುದೆಂದೂ, ತಾವು ಸರಿಯಾದ ಔಷ ದೋಪಚಾರ ಮಾಡಿದರೆ ಅವಳು ಉಳಿಯುವ ಸಂಭವ ಉಂಟೆಂದೂ ಚಲ್ಲಂ ತಿಳಿಸಿದ ಮೇಲೆ, ಲಚ್ಚಿಗೆ ಹೆಣ್ಣಿಗೆ ಸಹಜವಾದ ಅಂತಃಕರಣ ಉಕ್ಕಿ, ಕೂಡಲೇ ಅವಳನ್ನು ಮನೆಗೆ ಸಾಗಿಸಿದಳು. ಅವಳಿಗೆ ಒಂದು ಹಾಸಿಗೆಯನ್ನು ಹರಡಿ, ಅವಳ ಸ್ಥಿತಿ ಕರುಣಾಜನಕವಾಗಿದ್ದುದರಿಂದ, ಕೂಡಲೇ ಹಳ್ಳಿಯಲ್ಲಿದ್ದ ಪಂಡಿತರ ಬಳಿಗೆ ಅಣ್ಣನನ್ನು ಅಟ್ಟಿದಳು. ಅವಳಿಗೆ ಈ ಹೆಣ್ಣು ಹೇಗೆ ಸಿಕ್ಕಿದ ಳೆಂದು ತಿಳಿಯುವ ಕುತೂಹಲಕ್ಕಿಂತ, ಈ ಹೆಣ್ಣಿಗೆ ಹೀಗೇಕೆ ಆಯಿತು, ಅವ ಳನ್ನು ಈ ಸ್ಥಿತಿಗೆ ತಂದ ಘಾತುಕರು ಯಾರು? ಇವಳು ಉಳಿದುಕೊಳ್ಳು ವಳೇ ?—ಇವೇ ಚಿಂತೆಗಳು ಕಾಡಿದುವು.

ಚಲ್ಲಂ ತಡಮಾಡದೆ ಹಳ್ಳಿಯ ವೈದ್ಯನನ್ನು ಕರೆತಂದ. ಅವನು ಆ ಹೆಣ್ಣಿನ ನಾಡಿ ಹಿಡಿದು, ಅವಳ ದೇಹದಲ್ಲಿ ಇನ್ನೂ ಅಲ್ಪಸ್ವಲ್ಪ ಪ್ರಾಣ ಉಳಿ ದಿದೆ ಎಂಬುದನ್ನು ಮನಗೊಂಡು ಯಾವುದೋ ನಾರುಬೇರುಗಳ ರಸವನ್ನು ತೆಗೆದು ಕುದಿಸಿ ಅದಕ್ಕೆ ಯಾವುದೋ ಚೂರ್ಣವನ್ನು ಬೆರಸಿ, ಕುಡಿಸಿದ. ಬೆಂದ ಬೂದಿಯನ್ನು ಅಂಗಾಲಿಗೆ ತಿಕ್ಕಿ ಶಾಖವನ್ನು ಕೊಡುತ್ತ ಬಂದ. ಮಧ್ಯ ರಾತ್ರಿಯ ವೇಳೆಗೆ ಅವಳಿಗೆ ಹೋದ ಜೀವ ಮರಳಿದಂತೆ ಆಗಿ, ಮೊದಲ ಬಾರಿಗೆ ಅವಳು ನೋವಿನ ಧ್ವನಿಯನ್ನು ಹೊರಡಿಸಿದಳು. ಇದನ್ನು ಕೇಳಿ ಆ ವೈದ್ಯ "ಇನ್ನು ಭಯವಿಲ್ಲ — ಉಳಿದುಕೊಳ್ಳುವಳು" ಎಂದು ತಿಳಿದ. ಅನಂತರವೇ ಎಲ್ಲರಿಗೂ ಅವಳು ಚಲ್ಲಂಗೆ ದೊರೆತ ಬಗೆಯನ್ನು ತಿಳಿಯುವ ಕುತೂಹಲ. ಇದುವರೆಗಾಗಲೇ, ಚಲ್ಲಂ ಅವಳು ತನಗೆ ಸಿಕ್ಕಿದ ರೀತಿಯನ್ನು ಕೆಲವು ಮಾತುಗಳಲ್ಲಿ ತಿಳಿಸಿದ್ದರೂ, ಅವನಿಗೆ ಎಲ್ಲವನ್ನೂ ವಿಸ್ತಾರವಾಗಿ ಹೇಳಲು ಮನಸ್ಸಿಗೆ ವ್ಯವಧಾನ ಉಂಟಾದುದು ಈಗಲೇ.

ಚಲ್ಲಂ ಹೇಳಿದ ಕಥೆಯನ್ನು ಅವರೆಲ್ಲರೂ ಕಿವಿನಿಮಿರಿಸಿ ಆಲಿಸಿದರು.

ಚಲ್ಲಂ ಆ ಮೀನಿನ ಶಿಕಾರಿಗೆಂದು, ಹೊಳೆಯ ಮುಖಕ್ಕೆ ಹೋಗಿದ್ದ ನಷ್ಟೆ? ಅವನು ದೋಣಿಯನ್ನು ದಡಕ್ಕೆ ಕಟ್ಟಿಹಾಕಿ, ಕೆಲವು ಕಾಡುಮೃಗಗಳ ಶಿಕಾರಿಯಾಗುವುದೇನೋ ಎಂದು—ಅವುಗಳಿಗಾಗಿ ಕಾದು ಕುಳಿತನಂತೆ. ಯಾವ ಮಿಗವೂ ಅವನ ಕಣ್ಣಿಗೆ ಬೀಳಲಿಲ್ಲ. ಕಡೆಗೆ ಬೇಸರವಾಗಿ, ಮೀನನ್ನು ಹಿಡಿಯಲು ಹೊಳೆಗೆ ದೋಣಿಯನ್ನು ನಡಸಿಕೊಂಡು ಹೋದಾಗ ನದಿಯ

ಮೇಲ್ಭಾಗದಿಂದ ಯಾವುದೋ ಒಂದು ಪದಾರ್ಥ ತೇಲುತ್ತ ಬರುವುದು ಕಾಣಿಸಿತು. ಅದು ಒಮ್ಮೆ ಮುಳುಗಿ, ಮತ್ತೆ ತೇಲಿ ನಿಧಾನವಾಗಿ ಬರುತ್ತಿತ್ತು. ಅದನ್ನು ನೋಡಿ ಯಾವುದೋ ಸತ್ತ ಪ್ರಾಣಿ ಎಂದು ತಿಳಿದು ಸುಮ್ಮನಾದ. ಅದು ಇನ್ನೂ ಹತ್ತಿರಕ್ಕೆ ಬರಲು ಅವನದನ್ನು ಯಾವುದೋ ಮರದ ತುಂಡು ಎಂದು ತಿಳಿದು ನಿರ್ಲಕ್ಷಿಸಿಬಿಟ್ಟ. ಅಷ್ಟರಲ್ಲಿ ಅದರ ಒಂದು ಪಾರ್ಶ್ವ ಕೆಂಪನೆಯ ಕಲೆಗಳಿಂದ ಕೂಡಿರುವುದು ಕಾಣಿಸಿತು. ಆವನಿಗೆ ಇದ್ದಕ್ಕಿದ್ದಂತೆ ಆಶ್ಚರ್ಯವಾಯಿತು. ದೋಣಿಯನ್ನು ನಡಸಿಕೊಂಡು ಅದರ ಸಮೀಪಕ್ಕೆ ಹೋಗಿ ಕಷ್ಟಪಟ್ಟು ದೋಣಿಯಲ್ಲಿ ಎತ್ತಿಹಾಕಿ, ನೋಡುತ್ತಾನೆ. ಅದೊಂದು ಮೂಟೆ ! ಅದರಲ್ಲಿ ಏನಿದೆ ಎಂದು ಅದರ ಮೂತಿಯನ್ನು ಬಿಚ್ಚಿದ. ಅದರಲ್ಲಿ ಶವದಂತೆ ಕಾಣುವ ಹೆಣ್ಣಿನ ದೇಹ ಇತ್ತು. ಅದನ್ನು ನೋಡಿ, ಯಾರೋ ದುರಾತ್ಮರು ನಡಸಿದ ಅತ್ಯಾಚಾರವಿದು. ಎಂದುಕೊಂಡ, ಅವಳ ದೇಹವನ್ನು ಮುಟ್ಟಿ ನೋಡಿದಾಗ ಅದು ಶೀತವಾಗಿತ್ತು. ಅವಳ ದೇಹದ ನೀರನ್ನೆಲ್ಲ ಒರೆಸಿ ನೋಡಿದಾಗ, ದೇಹದಲ್ಲಿ ಎಲ್ಲೋ ಕೊಂಚ ಪ್ರಾಣ ಉಳಿದಿರುವುದು ಗೋಚರಿಸಿತು. ಮನೆಗೆ ತಂದು ಉಪಚರಿಸಿದರೆ, ಬದುಕಿದರೂ ಬದುಕಬಹುದೆಂದು, ಅವನು ಮೀನಿನ ಬೇಟೆಯನ್ನು ಅಷ್ಟಕ್ಕೇ ಬಿಟ್ಟು ದೋಣಿಯನ್ನು ವೇಗವಾಗಿ ನಡಸಿಕೊಂಡು ಮನೆಗೆ ಬಂದಿದ್ದ.

ಅವರು ಮಾಡಿದ ಸತತವಾದ ಆರೈಕೆಯಿಂದ ಬೆಳಗಾಗುವ ವೇಳೆಗೆ ಆಕೆಗೆ ಪೂರ್ಣ ಎಚ್ಚರ ಉಂಟಾಗಿತ್ತು. ಅವಳು ಕಣ್ಣು ತೆರೆದು ನೋಡಿ, ತಾನೆಲ್ಲಿರುವೆನೆಂಬುದನ್ನು ತಿಳಿಯದೆ, ಮತ್ತೆ ಶತ್ರುಗಳ ಕೈಯಲ್ಲಿ ಸಿಕ್ಕಿಬಿದ್ದಿರುವೆನೇನೋ ಎಂದು ಹೆದರಿ, ಕೆಟ್ಟ ಧ್ವನಿಯಲ್ಲಿ ಕೂಗಿಕೊಂಡಳು. ಅವಳ ಧ್ವನಿಯನ್ನು ಕೇಳಿ ಒಳಗೆ ಕೆಲಸದಲ್ಲಿದ್ದ ಲಚ್ಚಿ ಓಡಿಬಂದು ಅವಳ ಬಳಿ ಕುಳಿತಳು. ಲಚ್ಚಿಯನ್ನು ಕಂಡಕೂಡಲೇ ಅವಳಿಗೆ ಅದೇನೆನಿಸಿತೋ "ಕುಸುಮಾಜಿ, ಬಾ ಕಂದಾ, ಬಾ. ನನ್ನನ್ನು ಬಿಟ್ಟು ನೀನು ಇದುವರೆಗೆ ಎಲ್ಲಿ ಹೋಗಿದ್ದೆ" ಎಂದು ಅಳಹತ್ತಿದಳು.

ಇದರಿಂದ ಲಚ್ಚಿಗೆ ದಿಗ್ಭ್ರಾಂತಿಯುಂಟಾಯಿತು. ಬಹುಶಃ ಅವಳ ಮಗಳು ತನ್ನ ಹಾಗೆಯೇ ಇದ್ದಿರಬಹುದು. ಹೆಸರು ಕುಸುಮೆ ಎಂದು ಇದ್ದಿರಬಹುದು. ಅಂತಲೇ ತನ್ನನ್ನು ನೋಡಿ ಮಗಳ ನೆನಪಾಗಿರಬೇಕು—

ಎಂದುಕೊಂಡಳು. ಅವಳ ಬಳಿಗೆ ಬಂದು, ಕುಳಿತು ಅವಳ ಮೈಯನ್ನು ತಡವಿದಳು.

ಅವಳು ಲಚ್ಚಿಯ ಕೈಯನ್ನು ತನ್ನ ಕೈಯಲ್ಲಿ ತೆಗೆದುಕೊಂಡು ಬಹಳ ಹೊತ್ತು ಅವಳ ಮುಖವನ್ನು ದಿಟ್ಟಿಸಿ ನೋಡಿ,

"ನೀನು ಕುಸುಮಾಜಿ ಅಲ್ಲ....ನನ್ನ ಮಗು ಕುಸುಮಾಜಿ ಅಲ್ಲ.... ಅವಳು ಎಲ್ಲಿ ಹೋದಳು? ಏನಾದಳು? ಅಯ್ಯೋ, ಆ ದುರುಳರು ಅವಳನ್ನು ಕೊಂದು ಹಾಕಿದ್ದಾರೆ—ಅಯ್ಯೋ ನನ್ನ ಕುಸುಮೆಯನ್ನು ಕೊಂದು ಹಾಕಿದ್ದಾರೆ—ಎಂದು ಚೀರಿದಳು. ಅನಂತರ, ಬಹಳ ಹೊತ್ತು ಮಾತನಾಡದೆ ಕಣ್ಣು ಮುಚ್ಚಿ ಮಲಗಿದಳು. ಮತ್ತೆ ಎಚ್ಚರವಾದಾಗ, ಮಗಳಿಗಾಗಿ ಹಂಬಲಿಸತೊಡಗಿದಳು.

ಈಗ ಅವಳಿಗೆ ಪೂರ್ಣ ಪ್ರಜ್ಞೆಯುಂಟಾಗಿತ್ತು. "ನೀವು ಯಾರು? ನಿಮಗೆ ಈ ಸ್ಥಿತಿ ಏಕೆ ಬಂತು? ನಿಮ್ಮ ಕುಸುಮೆ ಯಾರು? ಆಕೆಗೇನಾಯಿತು?" ಎಂಬಿವೇ ಲಚ್ಚಿಯ ಪ್ರಶ್ನೆಗಳಿಗೆ ಉತ್ತರ ಹೇಳುತ್ತ ಅವಳು ತನ್ನ ಎಲ್ಲ ಕಥೆಯನ್ನೂ ಕೆಲವೇ ಮಾತುಗಳಲ್ಲಿ ಹೇಳಿದಳು. "ಈ ಮುದಿಗೂಬೆ ತಿಪ್ಪಾಜಿ ಸತ್ತು ಕುಸುಮಾಜಿ ಉಳಿದುಕೊಳ್ಳಬಾರದಾಗಿತ್ತೆ" ಎಂದು ಹಲುಬಿದಳು. ಅವಳ ದುಃಖ, ಮಾತಿಗೆ ಮೀರಿತ್ತು. ಆ ದುಃಖದ ಆವೇಗದಲ್ಲಿ ಅವಳು ಮತ್ತೆ ವಿಪನ್ನಾವಸ್ಥೆಗೇ ಹೋದಳು. ಇದರಿಂದ ಮತ್ತೆ ಪ್ರಾಣಾಪಾಯ ಒದಗುವ ಸ್ಥಿತಿ ಬಂದಿತು. ಆಗ ಹಳ್ಳಿಯ ವೈದ್ಯರು ಹಿಂದಣ ನೆನಪುಗಳನ್ನೆಲ್ಲ ಮರೆಸಿ, ಒಂದು ಬಗೆಯ ಮಂಕನ್ನುಂಟುಮಾಡಬಲ್ಲ ಒಂದು ಔಷಧವನ್ನು ಅವಳಿಗೆ ಕೊಟ್ಟರು. ಇದರಿಂದ, ತಿಪ್ಪಾಜಿ ಸಾಯದೆ ಉಳಿದುಕೊಂಡಳು. ಭರಮನಾಯಕನು ಮಾಡಿದ್ದ ಭಯಂಕರ ಗಾಯಗಳನ್ನು ಅನುಭವಿಸಿಯೂ, ನೀರಿನಲ್ಲಿ ಉಸಿರಾಡಲು ಅವಕಾಶವಿಲ್ಲದೆ ತೇಲುತ್ತಿದ್ದೂ ತಿಪ್ಪಾಜಿ ಉಳಿದುಕೊಂಡಳು! ಅವಳ ವಯಸ್ಸು ಗಟ್ಟಿಯಾಗಿತ್ತೊ ಅಥವಾ ಮುಂದೆ ನಡೆಯಬೇಕಾದ ಕೆಲಸಗಳು ಅನೇಕವಿತ್ತೋ ಅಂತೂ ವಿಧಿವಿಲಾಸದಿಂದ ಅವಳು ಸಾವಿನ ದವಡೆಯಲ್ಲೂ ಪಾರಾದಳು.

ತಿಪ್ಪಾಜಿ ಆ ಮನೆಯವರು ಮಾಡಿದ ಉಪಚಾರದಿಂದ ಒಂದೆರಡು ತಿಂಗಳಲ್ಲಿ ಗಾಯಗಳೆಲ್ಲ ಮಾಗಿ, ಗುಣ ಹೊಂದಿದಳು. ಆದರೂ ಅವಳು

ಮೊದಲಿನ ವ್ಯಕ್ತಿಯಾಗಲು ಇನ್ನೂ ಒಂದೆರಡು ತಿಂಗಳು ಸಂತತವಾದ ವಿಶ್ರಾಂತಿ ಶುಶ್ರೂಷೆಗಳು ಬೇಕಾಗಿದ್ದುವು. ಚಂಗಪ್ಪ ಅವಳ ಕಥೆಯನ್ನೆಲ್ಲ ಕೇಳಿದ್ದುದರಿಂದ, ತಿಪ್ಪಾಜಿ ತನ್ನ ಮನೆಯಲ್ಲೇ ಸಂಪೂರ್ಣ ಗುಣ ಹೊಂದುವ ತನಕ ಇರಲು ಆಗ್ರಹಪಡಿಸಿದ. ಅದಕ್ಕೂ ಹೆಚ್ಚಿನ ಆಗ್ರಹ, ಒತ್ತಾಸೆ ಲಚ್ಚಿಯದು. ಅವಳು ತನ್ನ ಮುಗ್ಧ ಸರಳ ನಡವಳಿಕೆಯಿಂದ ತಿಪ್ಪಾಜಿಯ ಪ್ರೀತಿಯ ಮಗಳೇ ಆಗಿದ್ದಳು. ಅವಳನ್ನು ನೋಡಿ, ತಿಪ್ಪಾಜಿಗೆ ತನ್ನ ಕುಸುಮಾಜಿಯ ನೆನಪು ಬಾರಿಬಾರಿಗೆ ಉಂಟಾಗುತ್ತಿತ್ತು. ಅವಳನ್ನು ಬಿಟ್ಟು ಹೋಗಲು ಕಾಲು ಬರದೆ ಅವರ ಮನೆಯಲ್ಲಿಯೇ ಒಂದೆರಡು ತಿಂಗಳು ನಿಂತಳು ತಿಪ್ಪಾಜಿ.

ಈ ಒಂದೆರಡು ತಿಂಗಳಲ್ಲಿ ತಿಪ್ಪಾಜಿ ಹೊಸ ವ್ಯಕ್ತಿ ಎನ್ನುವ ಮಟ್ಟಿಗೆ ಬದಲಾಯಿಸಿಬಿಟ್ಟಿದ್ದಳು. ಅವಳ ಮನಸ್ಸು ಕಹಿಯಾಗಿತ್ತು. ಜೀವನದಲ್ಲಿ ಅವಳಿಗೆ ಯಾವ ಆಸಕ್ತಿಯೂ ಇರಲಿಲ್ಲ. ಅವಳಿಗೆ ಬದುಕು—ದುಸ್ಸಹನೀಯವಾಗಿತ್ತು. ಬಾಳು ಬೇಸರವಾಗಿತ್ತು. ಆದರೂ ಅವಳು ಸಾಯದೇ—ಆತ್ಮಹತ್ಯ ಮಾಡಿಕೊಳ್ಳದೆ ಬದುಕಿದ್ದಳು ಏಕೆ? ಈಗ ಅವಳು ಒಂದು ಮಹತ್ಕಾರ್ಯಸಾಧನೆಗಾಗಿ ಬದುಕಿದ್ದಳು. ಕುಸುಮಾಜಿಯನ್ನು ಹಿಂಸಿಸಿ ಕೊಂದ ಆ ಪಾಪಿ ವಿಜಯಭದ್ರನ ಮೇಲೆ ಸೇಡು ತೀರಿಸಿಕೊಳ್ಳಲು ಬದುಕಿದ್ದಳು; ಅದೇ ಈಗ ಅವಳ ಜೀವನದ ಮುಖ್ಯ ಗುರಿಯಾಗಿತ್ತು. ಅವನ ಮೇಲೆ ಪ್ರತೀಕಾರಕ್ಕಾಗಿ ಅವಳ ಹೃದಯ ಹಾತೊರೆಯುತ್ತಿತ್ತು. ಅವನನ್ನು ಕೊಲ್ಲದೆ—ಕುಸುಮಾಜಿಯ ಆತ್ಮಕ್ಕೆ ಶಾಂತಿ ಇಲ್ಲವೆಂದು ತಿಪ್ಪಾಜಿಗೆ ಅನಿಸಿತ್ತು. ಅವನು ಮಗಳನ್ನು ಯಾವ ರೀತಿಯಲ್ಲಿ ಹಿಂಸಿಸಿ ಕೊಂದನೋ ಅದಕ್ಕೂ ನೂರ್ಮಡಿ ಚಿತ್ರಹಿಂಸೆ ಅವನಿಗೆ ಕೊಟ್ಟು ಅವನನ್ನು ಕೊಲ್ಲಬೇಕೆಂದು ಅವಳು ಸಂಕಲ್ಪಿಸಿದ್ದಳು. ಈ ಸಂಕಲ್ಪ ಸಾಧನೆಗಾಗಿ ಅವಳು ಜೀವ ಧರಿಸಿ ಇದ್ದಳು. ಇದನ್ನು ಹೇಗೆ ಕಾರ್ಯಗತ ಮಾಡಬೇಕೆಂಬುದನ್ನು ತಿಳಿಯದೆ, ತನ್ನ ಅಸಹಾಯಕತೆಗಾಗಿ ಅವಳು ಮೊದಲು ಪರಿತಪಿಸಿದಳು, ಆದರೆ, ತನಗೆ ಇನ್ನು ಜಗತ್ತಿನಲ್ಲಿ ಬದುಕಿ ಆಗಬೇಕಾದ್ದೇನಿದೆ? ಮಗಳ ಸಾವಿಗೆ ಪ್ರತೀಕಾರ ಬಯಸುವುದಲ್ಲದೆ ಬೇರೆ ಜೀವನೋದ್ದೇಶವಿಲ್ಲ. ಇದರಲ್ಲಿ ತನ್ನ ದೇಹ ಬಿದ್ದುಹೋದರೂ ಸರಿ, ತನಗೆ ಯಾರೂ ನೆರವಾಗದೆ ಇದ್ದರೂ

ಸರಿ. ತಾನು ವಿಜಯಭದ್ರನ ಪ್ರಾಣವನ್ನು ಬಲಿ ತೆಗೆದುಕೊಳ್ಳುವವಳೇ. ಈ ಕಾರ್ಯಕ್ಕೆ ಮೂರು ಲೋಕವೇ ಅಡ್ಡಿಬಂದರೂ—ತಿಪ್ಪಾಜಿ ಹೆದರುವು ದಿಲ್ಲ! ಅವಳು ಈ ಜನ್ಮದಲ್ಲಿ ತನ್ನ ಆಶಯವನ್ನು ಈಡೇರಿಸಿಕೊಳ್ಳದೆ ಹೋದರೆ, ಮುಂದಿನ ಜನ್ಮದಲ್ಲಾದರೂ ಅದನ್ನು ಈಡೇರಿಸಿಕೊಳ್ಳುವವಳೇ. ಇದಕ್ಕಾಗಿ ನೂರು ಜನ್ಮಗಳನ್ನು ಎತ್ತಿಬರಲು ಅವಳು ಸಿದ್ಧಳಿದ್ದಳು. ಹೀಗಿರುವಲ್ಲಿ ತಾನು ಅಬಲೆ ಎಂದಾಗಲೀ, ದಿಕ್ಕಿಲ್ಲದ ಪರದೇಶಿ ಎಂದಾಗಲೀ ಅವಳ ಮನಸ್ಸಿಗೆ ಬರಲಿಲ್ಲ. ಹೇಗಾದರೂ—ತಾನು ಹಿಡಿದ ಸಂಕಲ್ಪ—ಹಠ ಸಾಧಿಸಬೇಕು ಎನ್ನುವ ಉತ್ಕಟೇಚ್ಛೆಯ ಮುಂದೆ ಅದಕ್ಕೊಯ್ಯುವ ದಾರಿಗಳು ಅವಳಿಗೆ ಸಹಜವಾಗಿಯೇ ತೆರೆದುವು. ಈಗ ಅವಳಿಗೆ ತನ್ನ ಗುರಿ ಸ್ಪಷ್ಟವಾಗಿತ್ತು.

ಅಂತೆಯೇ ಅವಳ ಮಾರ್ಗವೂ ಸ್ಪಷ್ಟವಾಗಿತ್ತು. ತಾನು ಮೊದಲು ರಾಜಧಾನಿಗೆ ಹೋಗಿ, ತಿರುಮಲಾದೇವಿಯ ಅಂತಃಪುರದಲ್ಲಿ ಕೆಲಸಕ್ಕೆ ಸೇರಿಕೊಂಡು, ಅಲ್ಲಿ ನಿಂತು, ತನ್ನ ಪ್ರತೀಕಾರದ ಪ್ರಯತ್ನದಲ್ಲಿ ತೊಡಗಬೇಕೆಂದು ನಿರ್ಧರಿಸಿದ್ದಳು.

ಅದರಂತೆ, ಒಂದು ದಿನ ತಾನು ಅವರ ಮನೆಯನ್ನು ಬಿಟ್ಟು ಹೊರಡುವ ಸಂಗತಿಯನ್ನು ಚಂಗಪ್ಪನಿಗೆ ತಿಳಿಸಿ, ಅವರ ಆಶೀರ್ವಾದವನ್ನು ಕೋರಿದಳು.

ಚಂಗಪ್ಪ, ಚಲ್ಲಂ, ಲಚ್ಚಿ ಎಲ್ಲರಿಗೂ ತಿಪ್ಪಾಜಿ ತಮ್ಮ ಮನೆಯನ್ನು ತೊರೆದುಹೋಗಲು ಇಷ್ಟವಿರಲಿಲ್ಲ. ಅವರು ಅವಳನ್ನು ಇನ್ನು ಕೆಲವು ಕಾಲ ತಮ್ಮಲ್ಲಿಯೇ ನಿಲ್ಲಿಸಿಕೊಳ್ಳಲು ಬಹಳ ಪ್ರಯತ್ನಪಟ್ಟರು. ಆದರೆ ಅವರ ಪ್ರಯತ್ನಗಳು ವಿಫಲವಾದುವು. ತಿಪ್ಪಾಜಿಯ ಹಟ ಅವರ ಪ್ರಾರ್ಥನೆಗಳಿಗೆ ಕರಗಲಿಲ್ಲ. ಅವಳು ಹೊರಟು ನಿಂತಾಗ ಲಚ್ಚಿ ಅವಳನ್ನು ಬಿಡಲಾರದೆ ತಬ್ಬಿಕೊಂಡು ಅಳುತ್ತ ಕುಳಿತಳು.

ಅವರನ್ನೆಲ್ಲ ಒಪ್ಪಿಸಿ ಬೀಳ್ಕೊಳ್ಳಬೇಕಾಗಿದ್ದರೆ ತಿಪ್ಪಾಜಿಗೆ ಸಾಕು ಸಾಕಾಯಿತು. ಅವರು ಎಷ್ಟೆಂದರೂ ತನಗೆ ಪ್ರಾಣ ಕೊಟ್ಟ ತಾಯಿ ತಂದೆಗಳೇ ಅಲ್ಲವೆ? ಅವರನ್ನು ಹೇಗೆ ಬಿಟ್ಟು ಹೋಗುವುದು? ಈ ಸ್ನೇಹ ಅಂತಃಕರಣಗಳ ಬಳ್ಳಿಯನ್ನು ಹೇಗೆ ಕತ್ತರಿಸಿಕೊಂಡು ಹೋಗುವುದು ಇದನ್ನು

ತಿಳಿಯದೆ, ತಿಪ್ಪಾಜಿಯೂ ಬಹಳ ವ್ಯಥೆಪಟ್ಟಳು. ಆದರೆ, ಅವಳ ಮುಂದೆ ಒಂದು ಸ್ಪಷ್ಟವಾದ ಗುರಿ ನಿಂತಿತ್ತು. ಅದನ್ನು ಅವಳು ಸಾಧಿಸಲೇ ಬೇಕಾಗಿತ್ತು. ಅದಕ್ಕಾಗಿ ಅವಳು ಮತ್ತೆ ತನ್ನನ್ನು ಸುತ್ತುಗಟ್ಟಿದ ಮೋಹದ ಬಳ್ಳಿಯನ್ನು ಕತ್ತರಿಸಿಕೊಂಡು ಅದರಿಂದ ಹೊರಗೆ ಬಂದಳು.

ಈಗ ಅವಳು ಸ್ವತಂತ್ರಳು! ತನ್ನ ಇಚ್ಛೆಯಂತೆ ಮಾತ್ರವೇ ನಡೆಯಬಲ್ಲಳು!

ಅವಳಿಗೆ ರಾಜಧಾನಿಗೆ ಹೋಗುವ ಇಚ್ಛೆಯುಂಟಾಗಿತ್ತು; ಇದನ್ನು ಯಾರೂ ತಡೆಯಲು ಸಮರ್ಥರಾಗಲಿಲ್ಲ!

ಚಂಗಪ್ಪನ ಮನೆಯವರನ್ನು ಬಹು ಕಷ್ಟದಿಂದ ಬೀಳ್ಕೊಂಡು ತಿಪ್ಪಾಜಿ ರಾಜಧಾನಿ ವಿದ್ಯಾನಗರವನ್ನು ತಲುಪಿದಳು. ಸಮಯ ಸಾಧಿಸಿ, ಮಹಾರಾಣಿ ತಿರುಮಲಾದೇವಿಯನ್ನು ಸಂದರ್ಶಿಸಿದಳು.

ತಿರುಮಲಾದೇವಿಗೆ ಮೊದಲು ತಿಪ್ಪಾಜಿಯ ಗುರುತು ಹತ್ತಲಿಲ್ಲ. ಅವಳ ಮೊದಲಿನ ರೂಪಿಗೂ ಈಗಿನ ರೂಪಕ್ಕೂ ಬಹಳ ಅಂತರವಿತ್ತು. ಅವಳ ಮುಖ ಈಗ ಕಲೆಗಳಿಂದ ತುಂಬಿಹೋಗಿ ಅಸಹ್ಯವಾಗಿತ್ತು. ಅವಳ ಕೂದಲು ಚಿಂತೆಯಿಂದ ಬೆಳ್ಳಗಾಗಿತ್ತು. ಅವಳನ್ನು ಗುರುತಿಸದೆ, ತಡಕುತ್ತಿರುವಾಗ, ತಿಪ್ಪಾಜಿಯೇ ತನ್ನ ಪರಿಚಯ ಮಾಡಿಕೊಟ್ಟಳು.

'ತಿಪ್ಪಾಜಿ ಎನ್ನುವ ಹೆಸರು ಕಿವಿಯ ಮೇಲೆ ಬೀಳುತ್ತಲೂ ಮಹಾರಾಣಿಗೆ ಮೈಯಲ್ಲಿ ವಿದ್ಯುತ್ ಸಂಚಾರವಾದಂತೆ ಆಯಿತು. ಅವಳು ಕೂಡಲೇ ತಿಪ್ಪಾಜಿಯನ್ನು ಬಳಿಗೆ ಕೂಡಿಸಿಕೊಂಡು ಅವಳ ಕುಶಲಪ್ರಶ್ನೆ ಮಾಡಿದಳು.

ತಿಪ್ಪಾಜಿ ತನ್ನ ಹಾಗೂ ಕುಸುಮೆಯ ಕಥೆಯನ್ನೆಲ್ಲ ಸಾಂಗವಾಗಿ ಹೇಳಿ, ಕಡೆಯಲ್ಲಿ ಹೇಳಿದಳು.

" ನನಗೆ ಈಗ ಬೇಕಾಗಿರುವುದು ಸೇಡು. ಪಾಪಿಗೆ ತಕ್ಕ ಶಿಕ್ಷೆಯನ್ನು ನಾನೇ ವಿಧಿಸಬೇಕಾಗಿಲ್ಲ, ಭಗವಂತನೇ ವಿಧಿಸುತ್ತಾನೆ. ಇಂದಲ್ಲ ನಾಳೆ ಅವನು ತನ್ನ ಅಕೃತ್ಯಗಳಿಗಾಗಿ ಮರುಗುತ್ತಾನೆ. ಆಗ ಅವನ ದುರವಸ್ಥೆಯನ್ನು ನೋಡಿ ಸಂತೋಷಪಡಲೆಂದೇ ಇನ್ನೂ ಸಾಯದೆ ಬದುಕಿದ್ದೇನೆ. ಈಗ ನಿಮ್ಮಿಂದ ನನಗೆ ಒಂದು ಉಪಕಾರವಾಗಬೇಕಾಗಿದೆ. ಇದನ್ನು ಮಾಡಿಕೊಡುವುದಾದರೆ, ನಾನು ಇಲ್ಲಿರುತ್ತೇನೆ—ಇಲ್ಲದೆ ಹೋದರೆ....ನನ್ನ

ದುರ್ವಿಧಿಯನ್ನು ಹಳಿದುಕೊಂಡು ಪರದೇಶಿಯಂತೆ ತಿರುಪೆಯನ್ನಾದರೂ ಬೇಡಿ ಬದುಕಿರುತ್ತೇನೆ...."

"ಈಗ ನನ್ನಿಂದ ನಿನಗೆ ಯಾವ ಸಹಾಯವಾಗಬೇಕಾಗಿದೆ. ಹೇಳು."

ತಿರುಮಲಾದೇವಿ ಕಳಕಳಿಯಿಂದ ಕೇಳಿದಳು.

"ನನಗೆ ತಮ್ಮ ಪಾದಸೇವೆಯ ಭಾಗ್ಯವನ್ನು ಕರುಣಿಸಬೇಕು"

"ಅಂದರೆ ?"

"ನಾನು ತಮ್ಮ ಸೇವೆಯನ್ನು ಮಾಡುತ್ತಾ ತಮ್ಮ ಅಂತಃಪುರದಲ್ಲಿಯೇ ಇರಬೇಕೆಂದು ಸಂಕಲ್ಪಿಸಿದ್ದೇನೆ. ನನ್ನ ಪ್ರಾರ್ಥನೆಯನ್ನು ಮಹಾರಾಣಿಯ ವರು ಈಡೇರಿಸಿಕೊಡಬೇಕು."

"ಓ ಇಷ್ಟೇತಾನೇ. ಇಷ್ಟಕ್ಕೆಲ್ಲ ಅಷ್ಟು ಕೋರಿಕೆಯೇ ಆಗಲಿ. ನಿನ್ನಿಷ್ಟ ದಂತೆಯೇ ನೀನು ಇಲ್ಲಿ ಇರು. ಆದರೆ ಸೇವಕಳಂತೆ ಅಲ್ಲ. ನನ್ನ ಗೆಳತಿ ಯಂತೆ—ನನ್ನ ಆತ್ಮ ಸಖಿಯಾಗಿ ಇರು. ನಿನಗೆ ಇಲ್ಲಿ ಯಾವುದಕ್ಕೂ ಕೊರತೆಯಾಗದು. ನೀನು ನೆಮ್ಮದಿಯಾಗಿರು...."

ಎಂದು ಮಹಾರಾಣಿ ತಿರುಮಲಾದೇವಿ ತಿಪ್ಪಾಜಿಗೆ ಆಶ್ವಾಸನವಿತ್ತು, ಆವಳ ಮನದಳಲನ್ನು ಕಳೆದಳು.

ಅಂದಿನಿಂದ ತಿಪ್ಪಾಜಿಯ ಮಬ್ಬುಕವಿದ ಜೀವನದಲ್ಲಿ ಆಸೆಯ ಹೊಂಬೆಳ ಕಿನ ಕಿರಣ ಕಾಣಿಸಿತ್ತು.

# ೧೦

ತಿಪ್ಪಾಜಿ ತಿರುಮಲಾದೇವಿಯ ಅಂತಃಪುರದಲ್ಲಿ ಅವಳ ಆತ್ಮ ಸಖಿಯಾಗಿ ನಿಂತ ಮೇಲೆ ಬಹು ಬೇಗ ಅಂತಃಪುರದಲ್ಲೆಲ್ಲ ತನ್ನ ವರ್ಚಸ್ಸನ್ನು ಬೆಳಸಿಕೊಂಡಳು. ಆ ಬಗೆಯ ಕೌಶಲ್ಯ ಅವಳಿಗೆ ಸ್ವಭಾವಸಿದ್ಧವಾಗಿ ಬಂದಿತ್ತು. ತಿಪ್ಪಾಜಿ ಈಗ ಒಂದು ಉದ್ದಿಶ್ಯಸಾಧನೆಗಾಗಿ ಇಲ್ಲಿಗೆ ಬಂದು ನಿಂತಿದ್ದಳು. ಕೇವಲ ಉದರ ನಿರ್ವಹಣೆಗೆಂದೇ ಆಗಿದ್ದರೆ ಅವಳು ಇಲ್ಲಿಗೆ ಬರಬೇಕಾದ ಕಾರಣವಿರಲಿಲ್ಲ. ಶ್ರೀರಂಗಪಟ್ಟಣಕ್ಕೆ ಹಿಂತಿರುಗಿದ್ದರೆ ಅವಳು ನೆಮ್ಮದಿಯಾಗಿ ಬಾಳಬಹುದಿತ್ತು. ಆದರೆ ಆ ಬಗೆಯ ನೆಮ್ಮದಿಯ ಬಾಳ್ವಿಗೆ ಅವಳೆಂದೋ ತಿಲಾಂಜಲಿಯನ್ನು ಕೊಟ್ಟಿದ್ದಳು. ಕುಸುಮೆ ಬದುಕಿದ್ದಾಗ ಅವಳಿಗೂ ಇತರರಿಗೆ ಇರುವಂತೆಯೇ ಕೀರ್ತಿ, ಹಣ ಸುಖಗಳ ಬಗ್ಗೆ ಆಸೆ ಇತ್ತು. ಆದರೆ ಕುಸುಮೆಯ ಜೀವಲತೆ ವಿಜಯಭದ್ರನ ಅಸುರೀ ಪ್ರವೃತ್ತಿಯ ಕಾಲ್ತುಳಿತಕ್ಕೆ ಸಿಕ್ಕಿ ನಿಶ್ಶೇಷವಾದ ಮೇಲೆ ತಿಪ್ಪಾಜಿಯ ಬಾಳಿನ ಲತೆಯೂ ಸೊರಗಿತ್ತು. ಆತ್ಮ ಚೈತನ್ಯ ಶೂನ್ಯವಾಗಿತ್ತು. ಅವಳ ಬದುಕು ಗಾಳಿಗೆ ತೆರೆದಿಟ್ಟ ದೀಪದಂತೆ ಆಗಿತ್ತು. ಅದು ಯಾವ ಗಳಿಗೆಯಲ್ಲಿ ಬೇಕಾದರೂ ಆರಿ ಹೋಗಬಹುದು. ಅದು ಆರಿ ಹೋಗುವ ಮುನ್ನ ಅದರ ಒಂದೊಂದು ಸಂಕಲ್ಪ ಸಾಧನೆ ಮಾಡಿ, ಅನಂತರ ನಂದಿ ಹೋದರೂ ಅದಕ್ಕೆ ವ್ಯಥೆಯಿರಲಿಲ್ಲ. ಆ ಸಂಕಲ್ಪ ಸಾಧನೆಗಾಗಿ, ಅವಳು ಜೀವ ಹಿಡಿದು ನಿಂತಿದ್ದಳು. ಅದನ್ನು ಮಾಡಿ ಮುಗಿಸದ ಹೊರತು ಅವಳ ಜೀವಕ್ಕೆ ಶಾಂತಿ ಇಲ್ಲ; ತೃಪ್ತಿ ಇಲ್ಲ. ಅದಕ್ಕೆಂದೇ ಅವಳು ಸೇವಾವೃತ್ತಿ ಹಿಡಿದು, ಮಹಾರಾಣಿಯವರ ಕೈಂಕರ್ಯ ಮಾಡುತ್ತಾ ಇಲ್ಲಿ ದಿನಗಳನ್ನು ನೂಕುತ್ತಿರುವುದು! ಒಮ್ಮೆ ಅವಳು ತನ್ನ ಆಶಯವನ್ನು ಈಡೇರಿಸಿಕೊಂಡಳೆಂದರೆ ಅಂದೇ ತಿಪ್ಪಾಜಿ ಈ ನಾಡಿನಲ್ಲೇ ಇರುವುದಿಲ್ಲ, ಈ ಲೋಕದಲ್ಲೇ ಇರುವುದಿಲ್ಲ. ಆ ದಿನ ಬರುವ ವರೆಗೂ ಹೀಗೆಯೇ ಬದುಕಬೇಕು. ನಿರ್ವಾಹವಿರಲಿಲ್ಲ........!

ತಿಪ್ಪಾಜಿ ಮಹಾರಾಣಿಯ ಅಚ್ಚುಮೆಚ್ಚಿನ ಗೆಳತಿಯಾದುದರಿಂದ, ಅವಳ ಹಿರಿಮೆ, ಘನತೆ ಸಹಜವಾಗಿಯೇ ಬೆಳೆದಿತ್ತು. ಅಂತಃಪುರದ ಸೇವ

ಕರು—ದಾಸ ದಾಸಿ ಪರಿಜನರೆಲ್ಲರೂ ತಿಪ್ಪಾಜಿಗೆ ಹೆದರಿ ನಡೆಯುತ್ತಿದ್ದರು; ಭಯ ಭಕ್ತಿಗಳಿಂದ ನೋಡುತ್ತಿದ್ದರು. ಅವರ ದೃಷ್ಟಿಯಲ್ಲಿ ತಿಪ್ಪಾಜಿ ಎರಡನೆಯ ಮಹಾರಾಣಿಯೇ ಆಗಿದ್ದಳು. ಅಂತಃಪುರದಲ್ಲಿ ಮಹಾರಾಣಿಯ ಮಾತಿಗೆ ಎಷ್ಟು ಬೆಲೆ ಇತ್ತೋ ಅಷ್ಟೇ ಬೆಲೆ ತಿಪ್ಪಾಜಿಯ ಮಾತಿಗೂ ಇತ್ತು. ತಿಪ್ಪಾಜಿ ಮಹಾರಾಣಿಯ ಕಷ್ಟ ಸುಖಗಳನ್ನು ತನ್ನವಾಗಿರಿಸಿಕೊಂಡು ಅವಳ ಸೇವೆಯಲ್ಲಿ ತನ್ನ ಮನದ ಸಂಕಟವನ್ನು ಮರೆತಿದ್ದಳು. ಅವರಿಬ್ಬರೂ ಕೇವಲ ಗೆಳತಿಯರಾಗಿ ಉಳಿಯಲಿಲ್ಲ; ಒಡಹುಟ್ಟಿದ ಅಕ್ಕ ತಂಗಿಯರೆನ್ನುವ ಮಟ್ಟಿಗೆ ಅವರಲ್ಲಿ ಅನ್ಯೋನ್ಯತೆ, ಪ್ರೀತಿ ವಿಶ್ವಾಸಗಳು ಬೆಳೆದಿದ್ದುವು.

ಅವರಿಬ್ಬರನ್ನು ಪ್ರೀತಿಯ ಬೆಸುಗೆಯಲ್ಲಿ ತೊಡಿಸಿದ್ದವನೆಂದರೆ ತಿರುಮಲಾದೇವಿಯ ಮಗು ತಿರುಮಲದೇವ.

ತಿರುಮಲದೇವ ಇನ್ನೂ ಒಂದು ವರ್ಷ ಕೂಡ ತುಂಬಿಲ್ಲದ ಹಸುಗೂಸು. ಅವನು ಮಹಾಪ್ರಭುಗಳು ರಾಯಚೂರು ದಿಗ್ವಿಜಯದಲ್ಲಿ ಕೂಡಗಿದ್ದಾಗ ಹುಟ್ಟಿದ್ದ. ಅತ್ತ ರಾಯಚೂರಿನ ಪ್ರಚಂಡ ದಿಗ್ವಿಜಯ; ಇತ್ತ ರಾಜಧಾನಿಯಲ್ಲಿ ಪುತ್ರೋತ್ಸವ. ಇವೆರಡೂ ಏಕಕಾಲದಲ್ಲಿ ನಡೆದ ಘಟನೆಗಳು; ಜನತೆಗೆ ಈ ಎರಡು ಶುಭವಾರ್ತೆಗಳಿಂದ ತುಂಬ ಸಂತೋಷ ಉಂಟಾಗಿತ್ತು.

ಮಹಾರಾಣಿ ತಿರುಮಲಾದೇವಿ ಬಹುಕಾಲ ಬಯಸಿ ಬಯಸಿ ಪಡೆದ ಪುತ್ರ ರತ್ನ ತಿರುಮಲದೇವ. ತಿರುಮಲಾದೇವಿ ಪುತ್ರಲಾಭಕ್ಕಾಗಿ ಮಾಡಿದ ಸೇವೆಯಲ್ಲಿ ಹರಸಿಕೊಳ್ಳದ ಹರಕೆಯಿಲ್ಲ. ಕಂಡ ಕಂಡ ಬ್ರಾಹ್ಮಣರಿಗೆ ಸಂತರ್ಪಣೆ, ಬಡವರಿಗೆ ಅನ್ನ ವಸ್ತ್ರ ದಾನಗಳೇ ಮೊದಲಾದ ಧರ್ಮಕಾರ್ಯಗಳು ಎಡಬಿಡದೆ ಸಾಗಿದ್ದುವು. ಆದರೂ ಮಹಾರಾಣಿಗೆ ಪುತ್ರ ಸಂತಾನವಾಗಿರಲ್ಲ. ಅವಳಿಗೆ ತನ್ನ ಮೊದಲನೆಯ ಗರ್ಭದಲ್ಲಿ ಪುತ್ರಿಯೊಬ್ಬಳು-ತಿರುಮಲಾಂಬೆಯು-ಜನಿಸಿದ್ದರೂ ಅವಳನಂತರ ತಿರುಮಲಾದೇವಿಗೆ ಮತ್ತೆ ಮಗುವಾಗಿರಲಿಲ್ಲ. ತಿರುಮಲಾಂಬೆಯೇ ಮುದ್ದಿನ ಮಗಳಾಗಿ ಬೆಳೆದು ತೀರ ಚಿಕ್ಕ ವಯಸ್ಸಿನಲ್ಲೇ ಅರವೀಡು ವಂಶದ ರಾಮರಾಯನಿಗೆ ಮದುವೆಯಾಗಿ, ಪತಿಗೃಹಕ್ಕೆ ತೆರಳಿದ ಮೇಲೆ ಅಂತಃಪುರ ಮತ್ತೆ ಬರಿದಾಗಿತ್ತು. ಆಗ ಬರಿದಾದುದು, ಬಹುಕಾಲ ತುಂಬಿಕೊಳ್ಳಲಿಲ್ಲ. ಮಕ್ಕಳಿಲ್ಲದ ಕೊರತೆ ಮಹಾರಾಣಿಯನ್ನು ಕುಕ್ಕಿ ತಿನ್ನುವ ಚಿಂತೆಯಾಗಿತ್ತು.

ಮಗಳ ವಿಷಯವೂ ತಿರುಮಲಾದೇವಿಗೆ ಒಂದು ರೀತಿಯ ಚಿಂತೆಗೆ ಕಾರಣವಾಗಿತ್ತು. ತಿರುಮಲಾಂಬೆಗೆ ಹದಿನಾಲ್ಕು ವರ್ಷ ವಯಸ್ಸಿಗೇ ಮದುವೆಯಾಗಿತ್ತು. ಮಗಳಿಗೆ ಇಷ್ಟುಬೇಗ ಮದುವೆಮಾಡಲು ತಿರುಮಲಾ ದೇವಿಗೆ ಇಷ್ಟವಿರಲಿಲ್ಲ. ಆದರೆ ಅವಳ ಆಸೆ ಈಡೇರಲಿಲ್ಲ. ವಯಸ್ಸಿನಲ್ಲಿ ತಿರುಮಲಾಂಬೆಗಿಂತ ತುಂಬ ದೊಡ್ಡವನಾಗಿದ್ದ ರಾಮರಾಯನಿಗೆ ಒಂದು ಪ್ರಬಲ ರಾಜಕಾರಣಕ್ಕಾಗಿ ಮದುವೆ ಮಾಡಿಕೊಟ್ಟಿದ್ದರು.

ಅರವೀಡು ವಂಶದ ರಾಮರಾಯನು ಅಪ್ರತಿಮ ವೀರ, ಸಿಂಹ ವಿಕ್ರಮ, ಯುದ್ಧದಲ್ಲಿ ಗಂಡುಗಲಿ. ಅಂತೆಯೇ ರಾಜಕಾರಣದಲ್ಲಿ ಒಳ್ಳೆಯ ಕುಶಾಗ್ರಮತಿ. ಕೃಷ್ಣದೇವರಾಯನ ಉತ್ತ್ಕಲದ ದಂಡೆಯಾತ್ರೆಯಲ್ಲಿ, ಅಖಂಡ ದಿಗ್ವಿಜಯಕ್ಕೆ ಅವನ ಧೈರ್ಯ ಸಾಹಸಗಳೇ ಕಾರಣ; ಅವನು ತನ್ನ ಉದಾತ್ತಗುಣಗಳಿಂದಾಗಿ, ಸೈನ್ಯದಲ್ಲಿ ಸಾಮಂತರಲ್ಲಿ ತುಂಬ ಪ್ರಬಲ ಶಾಲಿಯಾದ ವ್ಯಕ್ತಿಯಾಗಿದ್ದ. ಇಂಥವನನ್ನು ಯಾವ ಬಗೆಯ ಅಂಕೆ ಇಲ್ಲದೆ ಬಿಟ್ಟರೆ ಸಾಮ್ರಾಜ್ಯಕ್ಕೆ ಪ್ರಬಲ ವಿರೋಧಿಯಾಗುವನೆಂದು ರಾಜತಂತ್ರನಿಪುಣ ನಾದ ತಿಮ್ಮರಸನು, ಕೃಷ್ಣದೇವರಾಯನನ್ನು ಒಪ್ಪಿಸಿ, ತಿರುಮಲಾಂಬೆಯನ್ನು ಅವನಿಗೆ ಮದುವೆಮಾಡಿ ಕೊಡುವುದರ ಮೂಲಕ, ಅವನೊಡನೆ ಸಂಬಂಧ ಬೆಳಸಿ, ಅವನಿಂದ ಸಾಮ್ರಾಜ್ಯಕ್ಕೆ ಯಾವ ಅಂಜಿಕೆಯುಂಟಾಗದಂತೆ ಮಾಡಿದ್ದ. ಹೀಗೆ ವರಸಾಮ್ಯದ ದೃಷ್ಟಿಯಲ್ಲಿ ಬಹಳ ಅಂತರವಿದ್ದ ತಿರುಮ ಲಾಂಬೆ ರಾಮರಾಯರು ಗಂಡಹೆಂಡಿರಾಗಿ, ರಾಮರಾಯನು ಅಳಿಯ ರಾಮ ಭೂಪಾಲನಾಗಿ, ತೆಲುಗು ಪ್ರಾಂತದ ಮಹಾ ಮಾಂಡಲಿಕನಾಗಿ ಮೆರೆದ.

ತಿರುಮಲಾಂಬೆ ಪತಿಗೃಹವನ್ನು ಸೇರಿದ ಮೇಲೆ ಕೆಲವು ವರ್ಷ ತಿರುಮಲಾ ದೇವಿಗೆ ಮಗಳ ಚಿಂತೆಯೇ ಆಯಿತು; ಆದರೆ ರಾಮರಾಯನು ತಿರುಮಲಾಂಬೆ ಯನ್ನು ಹೂವಿನಂತೆ ನೋಡಿಕೊಂಡಿದ್ದ. ಅವಳನ್ನು ಕೋರೆ ಕಾಣದ ಸುಖ ವೈಭವಗಳಲ್ಲಿ ಇಟ್ಟಿದ್ದುದರಿಂದ ಒಂದು ರೀತಿಯಾಗಿ ಸಮಾಧಾನ ಉಂಟಾ ಗಿತ್ತು. ಮಗಳ ವಿಷಯಕವಾದ ಚಿಂತೆ ಬದಿಗೆ ಸರಿದರೂ, ಮಕ್ಕಳಿಲ್ಲದ ಚಿಂತೆ ಮಾತ್ರ ಮಹಾರಾಣಿಯನ್ನು ಕಾಡುವುದು ತಪ್ಪಲಿಲ್ಲ. ತಿರುಮಲಾಂಬೆಯ ಅನಂತರ ಒಂದೆರಡು ಮಕ್ಕಳು ಹುಟ್ಟಿದ್ದರೂ ಅವುಗಳು ಒಂದೂ ಬದು ಕಿರಲಿಲ್ಲ. ಹುಟ್ಟಿದ್ದ ಎರಡು ಮಕ್ಕಳೂ ಹೊಟ್ಟೆಯಲ್ಲೇ ತೀರಿಕೊಂಡಿದ್ದುವು.

ತಾನು ಮಹಾರಾಣಿಯಾಗಿ ಇದ್ದುಕೊಂಡೂ ಚಕ್ರಾಧಿಪತ್ಯಕ್ಕೆ ಉತ್ತರಾಧಿಕಾರಿಯಾಗಬಲ್ಲ ಒಬ್ಬ ಮಗನ ತಾಯಿಯಾಗುವ ಪುಣ್ಯ ತನಗೆ ಇಲ್ಲದೇ ಹೋಯಿತೇ ಎಂದು ಅವಳು ಹಂಬಲಿಸಿದಳು. ಅವಳು ಮಾಡಿದ ವ್ರತ, ಸೇವೆ, ಪೂಜೆ ಸತ್ಕಾರಗಳಿಂದ ತಿರುಪತಿಯ ವೆಂಕಟೇಶ್ವರ ಸ್ವಾಮಿ ತೃಪ್ತಿಗೊಂಡನೆಂಬಂತೆ ಮಹಾರಾಣಿಯ ಹೊಟ್ಟೆಯಲ್ಲಿ ತಿರುಮಲದೇವನು ಹುಟ್ಟಿದ—ಅವಳು ಮಾಡಿದ ತಪಸ್ಸಿನ ಫಲವಾಗಿ.

ಮಗನು ಹುಟ್ಟುವ ತನಕ ಕೃಷ್ಣದೇವರಾಯನಿಗೆ ತಿರುಮಲಾದೇವಿಯ ಮೇಲೆ, ಹೇಳಿಕೊಳ್ಳುವಷ್ಟು ಪ್ರೀತಿ ಇರಲಿಲ್ಲವೆಂದರೂ ಸರಿ. ಅವನ ಪ್ರೀತಿ ವಿಶ್ವಾಸಗಳೆಲ್ಲ ಚಿನ್ನಾದೇವಿಗೆ ಮೀಸಲಾಗಿತ್ತು. ಆದರೂ ಇತರ ರಾಣಿಯರನ್ನು ನೋಡುವಂತೆಯೇ ಎಂದಾದರೊಮ್ಮೆ ತಿರುಮಲಾದೇವಿಯನ್ನು ಪ್ರೀತಿಯಿಂದ ನೋಡುತ್ತಿದ್ದ. ಮಹಾಪ್ರಭುಗಳ ಪ್ರೀತಿಯನ್ನೆಲ್ಲ ತಾನೊಬ್ಬಳೇ ಅನುಭವಿಸಬೇಕೆಂದು ತಿರುಮಲಾದೇವಿಯ ಆಸೆಯೂ ಆಗಿರಲಿಲ್ಲ. ಆದರೆ ಹಿಂದೆ ಮಹಾಪ್ರಭುಗಳನ್ನು ತನ್ನ ಅಂತಃಪುರ ಬಿಟ್ಟು ಹೋಗದಂತೆ ಮಾಡಬೇಕೆನ್ನುವ ಉತ್ಕಟಾಕಾಂಕ್ಷೆ ಇದ್ದ ಕಾಲ ಬಂದಿತ್ತು. ಆಗ ಮಹಾರಾಣಿಗೆ ಇನ್ನೂ ಯೌವನದ ಬಿಸಿ ಇತ್ತು. ಸವತಿ ಮಾತ್ಸರ್ಯದ ಕಿಡಿ ಪ್ರಜ್ವಲಿಸುತ್ತಿತ್ತು. ಕೃಷ್ಣದೇವರಾಯನೂ ಮಗನಿಗಾಗಿ ಹಂಬಲಿಸುತ್ತಿದ್ದ ಕಾಲ ಅದು. ತಾನು ಸದಾ ಯುದ್ಧರಂಗದಲ್ಲಿ ಇರುವುದರಿಂದ ತನ್ನ ಸಾವು ಅನಿಶ್ಚಿತ. ತಾನು ಕಷ್ಟಪಟ್ಟು, ರಕ್ತ ಹರಿಸಿ ಕಟ್ಟಿದ ಚಕ್ರಾಧಿಪತ್ಯಕ್ಕೆ ತನ್ನ ಅನಂತರ ಉತ್ತರಾಧಿಕಾರಿಯಿಲ್ಲದೆ ಹೋದರೆ ತನ್ನ ಶ್ರಮವೆಲ್ಲ ವ್ಯರ್ಥ. ತನ್ನ ನಂತರ ಸಾಮ್ರಾಜ್ಯ ಒಡೆದು ಚೂರಾಗಿ, ದೇಶ ಅನಾಯಕವಾಗುವುದಾದರೆ, ತಾನು ಇಷ್ಟು ಕಷ್ಟಪಟ್ಟು ಕಟ್ಟಿದ ಸಾಮ್ರಾಜ್ಯದಿಂದ ಏನು ಪ್ರಯೋಜನ? ತನಗೆ ಒಬ್ಬ ಮಗನಿಲ್ಲದ ಮೇಲೆ ತನ್ನ ಶ್ರಮವೆಲ್ಲ ವ್ಯರ್ಥ—ತನ್ನ ದಿಗ್ವಿಜಯವೆಲ್ಲ ವ್ಯರ್ಥ ಎಂದು ಮಗನಿಗಾಗಿ ಹಂಬಲಿಸುತ್ತಿದ್ದ. ಕೃಷ್ಣದೇವರಾಯನ ಈ ಪುತ್ರಹಂಬಲವನ್ನು ನಾಲ್ವರು ರಾಣಿಯರು—ತಿರುಮಲಾದೇವಿ, ಚಿನ್ನಾದೇವಿ, ಜಗನ್ಮೋಹಿನಿ ಮತ್ತು ಅನ್ನಪೂರ್ಣಾದೇವಿಯರು ಇದ್ದರೂ, ಒಬ್ಬರಾದರೂ ಈಡೇರಿಸಲು ಸಮರ್ಥರಾಗಲಿಲ್ಲ! ಇದರಿಂದ ರಾಯನಿಗೆ ಎಲ್ಲ ರಾಣಿಯರಲ್ಲಿ ಬೇಸರ ಉಂಟಾಗಿತ್ತು. ಇಂತಹ ವೇಳೆಯಲ್ಲಿ ತಿರುಮಲಾದೇವಿಗೆ

ಪುತ್ರೋತ್ಸವವಾಗಿದ್ದರೆ, ಕೃಷ್ಣದೇವರಾಯನು ತಿರುಮಲಾದೇವಿಯ ಅಂತಃಪುರ ಬಿಟ್ಟು ಕದಲುತ್ತಿರಲಿಲ್ಲ. ಆದರೆ ಈಗ ಅವಳಿಗೆ ಪುತ್ರೋತ್ಸವವಾಗಿತ್ತು.

ಈ ವೇಳೆಗಾಗಲೇ ಕೃಷ್ಣದೇವರಾಯನ ಪ್ರೀತಿ ಚಿನ್ನಾದೇವಿಯ ಮೇಲೆ ತಿರುಗಿತ್ತು. ಚಿನ್ನಾದೇವಿಯ ಹೊಟ್ಟೆಯಲ್ಲಿ ಕೃಷ್ಣದೇವರಾಯನಿಗೆ ಒಂದು ಮಗು ಹುಟ್ಟಿತ್ತು. ಅದರ ಮೋಹಪಂಜರದಲ್ಲಿ ಬಂಧಿತನಾಗಿದ್ದ ಕೃಷ್ಣದೇವರಾಯನಿಗೆ ತಿರುಮಲಾಂಬೆಯ ಕಡೆಗಾಗಲೀ, ತಿರುಮಲದೇವನ ಮೇಲಾಗಲೀ ಮನಸ್ಸು ಹರಿದಿರಲಿಲ್ಲ. ಆದರೂ ತಿರುಮಲದೇವ ಕೃಷ್ಣದೇವರಾಯನ ತನೂಭವನೇ ಅಲ್ಲವೇ? ಹೀಗಾಗಿ ಒಮ್ಮೊಮ್ಮೆ ಅವನ ಕಾರಣದಿಂದ, ರಾಯನು ತಿರುಮಲಾದೇವಿಯ ಅಂತಃಪುರಕ್ಕೂ ದರ್ಶನಕೊಡುತ್ತಿದ್ದ. ಈ ಪುಣ್ಯ ಉಳಿದ ರಾಣಿಯರಾದ, ಜಗನ್ಮೋಹಿನಿ ಮತ್ತು ಅನ್ನಪೂರ್ಣಾದೇವಿಯರಿಗೆ ಇರಲಿಲ್ಲ. ಇಷ್ಟರಿಂದಲೇ ತಿರುಮಲಾದೇವಿ ತೃಪ್ತಿಪಟ್ಟುಕೊಂಡಿದ್ದಳು. ಇಂದಲ್ಲ ನಾಳೆ ತನ್ನ ಮಗನ ಕಾರಣದಿಂದಲಾದರೂ—ತನಗೆ ಸಿಗಬೇಕಾದ ಪುರಸ್ಕಾರ ಸಿಗುವುದೆಂದು.

ಆದರೆ ಕೃಷ್ಣದೇವರಾಯನ ವಿಚಾರವೇ ಬೇರೆಯಿತ್ತು.

ಚಿನ್ನಾದೇವಿ ಮೊದಲಿನಿಂದಲೂ ಕೃಷ್ಣದೇವರಾಯನ ಪ್ರೀತಿಯ ರಾಣಿ, ಮೋಹದ ರಾಣಿ. ಅವಳನ್ನು ಕೃಷ್ಣದೇವರಾಯನು ಚಿಕ್ಕಂದಿನಿಂದಲೂ ಪ್ರೀತಿಸುತ್ತಿದ್ದ. ಅಂದರೆ ಚಕ್ರವರ್ತಿಯಾಗುವುದಕ್ಕೆ ಮುಂಚೆಯೇ ಅವರು ಪರಸ್ಪರ ಪ್ರೀತಿಸುತ್ತಿದ್ದರು. ರಾಯನು ತಾನು ಪಟ್ಟಕ್ಕೆ ಬಂದ ಕೂಡಲೇ ಚಿನ್ನಾದೇವಿಯನ್ನು ಪಟ್ಟದ ಮಹಿಷಿಯನ್ನಾಗಿ ಮಾಡಿಕೊಳ್ಳಲು ಸಂಕಲ್ಪಿಸಿದನು. ಆದರೆ ಮಂತ್ರಿಯಾಗಿದ್ದ ತಿಮ್ಮರಸನು ರಾಯನ ಆಸೆಗೆ ಬೆಂಬಲ ಕೊಡಲಿಲ್ಲ.

ತಿಮ್ಮರಸನು ಈ ವಿಷಯವನ್ನು ವಿರೋಧಿಸಲು ಪ್ರಬಲಕಾರಣವಿತ್ತು. ಚಿನ್ನಾದೇವಿ ಕೃಷ್ಣದೇವರಾಯನ ಪತ್ನಿಯಾಗಲು ಎಲ್ಲ ಅರ್ಹತೆಯನ್ನೂ ಪಡೆದಿದ್ದಳು; ಅವಳಲ್ಲಿ ರೂಪವಿತ್ತು, ಯೌವನವಿತ್ತು; ಮೇಲಾಗಿ ರಾಣಿಯ ಘನತೆ, ಹೃದಯ ವೈಶಾಲ್ಯ, ರಾಜಕೀಯ, ಸಾಹಿತ್ಯ ಕಲೆಗಳಲ್ಲಿ ಆಸಕ್ತಿ, ಪ್ರಜೆಗಳನ್ನು ಮಕ್ಕಳಂತೆ ನೋಡುವ ವಿಶಾಲಭಾವನೆ ಎಲ್ಲವೂ ಇತ್ತು. ಅವಳು ಕೃಷ್ಣದೇವರಾಯನಿಗೆ ಆದರ್ಶ ರಾಣಿಯಾಗುವ ಯೋಗ್ಯತೆ ಪಡೆದಿದ್ದಳು.

ಆದರೂ ತಿಮ್ಮರಸನ ಅಭಿಪ್ರಾಯದಲ್ಲಿ ಅವಳು ಸಾಮ್ರಾಟ್ ಕೃಷ್ಣದೇವರಾಯನ ಪಟ್ಟಮಹಿಷಿಯಾಗಲು ಯೋಗ್ಯಳಾಗಿರಲಿಲ್ಲ! ಸುಂದರಿಯೂ, ಸದ್ಗುಣ ಶಾಲಿನಿಯೂ, ರಾಜಲಕ್ಷಣ ಸಂಪನ್ನೆಯೂ ಆಗಿದ್ದ ಚಿನ್ನಾದೇವಿಯ ತಂದೆ ತಾಯಿಗಳ ವಿಷಯವಾಗಲೀ ಅವಳ ಕುಲಗೋತ್ರಗಳ ವಿಷಯವಾಗಲೀ ಯಾರಿಗೂ ತಿಳಿದಿರಲಿಲ್ಲ. ಇಂತಹ ಅಜ್ಞಾತಕುಲದ ಹೆಣ್ಣನ್ನು ಕೃಷ್ಣದೇವರಾಯನು ಪ್ರೇಮಿಸಿದ ಮಾತ್ರಕ್ಕೆ ಅವಳನ್ನು ಪವಿತ್ರ ಸಿಂಹಾಸನದ ಮೇಲೆ ಪಟ್ಟಗಟ್ಟಲು ಸಾಧ್ಯವೆ? ಎಂಬುದೇ ತಿಮ್ಮರಸನ ಮುಂದೆ ಇದ್ದ ಪ್ರಶ್ನೆ! ಅಂತಲೇ ಈ ವಿಷಯ ಪ್ರಸ್ತಾಪವನ್ನು ತಿಮ್ಮರಸನು ವಿರೋಧಿಸಿದ್ದ.

ಆದರೆ ಕೃಷ್ಣದೇವರಾಯನಿಗೆ ತಿಮ್ಮರಸನ ತರ್ಕ ಸರಿಬೀಳಲಿಲ್ಲ. ಕಮಲ ಕೆಸರಿನಲ್ಲಿ ಹುಟ್ಟಿದ ಮಾತ್ರಕ್ಕೆ ಅದರ ಯೋಗ್ಯತೆ ಕಡಿಮೆಯಾಯಿತೆ? ಮುತ್ತು ಚಿಪ್ಪಿನಲ್ಲಿ ಬೆಳೆದ ಮಾತ್ರಕ್ಕೆ ಅದರ ಬೆಲೆ ಕಡಿಮೆಯಾಯಿತೆ? ಹಾಲು ಕೆಚ್ಚಲಿನ ಮಾಂಸದಲ್ಲಿ ಇದ್ದ ಮಾತ್ರಕ್ಕೆ ಅದರ ಗುಣ ಕಡಿಮೆಯಾಯಿತೆ? ಕಸ್ತೂರಿ ಮೃಗದ ನಾಭಿಯಲ್ಲಿ ದೊರೆತ ಮಾತ್ರಕ್ಕೆ ಅದರ ಸುವಾಸನೆ ಕಡಿಮೆಯಾಯಿತೆ? ಎಂದು ಚಿನ್ನಾದೇವಿಯ ವಿಷಯದಲ್ಲಿ ಮೋಹಪರವಶನಾಗಿ, ರಾಯನು ತಾನು ಮದುವೆಯಾದರೆ ಅವಳನ್ನೇ ಎಂದು ಹಠ ಹಿಡಿದು ಕುಳಿತಿದ್ದ. ಈಗ ಒಳ್ಳೆಯ ಸಂದಿಗ್ಧ ಪರಿಸ್ಥಿತಿ ಒದಗಿತ್ತು.

ಚಿನ್ನಾದೇವಿಯ ಕುಲಗೋತ್ರಗಳು ತಿಳಿದಿದ್ದರೆ ಅವಳನ್ನು ಕೃಷ್ಣದೇವರಾಯನು ವಿವಾಹವಾಗಲು ತಿಮ್ಮರಸನು ತಡೆಯೊಡ್ಡುತ್ತಿರಲಿಲ್ಲ. ಅವನಿಗೂ ಚಿನ್ನಾದೇವಿಯ ಗುಣ ರೂಪಗಳು ಮೆಚ್ಚಿಗೆಯಾಗಿತ್ತು. ಆದರೆ ಇದರ ಜೊತೆಗೆ ಅವಳ ವಂಶದ ಚರಿತ್ರೆಯೂ ಸೇರಿದ್ದರೆ? ಎಂದು ಅರಸನು ಆಸೆಪಡುವಂತೆ ಆಯಿತು.

ಚಿನ್ನಾದೇವಿಯ ತಾಯಿ ವಿದ್ಯಾನಗರಕ್ಕೆ ಏಕೆ ಬಂದಳು? ಅವಳ ಊರು ಯಾವುದು? ಅವಳ ತಂದೆ ತಾಯಿ ಗಂಡ ಇವರುಗಳು ಯಾರು? ಎಂಬುದು ಯಾರಿಗೂ ತಿಳಿದಿರಲಿಲ್ಲ. ಅವಳು ರಾಜಧಾನಿಗೆ ಬಂದು ನೆಲೆಸಿದಾಗ ಗರ್ಭಿಣಿಯಾಗಿದ್ದಳು. ಆ ಗರ್ಭದಲ್ಲಿ ಹುಟ್ಟಿದ ಮಗುವೇ ಚಿನ್ನಾದೇವಿ!

ಚಿನ್ನಾದೇವಿಯನ್ನು ಸಾಕಿ ಸಲಹಿ ದೊಡ್ಡವಳನ್ನಾಗಿ ಮಾಡಿದವನು

ರಾಯಸದ ಕೊಂಡಮರಸಯ್ಯ. ಇವನು ಮೊದಲಿಗೆ ವಿಜಯನಗರದ ಆಸ್ಥಾನದಲ್ಲಿ ರಾಯಸದ ಕೆಲಸ ಮಾಡಿಕೊಂಡಿದ್ದ. ಇವನಿಗೆ ಅರುವತ್ತು ನಾಲ್ಕು ವಿದ್ಯೆಗಳು ಬರುತ್ತಿದ್ದುವಂತೆ. ಎಲ್ಲ ದೇಶದ ಭಾಷೆಗಳ ಪರಿಚಯ ವಿತ್ತಂತೆ. ಇವನು ಮೊದಲು ರಾಯಸದ ಕೆಲಸಕ್ಕೆ ಸೇರಿಕೊಂಡು ಅನಂತರ ತನ್ನ ಬುದ್ಧಿಶಕ್ತಿ, ಸ್ವಸಾಮರ್ಥ್ಯಗಳಿಂದ ಮೇಲಕ್ಕೇರುತ್ತ ಬಂದು, ಈಗ ಕೃಷ್ಣದೇವರಾಯನ ಕೈಕೆಳಗೆ ದಂಡನಾಯಕನಾಗಿ ಇದ್ದ.

ಇವನ ಒಬ್ಬನೇ ಮಗ ವಿಜಯಭದ್ರ.

ಕೊಂಡಮರಸಯ್ಯನ ಪತ್ನಿ ತಾರುಣ್ಯದಲ್ಲಿಯೇ ತೀರಿಕೊಂಡಿದ್ದಳು. ಅವಳು ಸತ್ತನಂತರ ಯುದ್ಧವೀರನಾದ ಕೊಂಡಮರಸಯ್ಯ ಬೇರೆ ಮದುವೆ ಮಾಡಿಕೊಳ್ಳಲಿಲ್ಲ. ಆದರೆ ಮಗನನ್ನು ನೋಡಿಕೊಳ್ಳಲು ಒಂದು ಹೆಣ್ಣಿನ ಆವಶ್ಯಕತೆ ಇತ್ತು. ಮಗನಿಗೆ ದಾದಿಯಾಗುವುದರ ಜೊತೆಗೆ ತಾಯಿಯೂ ಆಗಬಲ್ಲ ಹೆಣ್ಣಿನ ಶೋಧನೆಯಲ್ಲಿ ತೊಡಗಿರುವಾಗ ಚಿನ್ನಾದೇವಿಯ ತಾಯಿಯ ಪರಿಚಯವಾಯಿತು.

ಚಿನ್ನಾದೇವಿಯ ತಾಯಿ ಆಗ ತುಂಬ ಕಷ್ಟದಲ್ಲಿ ಇದ್ದಳು. ಅವ ಳೊಬ್ಬಳು ಪರಿತ್ಯಕ್ತ ಹೆಣ್ಣು. ಯಾವ ಕಾರಣಕ್ಕೆ ಪರಿತ್ಯಕ್ತಳಾಗಿದ್ದಳೋ ಯಾರಿಗೂ ತಿಳಿಯದೆ ಇದ್ದರೂ ಜನ ಅವಳ ಬಗ್ಗೆ ಅನೇಕ ದಂತಕಥೆ ಕಟ್ಟಿ ಅವಳ ಜೀವನವನ್ನು ದುಸ್ಸಹನೀಯವಾಗಿ ಮಾಡಿದ್ದರು. ಅವಳಿಗೆ ಆಗ ನಡು ಪ್ರಾಯ. ನೀನೇ ಎನ್ನುವ ಜನವಿಲ್ಲ. ನಿರ್ಗತಿಕಳೂ ಬಡವಳೂ ಆಗಿದ್ದ ಅವಳನ್ನು ಸಮಾಜ ತುಂಬ ಶಂಕೆಯಿಂದ ನೋಡುತ್ತಿತ್ತು; ಕೆಲವು ಧೂರ್ತರು ಅವಳನ್ನು ಕಾಡಲು ತೊಡಗಿದ್ದರು. ಅವಳಿಗೆ ಮರ್ಯಾದೆಯಿಂದ ಬಾಳುವುದೇ ಕಷ್ಟವಾಗಿತ್ತು. ಇಂತಹ ವಿಷಮ ಸನ್ನಿವೇಶದಲ್ಲಿ ಕೊಂಡಮರ ಸಯ್ಯನ ಆಶ್ರಯ ಅವಳಿಗೆ ಸಿಕ್ಕಿತ್ತು. ಅವಳ ಮನೆಯಲ್ಲಿ ವಿಜಯಭದ್ರನ ದಾದಿಯಾಗಿ ನಿಂತ ಮೇಲೆ ಅವಳ ಜೀವಕ್ಕೆ ಒಂದು ನೆಲೆ ಸಿಕ್ಕಿತ್ತು.

ಆದರೆ ಅವಳು ಹೆಚ್ಚು ಕಾಲ ಜೀವಿಸಲಿಲ್ಲ. ಚಿನ್ನಾದೇವಿ ಹತ್ತು ಹನ್ನೆರಡು ವರ್ಷ ವಯಸ್ಸಿನ ಹುಡುಗಿಯಾಗಿದ್ದಾಗ ತಾಯಿ ತುಂಬಾ ಕಾಹಿಲೆ ಬಿದ್ದಳು. ಈ ಕಾಹಿಲೆಯಿಂದ ತಾನು ಉಳಿಯುವುದಿಲ್ಲವೆಂದು ಅವಳಿಗೆ ತಿಳಿದುದರಿಂದಲೇ ಮಗಳನ್ನು ಬಳಿಗೆ ಕರೆದು ಅವಳಿಗೆ ಇದುವರೆಗೆ

ಹೇಳದಿದ್ದ ಒಂದು ಗೋಪ್ಯವಾದ ಸಂಗತಿ—ತನ್ನ ಜೀವನ ವೃತ್ತವನ್ನು—ಹೇಳಿ ಕಣ್ಣು ಮುಚ್ಚಿಕೊಂಡಳು.

ಅವಳ ಪೂರ್ವ ಕಥೆಯನ್ನು ಕೇಳಿದ ಚಿನ್ನಾದೇವಿಗೆ ಆ ಸಮಯದಲ್ಲಿ ಅವುಗಳಿಗೆ ಹೆಚ್ಚು ಬೆಲೆ ಕೊಡದಿದ್ದರೂ ಮುಂದೆ ಅವುಗಳ ಬೆಲೆಯ ಅರಿವಾಯಿತು.

ಚಿನ್ನಾದೇವಿಯ ತಾಯಿಯ ಹೇಳಿಕೆಯಂತೆ ಅವಳೊಬ್ಬಳು ರಾಜಪುತ್ರಿ. ಉತ್ತರದೇಶದ ಒಬ್ಬ ರಾಜಪುತ್ರನ ಮಡದಿ. ಆ ರಾಜಪುತ್ರನಿಗೆ ಹೆಂಡತಿಯ ಮೇಲೆ ಅತಿಯಾದ ಮೋಹವಿತ್ತು. ಅವಳು ರಾಜಪುತ್ರನನ್ನು ಮದುವೆಯಾಗುವುದಕ್ಕಿಂತ ಮುನ್ನ, ಅವಳ ರೂಪಲಾವಣ್ಯಗಳನ್ನು ಕಂಡು ಬೆರಗಾಗಿದ್ದ ರಾಜ ಬಂಧುವೊಬ್ಬ ಅವಳಲ್ಲಿ ಪ್ರಣಯಭಿಕ್ಷೆ ಬೇಡಿದ. ಆದರೆ ಈ ವೇಳೆಗೆ ರಾಜಪುತ್ರನೊಂದಿಗೆ ಅವಳ ವಿವಾಹ ನಿಷ್ಕರ್ಷೆಯಾಗಿದ್ದುದರಿಂದಲೂ, ಆ ರಾಜಬಂಧುವಿನಲ್ಲಿ ಅವಳಿಗೆ ಅಷ್ಟಾಗಿ ಗೌರವವಿಲ್ಲದುದರಿಂದಲೂ ಅವನ ಪ್ರಣಯವನ್ನು ತಿರಸ್ಕರಿಸಿಬಿಟ್ಟಳು. ಇದೇ ಅವಳು ಮಾಡಿದ ಮಹಾಪರಾಧ. ಭಗ್ನಪ್ರಣಯಿಯಾದ ಆ ರಾಜಬಂಧು ಇವಳ ಮೇಲೆ ಸೇಡು ತೀರಿಸಿಕೊಳ್ಳಲು ರಾಜಪುತ್ರನ ಮನಸ್ಸನ್ನು ಸಲ್ಲದ ಅಪವಾದಗಳಿಂದ ಕೆಡಿಸಿ, ಮಡದಿಯನ್ನು—ಅವಳು ಗರ್ಭಿಣಿಯೆಂಬುದನ್ನೂ ವಿಚಾರ ಮಾಡದೆ ಮನೆಯಿಂದ ಹೊರಗೆ ಅಟ್ಟುವಂತೆ ಮಾಡಿದ. ತಾನು ಪವಿತ್ರಳೆಂದೂ, ಕಲಂಕರಹಿತಳೆಂದೂ ಎಷ್ಟು ಹೇಳಿದರೂ ಅವನ ಮನಸ್ಸು ಕರಗಲಿಲ್ಲ. ಅವಳು ತನ್ನ ಹಣೆಯ ಬರಹವನ್ನು ಶಪಿಸಿಕೊಂಡು, ಬದುಕಿರುವುದು ಇಷ್ಟವಿಲ್ಲದೆ ಬಳಿಯಲ್ಲಿದ್ದ ಹೊಳೆಯಲ್ಲಿ ಬಿದ್ದು ಪ್ರಾಣ ತೆಗೆದುಕೊಳ್ಳಲು ಪ್ರಯತ್ನಿಸಿದಳು. ಆಗ ಅಲ್ಲಿಗೆ ಸ್ನಾನಾಹ್ನಿಕಗಳಿಗೆಂದು ಬಂದಿದ್ದ ಒಬ್ಬ ಸನ್ಯಾಸಿಯು ಅವಳ ನೆರವಿಗೆ ಬಂದು, ಅವಳ ತಲೆಯಿಂದ ಆತ್ಮಹತ್ಯೆಯ ವಿಚಾರವನ್ನು ತೆಗೆದುಹಾಕಿದ್ದ. ಇಂದಲ್ಲ ನಾಳೆ ಸತ್ಯವು ಪ್ರಕಾಶಕ್ಕೆ ಬಂದೇ ಬರುವುದೆಂದು ಭರವಸೆ ಕೊಟ್ಟ. ಅವಳನ್ನು ವಿದ್ಯಾನಗರಕ್ಕೆ ಕರೆತಂದು, ಯಾರೋ ಧರ್ಮಾತ್ಮರ ಆಶ್ರಯದಲ್ಲಿ ಬಿಟ್ಟು ಹೋಗಿದ್ದ. ಅಲ್ಲೇ ಚಿನ್ನಾದೇವಿಯು ಹುಟ್ಟಿದ್ದು. ಆ ಆಶ್ರಯದಾತ ಸತ್ತನಂತರ ಅವಳು ಕೊಂಡಮರಸಯ್ಯನ ಆಶ್ರಯಕ್ಕೆ ಬಂದಿದ್ದಳು.

ತಾಯಿ ಸತ್ತಮೇಲೆ ಚಿನ್ನಾದೇವಿಯನ್ನು ಕೊಂಡಮರಸಯ್ಯನು ಹೊಟ್ಟೆಯ ಮಗಳಂತೆ ಸಾಕಿ ದೊಡ್ಡವಳನ್ನಾಗಿ ಮಾಡಿದ್ದ. ಅವಳ ಚುರುಕು ತನ, ಧೈರ್ಯಸ್ಥೈರ್ಯಗಳನ್ನು ಕಂಡು, ಅವಳಲ್ಲಿದ್ದ ರಾಜಲಕ್ಷಣಗಳನ್ನು ಕಂಡು ಮುಂದೆ ಪ್ರವರ್ಧಮಾನಕ್ಕೆ ಬರುವ ಹುಡುಗಿ ಇವಳೆಂದು ತಿಳಿದು ಅವಳಿಗೆ ಕ್ಷತ್ರಿಯ ರಮಣಿಯರಿಗೆ ಉಚಿತವಾದ ಎಲ್ಲ ವಿದ್ಯೆಗಳಲ್ಲಿ ಶಿಕ್ಷಣ ಕೊಟ್ಟನು. ತಾನೇ ನಿಂತು, ಅವಳಿಗೆ ಕುದುರೆ ಸವಾರಿ, ಕತ್ತಿವರಸೆ, ಬೇಟೆಗಳಲ್ಲಿ ತಯಾರುಮಾಡಿದನು. ಈ ವೀರವಿದ್ಯೆಗಳಲ್ಲಿ ಅವಳಿಗೆ ಇದ್ದ ಆಸಕ್ತಿಯನ್ನು ಕಂಡು ಅವನಿಗೆ ಅವಳು ಕ್ಷತ್ರಿಯ ವಂಶದಲ್ಲಿ ಹುಟ್ಟಿದವಳೆಂಬುದರ ಬಗ್ಗೆ ಸಂಶಯ ಬರಲಿಲ್ಲ. ಅವನಿಗೆ ಚಿನ್ನಾದೇವಿಗೆ ತಾನು ಕಲಿಸಿಕೊಟ್ಟ ವಿದ್ಯೆ ಸಾಲದೆಂದು ಅನಿಸಿ, ಅವಳನ್ನು ಸಾಹಿತ್ಯ ಸಂಗೀತ ಕಲೆಗಳಲ್ಲಿ ಪಾರಂಗತ ಳನ್ನಾಗಿ ಮಾಡಲು ಮಗನ ಜೊತೆಯಲ್ಲಿ ಅವಳನ್ನೂ ಗುರುಕುಲದಲ್ಲಿ ಇಟ್ಟು ಶಿಕ್ಷಣ ಕೊಡಿಸಿದನು.

ಇದೇ ವೇಳೆಯಲ್ಲಿ ಸಾಮ್ರಾಜ್ಯದ ದಿಗಂತದಲ್ಲಿ ಕಾವಳ ಮುಸುಕಿತು. ಸಾಮ್ರಾಜ್ಯದ ಭೂಪಾಲನು ಕಾಹಿಲೆ ಮಲಗಿದನು. ಅವನು ದುರ್ಬಲನೂ, ವಿಷಯಲಂಪಟನೂ ಆಗಿದ್ದನು—ಅವನ ಕಾಲದಲ್ಲಿ ಆಡಳಿತ ಕುಸಿದುಬಿದ್ದ ದೇಶದಲ್ಲಿ ಅನಾಯಕತೆಯುಂಟಾಗಿತ್ತು. ಈ ಸಮಯ ಸಾಧಿಸಿ ಸಾಮಂತರು ಸ್ವತಂತ್ರರಾದರು. ಶತ್ರುಗಳು ಕೈಬಿಟ್ಟು ಹೋಗಿದ್ದ ಪ್ರದೇಶಗಳನ್ನು ವಶ ಪಡಿಸಿಕೊಳ್ಳುವ ಸನ್ನಾಹದಲ್ಲಿ ಇದ್ದರು.

ದಿನದಿನಕ್ಕೂ ವೀರನರಸಿಂಹನ ಕಾಯಿಲೆ ಹೆಚ್ಚುತ್ತಾ ಹೋಯಿತು. ಎಲ್ಲರಿಗೂ ಅವನು ಈ ಕಾಹಿಲೆಯಿಂದ ಚೇತರಿಸಿಕೊಳ್ಳುವುದಿಲ್ಲವೆಂದು ತಿಳಿ ದಿತ್ತು. ಇದನ್ನು ಅವನೂ ತಿಳಿದಿದ್ದನೋ ಏನೋ! ತನ್ನನಂತರ ತನ್ನ ಮಗನು ಪಟ್ಟಕ್ಕೆ ಬರಬೇಕೆಂದು ಬಯಸಿ, ಅವನು ಪಟ್ಟಕ್ಕೆ ಬರಲು ಕಂಟಕ ರಾಗಿದ್ದ ತಮ್ಮ ಕೃಷ್ಣದೇವರಾಯನನ್ನು ನಿವಾರಿಸಲು ಉಪಾಯ ಮಾಡಿ ದನು. ಮಂತ್ರಿಯಾದ ತಿಮ್ಮರಸನಿಗೆ ತನ್ನ ಹೃದ್ಗತವನ್ನು ತಿಳಿಯಪಡಿಸಿ, ಕೃಷ್ಣದೇವರಾಯನ ಕಣ್ಣುಗಳನ್ನು ಕಿತ್ತು ತಂದು ತೋರಿಸಲು ಕೋರಿದನು.

ತಿಮ್ಮರಸನಿಗೆ ಅರಸರ ಮಾತನ್ನು ಮೀರಲಾರದೆ, ಕೃಷ್ಣದೇವರಾಯನ ಕಣ್ಣುಗಳನ್ನು ಕಿತ್ತು ಅವನನ್ನು ಕುರುಡನನ್ನಾಗಿ ಮಾಡಲಾರದೆ, ಏನು

ಮಾಡಬೇಕೆಂಬುದು ತಿಳಿಯದಾಯಿತು. ಕಡೆಗೆ, ವೀರನೂ, ಸಶಕ್ತನೂ ಆಗಿದ್ದ ಕೃಷ್ಣದೇವರಾಯನನ್ನು ಹೇಗಾದರೂ ಮಾಡಿ ಉಳಿಸಿ, ವೀರನರಸಿಂಹನನಂತರ ಅವನಿಗೇ ಪಟ್ಟ ಕಟ್ಟಬೇಕೆಂದು ನಿರ್ಧರಿಸಿ, ಒಂದು ಉಪಾಯ ಮಾಡಿದನು—ಕೃಷ್ಣದೇವರಾಯನನ್ನು ಕೆಲವು ಕಾಲ ಅಜ್ಞಾತದಲ್ಲಿ ಇರುವಂತೆ ಮಾಡಿ, ಅವನ ಕಣ್ಣಿನ ಬದಲು ಆಡಿನ ಕಣ್ಣುಗಳನ್ನು ಕಿತ್ತು ತಂದು ವೀರನರಸಿಂಹನಿಗೆ ತೋರಿಸಿ, ಕೃಷ್ಣದೇವರಾಯನನ್ನು ಅಂಧನನ್ನಾಗಿ ಮಾಡಲಾಯಿತೆಂಬ ಸಂತೋಷದ ವಾರ್ತೆಯನ್ನು ತಿಳಿಸಿದನು. ಇದನ್ನು ನಿಜವೆಂದು ನಂಬಿ, ವೀರನರಸಿಂಹನು ನಿಶ್ಚಿಂತೆಯಿಂದ ತೀರಿಕೊಂಡನು.

ಅವನು ಸತ್ತನಂತರ ತಿಮ್ಮರಸನು ಮಾಡಿದ ಮೊದಲ ಕೆಲಸವೆಂದರೆ ಅಜ್ಞಾತದಲ್ಲಿ ಕೃಷ್ಣದೇವರಾಯನನ್ನು ಕರೆತಂದು ಪಟ್ಟಕಟ್ಟಿದುದು.

ಆಗಲೇ ಕೃಷ್ಣದೇವರಾಯನ್ನು ಚಿನ್ನಾದೇವಿಯನ್ನು ಪಟ್ಟದ ರಾಣಿಯನ್ನಾಗಿ ಮಾಡಿಕೊಳ್ಳಲು ಇಚ್ಛೆಪಟ್ಟುದು.

ಕೃಷ್ಣದೇವರಾಯನು ಅಜ್ಞಾತವಾಗಿದ್ದ ಕಾಲದಲ್ಲಿ ಅವನು ಚಿನ್ನಾದೇವಿಯನ್ನು ಕಂಡು ಮಾರುಹೋಗಿದ್ದ.

ಆಗ ವಿಜಯಭದ್ರ ಚಿನ್ನಾದೇವಿಯರು ಗುರುಕುಲದಲ್ಲಿ ಧನುರ್ವಿದ್ಯೆಯನ್ನು ಕಲಿಯುತ್ತಿದ್ದರು. ಒಮ್ಮೆ ಅವರು ಬೇಟೆಯ ನಿಮಿತ್ತವಾಗಿ ಬಳಿಯಲ್ಲಿಯೇ ಇದ್ದ ಕಾಡಿಗೆ ಹೋಗಿದ್ದರು.

ಆಗ ಚಿನ್ನಾದೇವಿಗೆ ಇನ್ನೂ ಹದಿನಾರು ವರ್ಷದ ಪ್ರಾಯ. ನೋಡಲು ತಂಬ ಲಕ್ಷಣವಾಗಿದ್ದಳು. ಅವಳ ಮುಖದಲ್ಲಿ ರಾಜಪುತ್ರಿಯ ಕಳೆ ಇತ್ತು. ಅವಳು ಸಾಮಾನ್ಯ ಉಡಿಗೆಯಲ್ಲಿ ಇದ್ದರೂ ಮಹಾರಾಣಿಯ ತೇಜಸ್ಸಿತ್ತು.

ಅವಳು ಕಾಡಿನ ದುಷ್ಟಮೃಗಗಳಿಗೆ ಮಾತ್ರ ತಮ್ಮ ಬಾಣಗಳ ಸವಿಯನ್ನು ತೋರಿಸುತ್ತಾ, ಅಲ್ಲಿ ವಿನೋದವಾಗಿ ವಿಹರಿಸುತ್ತಿರುವಾಗ, ಅವರ ಕಣ್ಣಮುಂದೆ ಬಂದು ಹೆಣ್ಣು ಜಿಂಕೆ—ತುಂಬಿದ ಗರ್ಭಿಣಿ—ಹಾದುಹೋಯಿತು. ಅದನ್ನು ಹೊಡೆಯಲು ಕೃಷ್ಣದೇವರಾಯನು ಬಹು ದೂರದಿಂದ ಅನುಸರಿಸಿಕೊಂಡು ಬಂದಿದ್ದ. ಅದು ಅಲ್ಲಿ ಅವನ ಕೈಗೆ ಸಿಕ್ಕಿಬಿದ್ದಿತ್ತು. ಬಿಲ್ಲಿಗೆ ಬಾಣವನ್ನು ಹೂಡಿ ಇನ್ನೇನು ಬಿಡಬೇಕೆನ್ನುವುದರಲ್ಲಿ ಅವನ ಬಿಲ್ಲು ಕಡಿದು ನೆಲಕ್ಕೆ ಬಿದ್ದಿತು. ತನ್ನ ಬಿಲ್ಲನ್ನು ತನ್ನ ಕೈಲಿರುವಂತೆ, ತನಗೆ

ಗಾ ಯವಾಗದಂತೆ ತುಂಡರಿಸಿದ ಬಿಲ್ಗಾರರು ಯಾರೆಂದು ನೋಡಲು ಎದು ರಿಗೆ ಚಿನ್ನಾದೇವಿ ನಗುತ್ತ ನಿಂತಿದ್ದಳು. ಅವಳನ್ನು ನೋಡಿ ರಾಯನಿಗೆ ವನ ದೇ ವಿಯನ್ನು ಕಂಡಂತೆ ಆಯಿತು. ಅವಳು, "ಕ್ಷತ್ರಿಯ ವೀರರಾದ ನೀವು ನಿ ರಪರಾಧಿಯಾದ ಆ ಗರ್ಭಿಣಿ ಜಿಂಕೆಯನ್ನು ಹೊಡೆಯಲು ನಾಚಿಕೆ ಯಾಗುವುದಿಲ್ಲವೇ?" ಎಂದು ಮೂದಲಿಸಿದಳು.

ಕೃಷ್ಣದೇವರಾಯನು ಬೇಟೆಯ ಮಾತು ತೆಗೆದಾಗ,

"ನಿಮ್ಮಂತಹ ವೀರರು ದುಷ್ಟಮೃಗಗಳನ್ನು ಕೊಂದು ನಿಮ್ಮ ಶೌರ್ಯ ವನ್ನು ಪ್ರದರ್ಶಿಸಬೇಕೇ ಹೊರತು ಇಂತಹ ಸಾಧುಪ್ರಾಣಿಗಳನ್ನಲ್ಲ–"ಎಂದು ಮನಮುಟ್ಟುವಂತೆ ಚುರುಕಾಗಿ ಹೇಳಿದಳು.

ಈಗ ಕೃಷ್ಣದೇವರಾಯನಿಗೆ ವಿವೇಕೋದಯವಾಯಿತು. ಚಿನ್ನಾ ದೇವಿಯ ಮಾತು ಸರಿ ಎನಿಸಿತು. ಅವನು ಅವಳ ಕ್ಷಮೆ ಯಾಚಿಸಿದ. ಅನಂತರ ಅವಳು ಯಾರು, ಎಲ್ಲಿಂದ ಬಂದಳು ಎಂದು ತಿಳಿಯುವ ಕುತೂ ಹಲವಾಯಿತು.

ಚಿನ್ನಾದೇವಿ ತನ್ನ ಎಲ್ಲ ಕಥೆಯನ್ನು ಸೂಕ್ಷ್ಮವಾಗಿ ತಿಳಿಸಿದಳು. ಕೃಷ್ಣದೇವರಾಯನಿಗೆ ಚಿನ್ನಾದೇವಿಯ ಧೈರ್ಯ ದಿಟ್ಟತನ, ಭೂತಾನುಕಂಪ ಗಳನ್ನು ನೋಡಿ ಗೌರವ ಉಂಟಾಯಿತು. ಅವಳ ಗುಣ, ರೂಪಗಳನ್ನು ಕಂಡು ಅವಳಲ್ಲಿ ಅವನಿಗೆ ಅನುರಾಗ ಉಂಟಾಯಿತು. ಮುಂದೆ ಇದೇ ಪ್ರಣಯ ವೃಕ್ಷವಾಗಿ ಬೆಳೆದು, ಅವರು ಪರಸ್ಪರ ಗಾಂಧರ್ವ ರೀತ್ಯಾ ವಿವಾಹವಾದರು.

ಈ ವಿವಾಹ ಬಹಳ ಕಾಲ ಗೋಪ್ಯವಾಗಿಯೇ ಇತ್ತು. ತನ್ನ ನೆಲೆಯೇ ಇನ್ನೂ ಭದ್ರವಾಗಿಲ್ಲದೆ ಇದ್ದುದರಿಂದ ರಾಯನು ಇದನ್ನು ತಿಮ್ಮರಸನಿಗೂ ತಿಳಿಸಿರಲಿಲ್ಲ. ಆದರೆ ವೀರನರಸಿಂಹನು ಸತ್ತು, ಕೃಷ್ಣದೇವರಾಯನು ಸಿಂಹಾಸನವನ್ನು ಏರಿದಾಗ, ಚಿನ್ನಾದೇವಿಯನ್ನು ಎಲ್ಲರಿಗೂ ತಿಳಿಯುವಂತೆ ಪಟ್ಟಮಹಿಷಿಯನ್ನಾಗಿ ಮಾಡಿಕೊಳ್ಳಲು ನಿರ್ಧರಿಸಿದ.

ಇದಕ್ಕೆ ತಿಮ್ಮರಸನು ಅನುಮೋದಿಸದೆ ಹೋದುದರಿಂದ ಕೃಷ್ಣದೇವ ರಾಯನಿಗೆ ತುಂಬ ದುಃಖವಾಯಿತು. ತಾನು ಸಾಮ್ರಾಟನಾದರೂ ತನ್ನ ಮನ ಮೆಚ್ಚಿದವರನ್ನು ಪಟ್ಟಮಹಿಷಿಯನ್ನಾಗಿ ಮಾಡಿಕೊಳ್ಳುವ ಅಧಿಕಾರ ತನಗೆ ಇಲ್ಲದುದಕ್ಕಾಗಿ ತುಂಬ ವ್ಯಥೆಪಟ್ಟ. ತಾನು ಮದುವೆಯಾಗುವುದಾದರೆ ಚಿನ್ನಾ

ದೇವಿಯನ್ನು ಮಾತ್ರ ಮದುವೆಯಾಗುವುದಾಗಿಯೂ ಇಲ್ಲದೆ ಇದ್ದರೆ ಮ
ವೆಯೇ ಬೇಡವೆಂದೂ ಎಳೆಯ ಮಗುವಿನಂತೆ, ಹಠಹಿಡಿದ ಸಾಮ್ರಾಟನ
ನೋಡಿ ಅವನನ್ನು ಹೇಗೆ ದಾರಿಗೆ ತರುವುದೆಂದು ತಿಳಿಯದೆ ತಿಮ್ಮರಸ
ಬಹಳ ವಿಹ್ವಲಗೊಂಡನು. ಚಿನ್ನಾದೇವಿಯನ್ನು ಬೇಗ ಕಾಂತೆಯನ್ನಾ
ಮಾಡಿಕೊಳ್ಳಲು ಹೇಳಿದ ಮಾತಿಗೆ ಕೃಷ್ಣದೇವರಾಯನು ತಿಮ್ಮರಸನ ಮೇ
ಕಿಡಿಕಿಡಿಯಾಗಿದ್ದ. ತಾನು ಧರ್ಮರೀತಿಯಾಗಿ ವರಿಸಿದ. ಪತ್ನಿ ಅವಳೆಂದೂ
ಭೋಗಕಾಂತೆ ಎಂದು ಕರೆದು ಅವಳಿಗೆ ದ್ರೋಹ ಬಗೆಯುವುದಿಲ್ಲವೆಂದೂ,
ಖಂಡಿತವಾಗಿ ಹೇಳಿದ. ಅವಳ ಮೇಲಿನ ಅನುರಾಗವನ್ನು ಕಂಡು ಬೇ
ದಾರಿ ಕಾಣದೆ ತಿಮ್ಮರಸನು ಒಂದು ಸಲಹೆ ಮಾಡಿದನು.

ಚಿನ್ನಾದೇವಿಯನ್ನು ರಾಣಿಯನ್ನಾಗಿ ಮಾಡಿಕೊಳ್ಳುವ ಬಗ್ಗೆ ತನ
ಅಭ್ಯಂತರವಿಲ್ಲವೆಂದೂ, ಇದಕ್ಕೆ ಮೊದಲು ಸತ್ಕುಲ ಪ್ರಸೂತೆಯಾದ ಕೃಷ್ಣ
ದೇವರಾಯನಂತಹ ಸಾಮ್ರಾಟನ ಪಟ್ಟಮಹಿಷಿಯಾಗ ಬಲ್ಲ ಹಿರಿ
ಗುಣಗಳ ರಾಜಪುತ್ರಿಯೊಬ್ಬಳನ್ನು ಮದುವೆಯಾಗಬೇಕೆಂದು ಆಗ್ರಹಪಡಿ
ದನು. ಈ ಸಲಹೆಗೆ ಕೃಷ್ಣದೇವರಾಯನು ನಿರ್ವಾಹವಿಲ್ಲದೆ ಒಪ್ಪಬೇಕ
ಯಿತು. ಅದರಂತೆ ನಾಲ್ಕಾರು ದೇಶಗಳ ರಾಜಪುತ್ರಿಯರ ಭಾವಚಿತ್ರಗಳನ್ನು
ತರಿಸಿ, ಕಡೆಗೆ ಶ್ರೀರಂಗಪಟ್ಟಣದ ಮಹಾಮಂಡಲೇಶ್ವರನಾದ ಕುಮಾ
ವೀರಯ್ಯನ ಮಗಳಾದ ತಿರುಮಲಾದೇವಿಯನ್ನು ಕೃಷ್ಣದೇವರಾಯನಿಗೆ ತಕ
ವಧುವೆಂದು ಆರಿಸಿದರು. ಅವಳೊಂದಿಗೆ ಕೃಷ್ಣದೇವರಾಯನ ವಿವಾ
ಅತ್ಯಂತ ವಿಜೃಂಭಣೆಯಿಂದ ನೆರವೇರಿತು.

ತಿರುಮಲಾದೇವಿಯನ್ನು ಮದುವೆಯಾದ ಮೇಲೆ, ಕೃಷ್ಣದೇ
ರಾಯನು ಚಿನ್ನಾದೇವಿಯನ್ನೂ ಶಾಸ್ತ್ರೋಕ್ತವಾಗಿ ಮದುವೆಯಾಗಿ ಅವಳಿಗು
ರಾಣಿಯ ಸ್ಥಾನಮಾನಗಳನ್ನು ಕಲ್ಪಿಸಿಕೊಟ್ಟನು. ರಾಯನಿಗೆ ಎಲ್ಲ ರಾ
ಯರಿಗಿಂತ ಚಿನ್ನಾದೇವಿಯ ಮೇಲೆ ವ್ಯಾಮೋಹವಿತ್ತು. ಇದಕ್ಕೆ ತಕ್ಕಂ
ಚಿನ್ನಾದೇವಿಯ ಹೊಟ್ಟೆಯಲ್ಲಿ ಒಂದು ಗಂಡು ಸಂತಾನವಾಗಿತ್ತು. ಇದರಿಂ
ಚಿನ್ನಾದೇವಿಯ ಹೆಗ್ಗಳಿಕೆ ಹೆಚ್ಚಾಗಿತ್ತು.

ಈ ಕುಮಾರನನ್ನು ಕಂಡರೆ ಕೃಷ್ಣದೇವರಾಯನಿಗೆ ಪಂಚಪ್ರಾಣವಾ
ಗಿತ್ತು. ತನ್ನ ಹಾಗೂ ಚಿನ್ನಾದೇವಿಯ ಅನ್ಯೋನ್ಯ ದಾಂಪತ್ಯ ಜೀವನ

ಸುಮಧುರ ಫಲ ಅದು. ಅವನು ನೋಡಲು ತಾಯಿಯಂತೆಯೇ ಸುಂದರನೂ ತೇಜಸ್ವಿಯೂ ಆಗಿದ್ದ. ಅವನ ಬಾಲಲೀಲೆಗಳನ್ನು ನೋಡುತ್ತ ಕುಳಿತರೆ ಕೃಷ್ಣದೇವರಾಯನಿಗೆ ಸಮಯ ಸರಿಯುತ್ತಿದ್ದುದೇ ತಿಳಿಯುತ್ತಿರಲಿಲ್ಲ. ಅತ್ತ ಮೋಹದ ಮಡದಿ—ಇತ್ತ ಮೋಹದ ಮಗ. ಇವರ ಪ್ರೀತಿಯ ಒಡನಾಟದಲ್ಲಿ ರಾಯನು ತಾನು ಸುಖಿ ಎಂದು ತಿಳಿದ. ತನ್ನ ಸುಖದ ಸೀಮೆಗೆ ಮೇರೆಯಿಲ್ಲವೆಂದು ಬಗೆದ.

ಈ ಮಧ್ಯೆ ಕೃಷ್ಣದೇವರಾಯನು ಬಿಜಾಪುರದ ಮೇಲೆ ನಡಸಿದ ದಂಡಯಾತ್ರೆಯಲ್ಲಿ ಶತ್ರುಗಳ ಸಂಚಿಗೆ ಒಳಗಾಗಿ ಪ್ರಾಣಾಪಹಾರದ ವಿಪತ್ತಿನಿಂದ ಪಾರಾಗಿದ್ದ. ಮೈಮೇಲೆ ಒಂದೆರಡು ಗಾಯಗಳಾದರೂ, ಪ್ರಾಣ ಉಳಿದುದು ಪಂಪಾಪತಿಯ ದಯದಿಂದಲೇ. ಈ ಬಾರಿ ರಾಯನು ಉಳಿದುಕೊಂಡುದು ಮತ್ತೆ ಪೂರ್ವಜನ್ಮ ಬಂದಂತೆ ಆಗಿತ್ತು.

ರಾಯನ ಗಾಯಗಳು ವಾಸಿಯಾಗಿ ಅವನು ಮೊದಲಿನ ವ್ಯಕ್ತಿಯಾಗಲು ನಾಲ್ಕೈದು ತಿಂಗಳು ಹಿಡಿದುವು. ಗಾಯಗಳು ವಾಸಿಯಾದರೂ ದೇಹದಲ್ಲಿ ಇನ್ನೂ ನಿಶ್ಶಕ್ತಿ ಇತ್ತು. ಅಂತಲೇ ರಾಯನು ಯಾವ ಸಂಧಿವಿಗ್ರಹಗಳಲ್ಲೂ ತೊಡಗದೆ ಚಿನ್ನಾದೇವಿಯ ಅಂತಃಪುರದಲ್ಲಿ ವಿಶ್ರಾಂತಿ ಸುಖವನ್ನು ಅನುಭವಿಸುತ್ತಿದ್ದ.

ಈ ಅವಧಿಯಲ್ಲಿ ರಾಯನ ಮೇಲೆ ಚಿನ್ನಾದೇವಿಯ ವರ್ಚಸ್ಸು ಬಹುವಾಗಿ ಬೆಳೆದಿತ್ತು. ರಾಯನು ಮೊದಲಿನಂತೆ ಇತರ ರಾಣಿಯರ ಅಂತಃಪುರಗಳಿಗೆ ಬರುವುದು ಅಪರೂಪವಾಗಿತ್ತು. ಎಂದಾದರೂ ಮಗ ತಿರುಮಲದೇವನನ್ನು ನೋಡುವ ಆಸೆಯಾದರೆ ತಿರುಮಲಾದೇವಿಯ ಅಂತಃಪುರಕ್ಕೆ ಬಂದು ಕೊಂಚ ಹೊತ್ತು ಇದ್ದು ಹೋಗುತ್ತಿದ್ದ. ಬೇರೆ ರಾಣಿಯರಿಗೆ ಆ ಸೌಭಾಗ್ಯವೂ ಇರಲಿಲ್ಲ.

ತಿರುಮಲಾದೇವಿಗೆ ಪಟ್ಟಮಹಿಷಿಯಾದ ತನ್ನನ್ನು ರಾಯನು ನಿರ್ಲಕ್ಷಿಸಿದ್ದುದರಿಂದ ಕೋಪ ಬರಲಿಲ್ಲ. ಆದರೆ ತನ್ನ ಮಗನನ್ನು ಮುಂದೆ ಚಕ್ರವರ್ತಿಯಾಗುವ ಮಗನನ್ನು, ನೋಡುವ ಸಲುವಾಗಿ ರಾಯನು ತನ್ನ ಅಂತಃಪುರಕ್ಕೆ ಬರುತ್ತಿಲ್ಲವಲ್ಲ, ಎಂದು ಅವಳಿಗೆ ವ್ಯಥೆಯಾಗುತ್ತಿತ್ತು. ಆದರೆ ಬಾಲ್ಯದಿಂದಲೂ ಅಲ್ಪ ತೃಪ್ತಿಯನ್ನು ಹಿರಿಯ ಗುಣವಾಗಿ ಪಡೆದಿದ್ದ ತಿರುಮಲ

ದೇವಿಗೆ, ರುಚಿದೇವಿ, ಅನ್ನಪೂರ್ಣಾದೇವಿಯರಿಗೆ ಒದಗಿದ್ದ ದುಃಸ್ಥಿತಿಯನ್ನು ನೆನೆದು ಅವರಿಗಿಂತ ತನ್ನ ಸ್ಥಿತಿ ಎಷ್ಟೋ ಉತ್ತಮವೆಂದು ಒಂದು ಬಗೆಯ ಸಂತೋಷವೇ ಆಗುತ್ತಿತ್ತು.

ಒಮ್ಮೆ ಯಾವುದೋ ಮಾತಿಗೆ ಮಾತು ಬಂದು ತಿಪ್ಪಾಜಿಯೊಡನೆ ತನ್ನ ಸೌಭಾಗ್ಯವನ್ನು ಹೇಳಿಕೊಳ್ಳುತ್ತಿದ್ದಾಗ ತಿಪ್ಪಾಜಿಗೆ ಅವಳ ಮಾತು ಕೇಳಿ ಬೇಸರವಾಯಿತೇನೊ; ಅವಳೆಂದಳು:

"ಪಟ್ಟಮಹಿಷಿಯಾದ ತಮಗೆ ಇಷ್ಟು ಸೌಭಾಗ್ಯವಿದ್ದರೆ ಸಾಕು. ನಿಮ್ಮ ಅದೃಷ್ಟಕ್ಕೆ ಎಣೆಯೇ ಇಲ್ಲ" ಎಂದು ಜರೆದಳು.

ಈ ಮಾತಿನಲ್ಲಿ ಅಡಗಿರುವ ವ್ಯಂಗ್ಯವನ್ನು ಕಂಡರೂ ತಾನು ಬೇರೆ ರಾಣಿಯ ರಿಗಿಂತ ನಿಜವಾಗಿಯೂ ಪುಣ್ಯಶಾಲಿಯೇ ಎಂದು ಹೇಳಿದಳು ತಿರುಮಲಾದೇವಿ.

"ಮಹಾರಾಣಿಯಾಗಿರುವ ನಿಮಗೆ ಪ್ರಭುಗಳ ಪ್ರೀತಿ ಇಷ್ಟೇ ಸಾಕ ಲ್ಲವೆ? ನೀವು ತಿಳಿದೂ ತಿಳಿದೂ ಅಜ್ಞರಂತೆ ಮಾತನಾಡುತ್ತಿರುವಿರಲ್ಲ! ನಿಮ್ಮ ಯೋಗ್ಯತೆ ಏನು?....ಚೆನ್ನಾಯಿತು! ನಾಳಿನ ಚಕ್ರೇಶ್ವರನ ತಾಯಿ ಯಾದ ತಾವು—ಇಡೀ ಸಾಮ್ರಾಜ್ಯವನ್ನು ಮುಷ್ಟಿಯಲ್ಲಿಟ್ಟುಕೊಂಡು ಆಳ ಬಲ್ಲ ಸಾಮ್ರಾಟನ ರಾಜಮಾತೆಯಾದ ತಮಗೆ ಇತರರು ಸರಿಸಾಟಿಯೆ? ಆಲೋಚಿಸಿ. ಪವಿತ್ರ ಸಿಂಹಾಸನದಲ್ಲಿ ಮಹಾಪ್ರಭುಗಳ ಪಕ್ಕದಲ್ಲಿ ಕೂಡುವ ಹಕ್ಕು ಯಾರಿಗೆ ಇದೆ ಆಲೋಚಿಸಿ! ಸಮಸ್ತ ಸಾಮಂತ ಮಾಂಡ ಲೀಕರಿಂದ, ಓಲೈಸಿಕೊಳ್ಳಬಲ್ಲ ಸಾಕ್ಷಾತ್ ದೇವತಾ ಸ್ವರೂಪಿಣಿಯರಾದ ತಮ್ಮ ಮುಂದೆ ಇತರ ರಾಣಿಯರೆ? ಮಹಾಸ್ವಾಮಿಯವರು ನಿಮ್ಮನ್ನು ನಿರ್ಲಕ್ಷಿಸಿ, ಆ ಚಿನ್ನಾದೇವಿಗೆ ಪುರಸ್ಕಾರ ಕೊಟ್ಟ ಮಾತ್ರಕ್ಕೆ ನೀವೇಕೆ ನಿಮ್ಮ ಯೋಗ್ಯತೆಯನ್ನೂ ಘನತೆ ಗೌರವಗಳನ್ನೂ ಕಡಿಮೆಮಾಡಿಕೊಳ್ಳಬೇಕು?" ಎಂದು ಮೂದಲಿಸಿದಳು ತಿಪ್ಪಾಜಿ.

ತಿಪ್ಪಾಜಿಯ ಮಾತಿನಲ್ಲಿ ಅಡಗಿರುವ ವಾಸ್ತವ ಸತ್ಯವನ್ನು ಕಂಡು ತಿರುಮಲಾದೇವಿಗೂ ಅವಳ ಮಾತು ಸರಿ ಎನಿಸಿತು. ಆದರೆ ಮಹಾರಾಜರ ದೃಷ್ಟಿಯಲ್ಲಿ ತನ್ನ ಸ್ಥಾನಮಾನ ಕಡಮೆಯಾದರೆ, ಯಥಾ ರಾಜಾ ತಥಾ ಪ್ರಜಾ ಎಂಬ ನಾಣ್ಣುಡಿಯಂತೆ ಆಗದೇ? ಎಂಬುದೇ ತಿರುಮಲಾದೇವಿಯ ಮುಂದೆ ಇದ್ದ ವಿಚಾರ. ಇಂತಹ ವಿಚಾರಗಳು ತಲೆಯನ್ನು ತುಂಬಿದಾಗ ತಿರುಮಲಾ

ದೇವಿಯ ಮನಸ್ಸಿಗೆ ಬಹಳ ಖೇಧವಾಗುತ್ತಿತ್ತು. ಆಗ ಅವಳನ್ನು ಹುರಿ ದುಂಬಿಸಬಲ್ಲವಳೆಂದರೆ ತಿಪ್ಪಾಜಿಯೇ.

"ನೀವು ಅನ್ಯಥಾ ಚಿಂತಿಸಬಾರದು. ನಮ್ಮ ಈ ಚಿರಂಜೀವಿ ಇರುವ ತನಕ ನಿಮ್ಮ ಸ್ಥಾನಕ್ಕೆ ಚ್ಯುತಿಯಿಲ್ಲ. ನೀವು ಎಂದಿದ್ದರೂ ಪಟ್ಟಮಹಿಷಿ! ಎಂದಿದ್ದರೂ ರಾಜಮಾತೆ! ಇದನ್ನು ಯಾರೂ ತೊಡೆದುಹಾಕಲಾರರು" ಎಂದು ಹೇಳುತ್ತಿದ್ದಳು ತಿಪ್ಪಾಜಿ.

—ಮಹಾರಾಣಿಯ ಮನಸ್ಸನ್ನು ಬೇರೆ ಕಡೆ ಹರಿಸಲು ಚಿನ್ನದ ತೊಟ್ಟಲಿನಲ್ಲಿ ಪ್ರಶಾಂತ ನಿದ್ರೆಯಲ್ಲಿ ಮಲಗಿರುವ ಮುದ್ದು ಮಗು ತಿರುಮಲ ದೇವನನ್ನು ತಾಯಿಗೆ ತೋರಿಸುತ್ತಾ,

"ನೋಡಿ, ನಾಳಿನ ಸಾಮ್ರಾಟ ಹೇಗೆ ಯಾವ ಚಿಂತೆಯೂ ಇಲ್ಲದೆ ಸುಖ ನಿದ್ರೆ ಮಾಡುತ್ತಿದ್ದಾನೆ. ಇವನ ಮುಖದಲ್ಲಿನ ರಾಜಕಳೆಯನ್ನು ನೋಡಿ" ಎನ್ನುತ್ತಿದ್ದಳು.

"ಮಹಾಪ್ರಭುಗಳು ತಮ್ಮನ್ನು ಮರೆತರೂ ಈ ಚಿಕ್ಕ ಪ್ರಭುಗಳು ನಿಮ್ಮನ್ನು ಎಂದಿಗೂ ಮರೆಯುವುದಿಲ್ಲ. ಚಿಕ್ಕ ಪ್ರಭುಗಳು ಸಿಂಹಾಸನಕ್ಕೆ ಬರಲಿ, ಆಗ ದೊಡ್ಡ ಪ್ರಭುಗಳ ಮೇಲೆ ಮುಯ್ಯಿಗೆ ಮುಯ್ಯಿ ತೀರಿಸೋಣ" ಎಂದು ನಗೆಯಾಡುತ್ತಿದ್ದಳು.

"ಮೊದಲು ಈ ಹಸುಗೂಸು ಬೆಳೆದು ದೊಡ್ಡವನಾಗಲಿ. ಆಗ ಚಕ್ರೇಶ್ವರನಾಗುವ ಮಾತು!" ಎಂದು ತಿರುಮಲಾದೇವಿಯು ಹಾಸ್ಯಮಾಡುವಳು.

"ಆಗಲಿ, ಇಂದು ಇದು ಚಿಕ್ಕ ಮಗು. ನಾಳೆ ಬೆಳೆದರೆ ಚಕ್ರವರ್ತಿ. ಇದರಲ್ಲಿ ಯಾವ ಅದ್ಭುತವಿದೆ – ಇಂದಲ್ಲ ನಾಳೆ ಆಗಲೇಬೇಕಾದ ಘಟನೆ ಇದು."

"ನೋಡೋಣ, ಇವನ ಪುಣ್ಯ ಹೇಗಿದೆಯೋ, ಇವನ ಜಾತಕದಿಂದಲಾದರೂ ಮಹಾಪ್ರಭುಗಳ ಕೃಪೆ ನಮ್ಮತ್ತ ತಿರುಗಿದರೆ ನಾವು ಧನ್ಯರೇ ಸರಿ." ಎಂದು ಮಗುವಿನ ಮುದ್ದು ಮುಖವನ್ನು ದಿಟ್ಟಿಸಿ ನೋಡುತ್ತ ತಿರುಮಲಾ ದೇವಿ ಹೇಳುವಳು. ಹೀಗೆ ಅವರ ಜೀವನ ಭವಿಷ್ಯದ ಬೆನ್ನನೇರಿ ಸಾಗಿತ್ತು. ಆದರೆ ಅವರು ಕಟ್ಟಿದ್ದ ಎಲ್ಲ ಹೊಂಗನಸಿನ ಗೋಪುರಕ್ಕೆ ಬಹುಬೇಗನೇ ವಜ್ರಾಘಾತವಾಗುವುದೆಂದು ಅವರಿಗೆ ಮಾತ್ರ ತಿಳಿದಿರಲಿಲ್ಲ! ಇದೇ ವಿಧಿವಿಲಾಸ !

# ೧೧

ರಾಜಾಂತಃಪುರದಲ್ಲಿ ಒಂದು ವಿಚಿತ್ರವಾದ ಸುದ್ದಿ ಇದ್ದಕ್ಕಿದ್ದಂತೆ ಹುಟ್ಟಿಕೊಂಡಿತು. ಆ ಸುದ್ದಿಯ ಬಗ್ಗೆ ಯಾರಿಗೂ ಖಚಿತವಾಗಿ ತಿಳಿಯದಿದ್ದರೂ, ಮಹಾಪ್ರಭುಗಳು ಹೀಗೆ ನಿರ್ಧರಿಸಿದ್ದಾರಂತೆ, ಹಾಗೆ ನಿರ್ಧರಿಸಿದ್ದಾರಂತೆ ಎಂದು ಎಲ್ಲರೂ ಹೇಳುವವರೇ. ಯಾರಿಗೂ ಇದನ್ನು ಬಾಯಿಬಿಟ್ಟು ಕೇಳುವ ಧೈರ್ಯವಿಲ್ಲ; ಯಾರಿಗೂ ಬಾಯಿಬಿಟ್ಟು ಹೇಳುವ ಧೈರ್ಯ ಮೊದಲೇ ಇರಲಿಲ್ಲ. ಎಲ್ಲರೂ ಗುಸಗುಸನೆ ತಮ್ಮಲ್ಲೇ ಇದರ ಬಗ್ಗೆ ಊಹಾಪೋಹಗಳನ್ನು ಕಟ್ಟುತ್ತಿದ್ದರು; ಯಾರಿಗೂ ಯಥಾರ್ಥವಾದುದು ತಿಳಿದಿರಲಿಲ್ಲ.

ಈ ಸುದ್ದಿಯನ್ನು ಯಾರು ಹುಟ್ಟಿಸಿದರೋ, ಅಂತೂ ಇದು ಕಾಳ್ಗಿಚ್ಚಿನಂತೆ ಅರಮನೆಯ ಮೂಲೆ ಮೂಲೆಗೂ ಪಸರಿಸಿತ್ತು. ಎಲ್ಲರೂ ಇನ್ನೊಬ್ಬರಿಗೆ ಇದು ಗೋಪ್ಯ ಎಂದೇ ಹೇಳುವರು. ಹೀಗೆ ಹೇಳಿಕೊಂಡು ಎಲ್ಲರಿಗೂ ಡಂಗೂರ ಹೊಡೆಯುವರು. ಹೀಗಾಗಿ ಈ ಸುದ್ದಿ ಅಲ್ಲಿ ಬಿದ್ದು, ಇಲ್ಲಿ ಬಿದ್ದು ತಿಪ್ಪಾಜಿಯ ಕಿವಿಗೂ ಬಿದ್ದಿತ್ತು.

ಈ ಸುದ್ದಿಯನ್ನು ಕೇಳಿ ಹೌಹಾರಿದಳು ತಿಪ್ಪಾಜಿ. ಅವಳು ತಿರುಮಲಾದೇವಿಯ ಕುಮಾರನ ಬಗ್ಗೆ ಕಟ್ಟಿಕೊಂಡಿದ್ದ ಎಲ್ಲ ಕನಸುಗಳಿಗೆ ಕೊಡಲಿ ಪೆಟ್ಟಿನಂತೆ ಬಿದ್ದಿತ್ತು ಈ ಸುದ್ದಿ. ಇದನ್ನು ಮೊದಲು ನಂಬಲು ಒಡಂಬಡಲಿಲ್ಲ ಅವಳ ಮನಸ್ಸು. ಆದರೆ ಎಲ್ಲರೂ ಇದೇ ಮಾತನ್ನೇ ಹೇಳುತ್ತಿರುವಾಗ ಇದು ಸುಳ್ಳೇ ಆಗಿದ್ದರೂ ಇದರಲ್ಲಿ ಅಣುವಷ್ಟಾದರೂ ಸತ್ಯಾಂಶವಿರಲೇ ಬೇಕೆಂದು ಈ ಬಗ್ಗೆ ವಿಚಾರ ನಡಸಿ, ಸಾಧ್ಯವಾದಷ್ಟು ವಿಷಯವನ್ನು ಸಂಗ್ರಹಿಸಿಕೊಂಡು ಮಹಾರಾಣಿ ತಿರುಮಲಾದೇವಿಯನ್ನು ನೋಡಲು ಬಂದಳು.

ತಿರುಮಲಾದೇವಿಯು ತನ್ನ ವಿಶ್ರಾಂತಿ ಕೋಣೆಯಲ್ಲಿ ಏನನ್ನೋ ಕುರಿತು ಚಿಂತಿಸುತ್ತಾ ಕುಳಿತಿದ್ದಳು.

ತಿಪ್ಪಾಜಿ ಸರಿಯಾದ ಸಮಯಕ್ಕೇ ಅಲ್ಲಿಗೆ ಬಂದಂತಾಯಿತು. ಅವಳು ಬಂದವಳೇ ತಿರುಮಲಾದೇವಿಯನ್ನು ಪ್ರಶ್ನಿಸಿದಳು.

"ಮಹಾರಾಣಿ, ಈ ಸಮಾಚಾರವನ್ನು ಕೇಳಿದಿರಾ?"

"ಯಾವ ಸಮಾಚಾರ ತಿಪ್ಪಾಜಿ?"

"ಹಾಗಾದರೆ ನಿಮಗೆ ಈ ಬಗ್ಗೆ ಏನೂ ಗೊತ್ತಿಲ್ಲ! ತುಂಬ ಅನ್ಯಾಯ. ಮಹಾಸ್ವಾಮಿಯವರು ಈ ನಿರ್ಧಾರವನ್ನುಕೈಗೊಳ್ಳುವ ಮುನ್ನ ತಮ್ಮನ್ನು ಒಮ್ಮೆಯಾದರೂ ಈ ಬಗ್ಗೆ ವಿಚಾರಿಸಬೇಕಾಗಿತ್ತು. ಮಹಾಸ್ವಾಮಿಯವರು ತಮಗೆ ತುಂಬ ಅನ್ಯಾಯ ಮಾಡಿದ್ದಾರೆ...."

"ಮಹಾಪ್ರಭುಗಳು ಏನು ಅನ್ಯಾಯ ಮಾಡಿದ್ದಾರೆ ತಿಪ್ಪಾಜಿ ? ಯಾವ ಸಂಗತಿ? ಏನು ಸಮಾಚಾರ....ಯಾವುದನ್ನೂ ಬಿಡಿಸಿ ಹೇಳದೆ ಹಾಗೆ ಒಗಟಾಗಿ ಹೇಳಿದರೆ ನಿನ್ನ ಮನಸ್ಸಿನಲ್ಲಿರುವುದು ನನಗೆ ಹೇಗೆ ತಿಳಿಯಬೇಕು ಹೇಳು."

"ಹಾಗಾದರೆ ನಿಮಗೆ ಈ ಬಗ್ಗೆ ಏನೊಂದೂ ತಿಳಿಯದೆ ? "

"ನನಗೆ ಏನೂ ತಿಳಿಯದು !"

"ಹಾಗಾದರೆ ಇದನ್ನು ನಾನು ಯಾವ ಬಾಯಲ್ಲಿ ತಿಳಿಸಲಿ—ತುಂಬ ಅಮಂಗಳಕರವಾದ ವಾರ್ತೆ."

"ಚಿಂತೆಯಿಲ್ಲ ಹೇಳು."

"ನಮ್ಮೆಲ್ಲರ ಆಸೆಗೆ ಮಹಾರಾಜರು ಕೊಡಲಿ ಪೆಟ್ಟು ಹಾಕಿದ್ದಾರೆ. ತುಂಬ ಅನ್ಯಾಯ ಮಾಡಿದಾರೆ."

"ಹೇಗೆ ? "

" ಇನ್ನೇನು ಪಟ್ಟಮಹಿಷಿಯ ಹೊಟ್ಟೆಯಲ್ಲಿ ಹುಟ್ಟಿದ ಮಗನಿಗೆ ಸಲ್ಲಬೇಕಾದ ಸಿಂಹಾಸನವನ್ನು ಆ ಚಿನ್ನಾದೇವಿಯ ಮಗನಿಗೆ ಕೊಡಲು ನಿರ್ಧರಿಸಿದರೆ ಅನ್ಯಾಯವಲ್ಲವೆ ? "

" ಇದೇನು ನಿನ್ನ ಮಾತು ? ನಿನಗೆ ಇದನ್ನು ಯಾರು ಹೇಳಿದರು ? ಈ ಸಿಂಹಾಸನದ ಪ್ರಶ್ನೆ ಈಗೇಕೆ ಬಂತು ? "

" ಮಹಾಪ್ರಭುಗಳು ಚಿನ್ನಾದೇವಿಯ ದುರ್ಬೋಧನೆಗೆ ಒಳಗಾಗಿ ಮಾಡಿರುವ ಕುತಂತ್ರ ಇದು. ಇದುವರೆಗೆ ಇಲ್ಲದಿದ್ದ ಈ ಸಿಂಹಾಸನದ ಹಕ್ಕುದಾರಿಕೆಯ ಸಮಸ್ಯೆ ಈಗೇಕೆ ಉಂಟಾಯಿತು ? ಎಲ್ಲವೂ ಅವಳದೇ ಕಾರಸ್ಥಾನ. ಮಹಾಸ್ವಾಮಿಯವರು ತನ್ನ ಅಂತಃಪುರದಲ್ಲಿ ಇರುವಂತೆಯೇ, ಅವರಿಂದ ತನ್ನ ಮಗನಿಗೆ ಸಿಂಹಾಸನದ ಹಕ್ಕುದಾರಿಕೆಯನ್ನು ಸ್ಥಾಪಿಸುವುದ

ಕ್ಕಾಗಿ ಇಷ್ಟೆಲ್ಲ ಸಂಚುಮಾಡಿದ್ದಾಳೆ. ಇದುವರೆಗೆ ಈ ಸಮಸ್ಯೆ ಇರಲಿಲ್ಲ. ನಿಮ್ಮ ಹೊಟ್ಟೆಯಲ್ಲಿ ಕುಮಾರರು ಹುಟ್ಟಿದುದರಿಂದ, ಮುಂದೆ ರಾಜ್ಯಕ್ಕೆ ಅವರೇ ಹಕ್ಕುದಾರರಾಗಬಹುದೆಂದು ಹೆದರಿ ಈಗಲೇ ಈ ವಿಷಯವನ್ನು ಇತ್ಯರ್ಥಮಾಡಲು ಚಿನ್ನಾದೇವಿ ಹೂಡಿರುವ ಕಪಟನಾಟಕ ಇದು. ಇದು ಮುಖ್ಯವಾಗಿ ನಿಮಗೆ ಸಂಬಂಧಿಸಿದ್ದರೂ ಇದುವರೆಗೆ ನಿಮಗೆ ಇದು ತಿಳಿಯದೆ ಇರುವುದು ಶೋಚನೀಯ. ಇದು ನಿಮ್ಮ ವಿನಾ ಉಳಿದ ಎಲ್ಲ ಅಂತಃ ಪುರದ ಪರಿಜನರಿಗೂ ತಿಳಿದಿದೆ....ನಿಮಗೆ ವಿಷಯ ತಿಳಿದಿರಬೇಕೆಂದಿದ್ದೆ. ಇಂತಹ ಪ್ರಮುಖ ಸಂಗತಿಯನ್ನು ಮಹಾಸ್ವಾಮಿಯವರು ನಿಮಗೆ ಪೂರ್ವ ಭಾವಿಯಾಗಿ ತಿಳಿಸಿರಬೇಕೆಂದುಕೊಂಡಿದ್ದೆ—ಆದರೆ...."

"ಮಹಾಸ್ವಾಮಿಯವರು ಕೆಲವು ದಿನಗಳಿಂದ ಇತ್ತ ಬಂದೇ ಇಲ್ಲ —ಇಂತಹ ವಿಷಯಗಳನ್ನೆಲ್ಲ ನನ್ನೊಂದಿಗೆ ತಿಳಿಸಲು ನಾನು ಅವರ ಭಾಗಕ್ಕೆ ಯಾವ ದೊಡ್ಡ ವ್ಯಕ್ತಿ !" ತಿರುಮಲಾದೇವಿ ನೊಂದು ನುಡಿದಳು.

ಹೌದು. ಈ ವಿಷಯದಲ್ಲಿ ಕೃಷ್ಣದೇವರಾಯನು ತಿರುಮಲಾ ದೇವಿಯೊಂದಿಗೆ ಯಾವ ಪ್ರಸ್ತಾಪವನ್ನೂ ಮಾಡಿಯೇ ಇರಲಿಲ್ಲ. ಈ ಬಗ್ಗೆ ರಾಯನು ಯಾರೊಂದಿಗೂ ಚಕಾರವೆತ್ತಿರಲಿಲ್ಲ. ಈ ವಿಷಯ ಬಹಳ ಕಾಲದಿಂದ ರಾಯನ ಮನಸ್ಸನ್ನು ಕೊರೆಯುತ್ತಿದ್ದ ಸಂಗತಿಯಾದರೂ —ಇದರ ಬಗ್ಗೆ ಯಾವ ನಿರ್ಧಾರಕ್ಕೂ ಮುಟ್ಟದೆ ಇದ್ದುದರಿಂದ, ಈ ಸಂಗತಿ ಗಳೊಂದಕ್ಕೂ ಚಲಾವಣೆ ದೊರೆತಿರಲಿಲ್ಲ. ಆದರೆ ಕೆಲವು ದಿನಗಳ ಹಿಂದೆ ರಾಯನಿಗೆ ಅದೇನು ಹೊಳೆಯಿತೋ, ಅವನು ಒಂದು ದೃಢನಿರ್ಧಾರಕ್ಕೆ ಬಂದು ಮುಟ್ಟಿದ. ತಾನು ಇರುವಂತೆಯೇ ಈ ಸಿಂಹಾಸನದ ಸಮಸ್ಯೆಯನ್ನು ಬಿಡಿಸಿ ಒಂದು ಸ್ಥಿತಿಗೆ ತಂದು ನಿಲ್ಲಿಸಲು ನಿಶ್ಚಯಿಸಿದ್ದ. ಅಂತಲೇ ರಾಯನು ಪ್ರಧಾನಾಮಾತ್ಯನಾದ ತಿಮ್ಮರಸನನ್ನು ಬಳಿಗೆ ಬರಮಾಡಿಕೊಂಡು ಅವ ನೊಡನೆ ಈ ಎಲ್ಲ ಸಂಗತಿಯನ್ನೂ ಕೂಲಂಕಷವಾಗಿ ವಿಚಾರಮಾಡಿದ್ದ. ಈ ಚರ್ಚೆ ತುಂಬ ಗೋಪ್ಯವಾಗಿ ನಡೆದಿದ್ದರೂ ಚರ್ಚಿಸಲ್ಪಟ್ಟ ಸಂಗತಿಗಳು ಮಾತ್ರ ಎಲ್ಲರಿಗೂ ತಿಳಿದುಹೋಯಿತು. ಅದೇ ಆಶ್ಚರ್ಯ.

ಆ ದಿನ ಕೃಷ್ಣದೇವರಾಯನು ಎಂದಿನಂತೆ ಬೆಳಗಿನ ಜಾವ ನಾಲ್ಕು ಗಂಟೆಗೇ ಎದ್ದು ಪ್ರಾತಃರ್ವಿಧಿಗಳನ್ನು ತೀರಿಸಿಕೊಂಡು, ಬಹಳ ಕಾಲದಿಂದ

ನಿಲ್ಲಿಸದ್ದ ಅಂಗಸಾಧನೆಯನ್ನು ನೆನಪಿಗೆ ತೆಗೆದುಕೊಂಡು ವ್ಯಾಯಾಮ ಶಾಲೆಗೆ ಬಂದನು.

ವ್ಯಾಯಾಮ ಶಾಲೆಯಲ್ಲಿ ಅಂಗಸಾಧನೆ ಮಾಡುವುದೆಂದರೆ ರಾಯನಿಗೆ ತುಂಬ ಪ್ರಿಯವಾದ ಕೆಲಸ. ಕತ್ತಿವರಸೆ, ಮಲ್ಲಯುದ್ಧ ಮೊದಲಾದ ಸಶ್ರಮವಾದ ವ್ಯಾಯಾಮಗಳಲ್ಲಿ ತುಂಬ ಆಸಕ್ತಿ ಇತ್ತು. ಬಿಜಾಪುರದ ಯುದ್ಧದಲ್ಲಿ ಗಾಯಗೊಂಡು ರಾಜಧಾನಿಗೆ ಹಿಂದಿರುಗಿದ ಲಾಗಾಯಿತು ಸಕ್ರಮವಾಗಿ ನಡೆಯುತ್ತಿದ್ದ ಅಂಗಸಾಧನೆಯು ನಿಂತು ಹೋಗಿತ್ತು. ಇಂದು ರಾಯನಿಗೆ ಒಮ್ಮೆಲೇ ಅದರ ಕಡೆ ಗಮನ ಹರಿದಿತ್ತು.

ಸಾಮಾನ್ಯವಾಗಿ ರಾಯನು ವ್ಯಾಯಾಮಕ್ಕೆ ನಿಂತರೆ ಅವನಿಗೆ ಆಯಾಸವೆಂಬುದೇ ಇಲ್ಲ. ಕತ್ತಿವರಸೆಯಲ್ಲಾಗಲೀ ಮಲ್ಲಯುದ್ಧದಲ್ಲಾಗಲಿ, ಕಬ್ಬಿಣದ ಗದೆಯನ್ನೆತ್ತಿ ಬಿಸುಡುವುದರಲ್ಲಾಗಲೀ ರಾಯನನ್ನು ಮೀರಿಸುವವರು ಅತಿ ವಿರಳ. ಅಂತೆಯೇ ಕುದುರೆ ಸವಾರಿಯಲ್ಲೂ ರಾಯನದು ಒಂದು ಅಪೂರ್ವಸಿದ್ಧಿ. ಮೈಗೆಲ್ಲ ಹರಳೆಣ್ಣೆಯನ್ನು ಹಚ್ಚಿಕೊಂಡು ಕುದುರೆ ಸವಾರಿ ಮಾಡುತ್ತ ಹೊರಟರೆ ಕುದುರೆಗೆ ಬಾಯಲ್ಲಿ ಬುರುಗು ಬರುವ ತನಕ, ರಾಯನು ಲೇಪಿಸಿಕೊಂಡಿದ್ದ ಎಣ್ಣೆ ಮೈಯಲ್ಲಿ ಇಂಗಿ ಹೋಗುವ ತನಕ, ಕುದುರೆಯಿಂದ ಇಳಿಯುತ್ತಿರಲಿಲ್ಲ.

ಅನಂತರವೇ ಸ್ನಾನ. ದೇವತಾರ್ಚನೆ ಮೊದಲಾದ ನಿತ್ಯಕರ್ಮಗಳು ಆರಂಭವಾಗುತ್ತಿದ್ದುದು.

ಇಂದು ಮಲ್ಲ ಶಾಲೆಯ ಮದಗಜ ಮಲ್ಲನಿಗೆ ಮಹಾಪ್ರಭುಗಳು ಎಂದಿನಂತೆ ವ್ಯಾಯಾಮ ಶಾಲೆಗೆ ಬಂದುದನ್ನು ನೋಡಿ ತುಂಬ ಆಶ್ಚರ್ಯವಾಯಿತು. ಅಷ್ಟೇ ಹರ್ಷವಾಯಿತು. ಅವನು ಭಯಭಕ್ತಿಯಿಂದ ರಾಯನಿಗೆ ಅಂಗಸಾಧನೆಯಲ್ಲಿ ನೆರವಾದ.

ಇಂದು ರಾಯನು ಎದ್ದ ಗಳಿಗೆಯೇ ಸರಿಯಾಗಿರಲಿಲ್ಲ. ಎಲ್ಲ ಕೆಲಸಗಳಲ್ಲೂ ವಿಫಲತೆ.

ರಾಯನು ನಾಲ್ಕು ಸೂರ್ಯ ನಮಸ್ಕಾರ ಹಾಕಲು ಬಗ್ಗಿ ಕುಳಿತಾಗ ಸೊಂಟ ನೋಯ ಹತ್ತಿ ಒಂದೆರಡು ನಮಸ್ಕಾರಗಳಿಗೇ ದಣಿವಾಯಿತು. ಹಿಂದೆ ಲೀಲಾಜಾಲವಾಗಿ ಹತ್ತಿಪ್ಪತ್ತು ನಮಸ್ಕಾರ ಹಾಕುತ್ತಿದ್ದ ಆ ಅಭ್ಯಾಸ

ಇಂದು ಸಾಧ್ಯವಾಗಲಿಲ್ಲ.

ಅನಂತರ ರಾಯನು ತಾನು ಸುಲಭವಾಗಿ ಎತ್ತಿ ಗಾಳಿಯಲ್ಲಿ ಗರಗರ ತಿರುಗಿಸಿ ಬಿಸಾಡುತ್ತಿದ್ದ ಕಬ್ಬಿಣದ ಗದೆಯನ್ನು ತೆಗೆದುಕೊಂಡ. ಆದರೆ ಇಂದು ಅದನ್ನು ಇದ್ದ ಸ್ಥಳದಿಂದ ಕದಲಿಸುವುದೇ ಕಷ್ಟವಾಯಿತು. ಅದನ್ನು ಅಲ್ಲಿಗೇ ಬಿಟ್ಟು ಕುದುರೆ ಸವಾರಿ ಮಾಡಲು ಹೊರಟು ಕುದುರೆಯನ್ನು ಇನ್ನೇನು ಏರಿ ಕುಳಿತುಕೊಳ್ಳಬೇಕು ಎನ್ನುವಷ್ಟರಲ್ಲಿ ಕುದುರೆಗೆ ಏಕೋ ಗಾಬರಿಯಾಗಿ ಅದು ರಾಯನನ್ನು ನೆಲಕ್ಕೆ ಕೆಡವಿ ಓಡಿಹೋಯಿತು. ಅದನ್ನು ಹತೋಟಿಗೆ ತರುವಷ್ಟು ಶಕ್ತಿ ತನಗೆ ಇಲ್ಲವಾಯಿತು. ಮೊದಲ ಬಾರಿ ರಾಯನಿಗೆ ತಾನು ಎಷ್ಟು ಶಕ್ತಿಗುಂದಿರುವನೆಂಬ ವಿಷಯ ಅರಿವಾಯಿತು.

ಇಷ್ಟೇ ಸಾಕಾಯಿತು, ರಾಯನನ್ನು ವಿಚಾರಪರನನ್ನಾಗಿ ಮಾಡಲು. ಅವನು ಕೂಡಲೇ ತಿಮ್ಮರಸನನ್ನು ಬಳಿಗೆ ಬರಮಾಡಿಕೊಂಡು ತನ್ನ ಅಂತರಂಗವನ್ನು ಅವನೆದುರಿನಲ್ಲಿ ಬಿಚ್ಚಿಟ್ಟ.

"ಅಪ್ಪಾಜಿ, ನಿಮ್ಮೊಡನೆ ಹೇಳದ ನನ್ನ ಯಾವ ಅಂತರಂಗದ ವಿಷಯವೂ ಇಲ್ಲ. ನಿಮ್ಮನ್ನು ಒಂದು ಮಹತ್ವದ ಸಂಗತಿಯ ಆಪ್ತಾಲೋಚನೆಗಾಗಿ ಕರೆಸಿದ್ದೇನೆ. ನನ್ನನ್ನು ಈ ಕೆಲವು ತಿಂಗಳುಗಳಿಂದ ಕಾಡುತ್ತಿರುವ ಸಂಗತಿಗಳನ್ನು ನಿಮಗೆ ತಿಳಿಸಬೇಕಾಗಿದೆ. ಇದಕ್ಕೆ ಇಂದೇ ಮಹೂರ್ತವೇಕೆನ್ನುವಿರಾ? ಕೇಳಿ. ಇಂದು ನಾನು ಎಂದಿನಂತೆಯೇ ವ್ಯಾಯಾಮ ಶಾಲೆಗೆ ಹೋದೆ. ಅಲ್ಲಿ ಆದ ಪರಾಭವ ನನ್ನ ನಿಜವಾದ ಶಕ್ತಿಯ ಸ್ವರೂಪವನ್ನು ಬಯಲು ಮಾಡಿತು. ಆದುದರಿಂದಲೇ ನಿಮ್ಮನ್ನು ಕರೆಸಿದ್ದೇನೆ. ಇದುವರೆಗೆ ಹುದುಗಿಟ್ಟಂತೆ ಈ ನನ್ನ ಆಲೋಚನೆಗಳನ್ನು ಇನ್ನು ಮುಂದೆಯೂ ಯಾವುದೊಂದು ರೂಪ ಕೊಡದೆ ಹುದುಗಿಡಲು ಸಾಧ್ಯವಿಲ್ಲದೆ ನಿಮ್ಮನ್ನು ಬರಮಾಡಿದ್ದೇನೆ." ಎಂದು ಪೀಠಿಕೆಯನ್ನು ಹಾಕಿದ. ಮುಂದೆ ಹೇಗೆ ಈ ವಿಷಯ ಪ್ರಸ್ತಾಪಿಸುವುದೆಂದು ತಿಳಿಯದೆ ಕೆಲಕಾಲ ಮೌನವಾಗಿ ಕುಳಿತ.

"ತಮ್ಮ ಮನಸ್ಸನ್ನು ಕೊರೆಯುತ್ತಿರುವ ಆ ಚಿಂತೆ ಇಂತಹುದೆಂದು ಪ್ರಭುಗಳು ಅಪ್ಪಣೆ ಕೊಡಿಸಿದರೆ ನನ್ನ ಕೈಲಾದಷ್ಟು ಅದರ ನಿವಾರಣೆಗೆ ಪ್ರಯತ್ನಿಸುತ್ತೇನೆ ಪ್ರಭು" ಎಂದು ಹುರಿದುಂಬಿಸಿದ ತಿಮ್ಮರಸ.

"ಅಪ್ಪಾಜಿ, ನಿಮ್ಮ ನಿಷ್ಠೆಯನ್ನು ನಾನು ಕಾಣೆನೇ? ನಿಮ್ಮಲ್ಲೇಕೆ

ಸಂಕೋಚ ಪಡಬೇಕು. ನೀವು ಮೊದಲಿನಿಂದಲೂ ನನಗೆ ಪಿತೃ ಸಮಾನ ರಾಗಿದ್ದೀರಿ. ನಿಮ್ಮಲ್ಲಿ ಹೇಳಲು ನನಗೇಕೆ ಸಂಕೋಚ? ಅಪ್ಪಾಜಿ ಚೆನ್ನಾಗಿ ಕೇಳಿ. ನನ್ನ ಯೌವನದ ಬಹುಭಾಗ ಯುದ್ಧರಂಗದಲ್ಲಿಯೇ ಕಳೆದು ಹೋಗಿದೆ. ಇದುವರೆಗೆ ಸಾಮ್ರಾಜ್ಯವನ್ನು ಕಟ್ಟುವುದರಲ್ಲಿ ನಿರತನಾಗಿದ್ದೆನೇ ಹೊರತು—ರಕ್ತ ಹರಿಸಿ ಕಟ್ಟಿದ ಈ ಸಾಮ್ರಾಜ್ಯವನ್ನು ಭದ್ರವಾದ ಬುನಾದಿಯ ಮೇಲೆ ನಿಲ್ಲಿಸಿ ಶಾಂತಿ ನೆಮ್ಮದಿಗಳಿಗೆ ಆಗರವಾಗುವಂತೆ ಒಂದು ವ್ಯವಸ್ಥೆಯನ್ನು ತರಲಾಗಲಿಲ್ಲ. ಈಗ ಆಗಿರುವ ಕೆಲಸದ ನಾಲ್ಕು ಪಟ್ಟು ಕೆಲಸ ಮುಂದೆ ಆಗಬೇಕಾಗಿದೆ. ಯುದ್ಧ ಮಾಡಿ ರಾಜ್ಯವನ್ನು ಗೆಲ್ಲುವುದಕ್ಕಿಂತ ಗೆದ್ದ ರಾಜ್ಯವನ್ನು ಒಂದು ವ್ಯವಸ್ಥೆಗೆ ಒಳಪಡಿಸಿ, ಅಲ್ಲಿ ಶಾಂತಿ ನೆಮ್ಮದಿಗಳು ಏರ್ಪಡುವಂತೆ ಮಾಡುವುದು ಹೆಚ್ಚು ಕಷ್ಟಕರ. ಇದನ್ನು ನಾನು ಈ ಮೊದಲೇ ಬಲ್ಲೆನಾಗಿದ್ದರೆ, ಯುದ್ಧ! ಯುದ್ಧ! ಎಂದುಕೊಂಡು ಅಪಾರ ಹಣವನ್ನೂ ಜನಶಕ್ತಿಯನ್ನೂ ಅಮೂಲ್ಯವಾದ ಕಾಲವನ್ನೂ ಯುದ್ಧದಲ್ಲಿ ಕಳೆಯುತ್ತಿರಲಿಲ್ಲ. ಈಗ ಆದುದಕ್ಕೆ ಚಿಂತಿಸಿ ಫಲವಿಲ್ಲ. ಮುಂದಿನದನ್ನು ಕುರಿತು ಯೋಚಿಸಬೇಕಾಗಿದೆ. ನಾನು ಇರುವಂತೆಯೇ ಈ ಯುದ್ಧದ ಮಾರಣ ಹೋಮವನ್ನು ಪರಿಸಮಾಪ್ತಿಗೊಳಿಸುತ್ತೇನೆ. ಆದರೆ ಸಾಮ್ರಾಜ್ಯದಲ್ಲಿ ಶಾಶ್ವತವಾದ ಶಾಂತಿ ಸುಭಿಕ್ಷಗಳನ್ನು ನೆಲೆಗೊಳಿಸಲು ನಾನು ಹೆಚ್ಚು ಕಾಲ ಇರುವೆನೋ ಇಲ್ಲವೋ ಅದನ್ನು ಹೇಳಲಾರೆ........ಅಂತಲೇ ನಿಮ್ಮನ್ನು ಕರೆಸಿದ್ದೇನೆ........"

ಈ ಮಾತು ಕೇಳಿ ತಿಮ್ಮರಸನ ಎದೆ ದಸಕ್ ಎಂದಿತು.

"ಪ್ರಭು, ಏನು ಮಾತು ನಿಮ್ಮದು? ತಾವು ಸಾವಿರ ವರ್ಷ ಬದುಕಬೇಕು. ತಮಗೆ ಏನಾಗಿದೆ ಎಂದು ಈ ಎಲ್ಲ ಸಂಗತಿಯನ್ನು ನೆನೆಯಬೇಕು?"

"ಇಲ್ಲ ಅಪ್ಪಾಜಿ, ನನ್ನ ದೇಹದ ನಿಜಸ್ಥಿತಿ ನನಗೆ ಚೆನ್ನಾಗಿ ತಿಳಿದಿದೆ. ನಾನಿನ್ನೂ ನಲವತ್ತು ವರ್ಷ ಪ್ರಾಯದವನಾಗಿದ್ದರೂ—ನನ್ನ ಮನಸ್ಸಿಗೆ ಚೈತನ್ಯಕ್ಕೆ ನೂರು ವರ್ಷದ ಮುಪ್ಪು ಬಂದುಹೋಗಿದೆ. ನೋಡಿ ಮುಪ್ಪಿನ ದೂತರಾದ ಈ ಬಿಳಿಗೂದಲು, ಮುಖದ ಸುಕ್ಕು ನನ್ನನ್ನು ಮೂದಲಿಸುತ್ತಿವೆ. ಆದರೆ ನಾನು ಇದುವರೆಗೆ ನಿಮ್ಮೆಲ್ಲರಂತೆ ಹರೆಯದ ಯುವಕನೆಂದೇ ತಿಳಿದು ಮೋಸಹೋಗಿದ್ದೆ. ಇಂದು ಮಲ್ಲಶಾಲೆಯಲ್ಲಿ ನನ್ನ ನಿಜವಾದ ಯೋಗ್ಯತೆ ಬಯಲಾಯಿತು. ನನ್ನ ಭ್ರಮೆ ಹರಿಯಿತು...."

ಎಂದು ಮಲ್ಲಶಾಲೆಯಲ್ಲಿ ನಡೆದ ತನ್ನ ಎಲ್ಲ ಪರಾಭವ—ವಿಫಲತೆ ಯನ್ನು ವಿವರವಾಗಿ ಹೇಳಿದ.

"ಇಷ್ಟಕ್ಕಾಗಿ ಪ್ರಭುಗಳು ಇಷ್ಟು ಮನಸ್ಸಿಗೆ ಹಚ್ಚಿಕೊಳ್ಳಬೇಕೆ? ಪ್ರಭುಗಳಿಗೆ ಮೈಯಲ್ಲಿ ಮೊದಲಿನ ಶಕ್ತಿ ಇಲ್ಲದೆ ಈ ವ್ಯಾಯಾಮಗಳು ಸಾಧ್ಯ ವಾಗದೆ ಹೋಗಿರಬೇಕು. ಇವುಗಳನ್ನು ಇಷ್ಟು ಮನಸ್ಸಿಗೆ ಹಚ್ಚಿಕೊಳ್ಳ ಬೇಕೆ?" ಎಂದು ನಗೆಯಾಡಿದ ತಿಮ್ಮರಸ.

"ಇದರಲ್ಲಿ ನಿಮಗೆ ಯಾವ ವಿಶೇಷವೂ ಕಾಣಲಿಲ್ಲವೆ ಅಪ್ಪಾಜಿ? ಇಲ್ಲಿ ಕೇಳಿ. ಕಳೆದ ಇಪ್ಪತ್ತು ವರ್ಷಗಳಿಂದಲೂ ಮಾಡುತ್ತ ಬಂದಿದ್ದ ಅಂಗಸಾಧ ನೆಯು ಒಮ್ಮೆಲೇ ಅಸಾಧ್ಯವಾದರೆ ಇದರಲ್ಲಿ ವಿಶೇಷವಿಲ್ಲವೆ? ನನ್ನ ಅಶ ಕ್ತಿಯು ಮೊದಲಿನ ಸಾಹಸಕಾರ್ಯಗಳನ್ನು ಮಾಡಲಾಗದೆ ಇರಬಹುದು. ಆದರೆ ಇಪ್ಪತ್ತು ವರ್ಷಗಳಿಂದ ಇದ್ದ ಕಾಯದ ಪಟುತ್ವ ಅಭ್ಯಾಸಬಲ ಒಮ್ಮೆಲೇ ಬತ್ತಿಹೋಗಬೇಕೆ? ಇದು ನನ್ನ ಅಶಕ್ತಿಯಿಂದ ಆದುದಲ್ಲ—ನನ್ನಲ್ಲಿ ಮನೆ ಮಾಡಿಕೊಳ್ಳುತ್ತಿರುವ ವೃದ್ಧಾಪ್ಯದ ಚಿಹ್ನೆ....ಅಂದು ನನ್ನ ಮೈಯಲ್ಲಿ ಕಸು ವಿತ್ತು, ಬಿಸಿ ರಕ್ತವಿತ್ತು. ಯಾವ ಕೆಲಸವೂ ಕಷ್ಟ ಕಾಣುತ್ತಿರಲಿಲ್ಲ. ಆದರೆ ಈಗ ಯಾವ ಕೆಲಸವೂ ಕಷ್ಟಕಾಣುತ್ತಿದೆ. ಏಕೆ? ನನ್ನ ದೇಹ ಜರ್ಜರಿತ ವಾಗಿದೆ. ಶಕ್ತಿ ಗುಂದಿದೆ, ನಾನು ಹಣ್ಣಾಗಿದ್ದೇನೆ. ಉದುರಿ ಬೀಳುವ ಎಲೆಯಂತೆ ಹಣ್ಣಾಗಿದ್ದೇನೆ."

"ಪ್ರಭುಗಳು ತಮ್ಮ ನಡುಹರೆಯುದಲ್ಲೆ ಮುಪ್ಪನ್ನು ಅನುಭವಿಸಿದರೆ ಎಪ್ಪತ್ತರ ವಯಸ್ಸಿನಲ್ಲಿರುವ ನಾನೇನು ಅನ್ನಬೇಕು? ನನಗೆ ತಮಗಿಂತ ಇಮ್ಮಡಿ ವಯಸ್ಸಾಗಿದೆ. ಆದರೂ ನನ್ನನ್ನು ನೋಡಿ. ಶರೀರ ಹಣ್ಣಾಗಿದ್ದರೂ ಪ್ರಭು ಗಳ ಸೇವೆಗೆ ನಡುಹರೆಯುದವನಂತೆ ಇನ್ನೂ ಟೊಂಕ ಕಟ್ಟಿ ನಿಂತಿದ್ದೇನೆ—ಮುದಿ ತನ, ಯೌವನ, ಕೇವಲ ವಯಸ್ಸಿನಿಂದ ನಿರ್ಧರಿಸಲಾಗದು ಪ್ರಭು. ಮನೋ ದಾರ್ಢ್ಯದಿಂದ, ಚೈತನ್ಯದಿಂದ ನಿರ್ಧರಿಸಬೇಕು."

"ನಿಮಗೆ ಈ ವಯಸ್ಸಿನಲ್ಲೂ ಹೀಗೆ ಇರಲು ಹೇಗೆ ಸಾಧ್ಯ ಅಪ್ಪಾಜಿ. ಆದರೆ ನನ್ನ ಕಥೆಯೇ ಬೇರೆಯಾಗಿದೆ. ನಾನು ನಿಮಗಿಂತ ತುಂಬ ಚಿಕ್ಕವನಾಗಿ ದ್ದರೂ ನಿಮಗಿಂತ ಎಷ್ಟೋ ಪಾಲು ಮುಪ್ಪಡರಿದ್ದೇನೆ. ಆದುದರಿಂದಲೇ ನನ್ನ ಈ ನಿರ್ಧಾರವನ್ನು ನಿಮ್ಮ ಮುಂದೆ ಶ್ರುತಪಡಿಸಬೇಕೆಂದಿದ್ದೇನೆ....."

ತಿಮ್ಮರಸ "ಪ್ರಭೂ?" ಎಂದ ಅವನ ಮಾತನ್ನು ಮುಂದುವರೆಯುಗೊಡದೆ ಕೃಷ್ಣದೇವರಾಯನೇ ಹೇಳಿದ.

"ನೀವು ನನ್ನನ್ನು ವಂಚಿಸಲಾರಿರಿ. ಸತ್ಯಾಂಶವನ್ನು ನನ್ನಿಂದ ಮುಚ್ಚಿಡಲಾರಿರಿ. ನಾನು ಹೇಳುವುದನ್ನು ಪೂರ್ಣವಾಗಿ ಕೇಳಿ ನಾನು ಯುದ್ಧಗಳಲ್ಲಿ ನನ್ನ ಆಯುಸ್ಸನ್ನು ವ್ಯರ್ಥಮಾಡಿದೆ. ಈಗ ಆಗಬೇಕಾಗಿರುವ ಕೆಲಸ ಬಹಳವಾಗಿದೆ. ಅವುಗಳನ್ನು ಪೂರ್ಣಗೊಳಿಸುವ ಮುನ್ನವೇ ನಾನು ಕಣ್ಣು ಮುಚ್ಚಬಹುದು. ನನ್ನನಂತರ ನನ್ನ ಸಿಂಹಾಸನದ ಗತಿ ಏನು? ನನ್ನ ಸಾಮ್ರಾಜ್ಯದ ಗತಿ ಏನು ಎನ್ನುವ ಚಿಂತೆ ಕಾಡುತ್ತಿದೆ. ಅದಕ್ಕಾಗಿ ನಿಮ್ಮನ್ನು ಕರೆಸಿದೆ."

"ಪ್ರಭುಗಳಿಗೆ ತಮ್ಮನಂತರ ಸಾಮ್ರಾಜ್ಯಕ್ಕೆ ಏನಾಗುವುದೆಂಬ ಚಿಂತೆ, ಕಳವಳ ಬೇಡ. ಅದನ್ನು ನೋಡಿಕೊಳ್ಳಲು ನಾನಿದ್ದೇನೆ, ನನ್ನಂಥ ಸಾವಿರ ಮಂದಿ ಇದ್ದಾರೆ...."

"ಅದನ್ನು ನಾನು ಬಲ್ಲೆ. ಆದರೆ....ನನ್ನನಂತರ ಪಟ್ಟಕ್ಕೆ ಬರುವವನು....ಆ ಮಗು....ಇನ್ನೂ ಚಿಕ್ಕವನು. ರಾಜ್ಯಾಡಳಿತವೆಂದರೆ ಏನೊಂದೂ ತಿಳಿಯದ ಹಾಲುಗಲ್ಲದ ಕಂದಮ್ಮ! ಅಂತಹವನ ಮೇಲೆ ಸಾಮ್ರಾಜ್ಯದ ಹೊರೆಯನ್ನು ಹೊರಿಸಿ ಹೋಗಬೇಕಲ್ಲಾ ಎಂದು ನನ್ನ ಚಿಂತೆ....ಆ ಮಗುವಿನ ಅಸಹಾಯಕ ಪರಿಸ್ಥಿತಿಯನ್ನು ದುರುಪಯೋಗಪಡಿಸಿಕೊಂಡು ದೇಶದಲ್ಲಿ ದಂಗೆ ಗಲಭೆಗಳಾದರೆ—ಆಡಳಿತದ ಬಿಗಿ ತಪ್ಪಿ ದೇಶ ಅನಾಯಕವಾದರೆ, ಮಾಂಡಲೀಕರೆಲ್ಲ ಸ್ವತಂತ್ರರಾದರೆ? ಶತ್ರುಗಳು ಬಂದು ಮುತ್ತಿಗೆ ಹಾಕಿದರೆ? ನಾನು ಸಾಮ್ರಾಜ್ಯವನ್ನು ಕಷ್ಟಪಟ್ಟು ಕಟ್ಟಿದುದು ಇದಕ್ಕಾಗಿಯೇ? ನನ್ನ ಪ್ರಯತ್ನ—ಜೀವಿತದ ಉದ್ದೇಶ ನಿಮಿಷಾರ್ಧದಲ್ಲಿ ಮಣ್ಣುಗೂಡಿದರೆ? ನಾನು ಇಷ್ಟೆಲ್ಲ ಕಷ್ಟಪಟ್ಟುದು ವ್ಯರ್ಥವೇ ಸರಿ. ಆದುದರಿಂದ ನಾನು ಬದುಕಿರುವಂತೆಯೇ, ಮೈಯಲ್ಲಿ ಶಕ್ತಿ ಇರುವಂತೆಯೇ ಸಿಂಹಾಸನವನ್ನು ಬಲಪಡಿಸಿ ಹೋಗಬೇಕೆಂದಿದ್ದೇನೆ. ನನ್ನನಂತರ ರಾಜ್ಯಕ್ಕಾಗಿ ಹೋರಾಟವಾಗುವುದನ್ನು ನಡೆಯಬಹುದಾದ ಯಾವುದೇ ಕಲಹವನ್ನು ಇಂದೇ ನಿವಾರಿಸಲು ನಿರ್ಧರಿಸಿದ್ದೇನೆ. ನನ್ನನಂತರ ಸಾಮ್ರಾಜ್ಯಕ್ಕಾಗಿ ನನ್ನ ಮಕ್ಕಳು ಪರಸ್ಪರ ಕಾದಾಡದಿರಲೆಂದು ನಾನು ಈಗಲೇ ಅದರ ವ್ಯವಸ್ಥೆ ಮಾಡಿ ಹೋಗಲು

ನಿರ್ಧರಿಸಿದ್ದೇನೆ" ಎಂದು ಹೇಳಿ ತಾನು ಮಾಡಬೇಕೆಂದಿರುವ ವ್ಯವಸ್ಥೆ ಯನ್ನು ತಿಮ್ಮರಸನ ಮುಂದೆ ವಿಶದವಾಗಿ ಹೇಳಿದನು.

ರಾಯನು ಮಾಡಲೆಳಸಿದ್ದ ವ್ಯವಸ್ಥೆ ಇದು. ತಾನು ಇರುವಂತೆಯೇ ಸಿಂಹಾಸನವನ್ನು ತ್ಯಾಗಮಾಡಿ, ಅದರಲ್ಲಿ ಚಿನ್ನಾದೇವಿಯ ಕುಮಾರನನ್ನು ಕೂಡಿಸಿ ಪಟ್ಟಗಟ್ಟಿ ಅವನನ್ನು ಸಾರ್ವಭೌಮನೆಂದು ಸಾರುವುದು. ಅನಂತರ ಕೃಷ್ಣದೇವರಾಯನು ಚಕ್ರವರ್ತಿಯ ಪ್ರತಿನಿಧಿಯಾಗಿ ಮಗನು ಪ್ರಾಪ್ತ ವಯಸ್ಸಿಗೆ ಬರುವ ತನಕ ರಾಜ್ಯವಾಳುವುದು. ಹೀಗೆ ಮಾಡಿದರೆ ತನ್ನನಂತರ ಸಿಂಹಾಸನಕ್ಕಾಗಿ ನಡೆಯುವ ಯಾದವೀ ಕಲಹ ನಿಲ್ಲುವುದೆಂದು ರಾಯನು ಭಾವಿಸಿದನು.

ಇದನ್ನೆಲ್ಲ ಕೂಲಂಕಶವಾಗಿ ಕೇಳಿದ ಮೇಲೆ ತಿಮ್ಮರಸನು ಹೇಳಿದ. ಪ್ರಭುಗಳು ಇಷ್ಟೆಲ್ಲ ಹೆದರುವ ಕಾರಣವೇ ಇಲ್ಲ. ಯಾದವೀ ಕಲಹ—ಸಿಂಹಾಸನಕ್ಕಾಗಿ ಬಡಿದಾಟ ಇವುಗಳನ್ನು ಪ್ರಭುಗಳ ತಲೆಯಲ್ಲಿ ಯಾರೋ ತುಂಬಿರಬೇಕು. ಆದರೆ ವಾಸ್ತವವಾಗಿ ಇವುಗಳ ಪ್ರಶ್ನೆಯೇ ಏಳುವುದಿಲ್ಲ. ಯಾಕೆಂದರೆ ರಾಜ್ಯ ಯಾವಾಗಲೂ ಪಟ್ಟಮಹಿಷಿಯ ಪುತ್ರನಿಗಲ್ಲದೆ ಉಳಿದವರಿಗೆ ಹೋಗುವುದಿಲ್ಲ. ಸಿಂಹಾಸನವು ಹಿಂದೂ ಧರ್ಮ ಶಾಸ್ತ್ರದಂತೆ ಪಟ್ಟದ ರಾಣಿಯ ಹೊಟ್ಟೆಯಲ್ಲಿ ಹುಟ್ಟಿದ ಮಗನಿಗೆ ಸಲ್ಲುವುದೇ ಹೊರತು ಅನ್ಯರಿಗಲ್ಲ."

"ಆದರೆ ಪಟ್ಟಮಹಿಷಿಯ ಪುತ್ರನಿನ್ನೂ ಚಿಕ್ಕವನಾಗಿದ್ದರೆ?"

"ಚಕ್ರವರ್ತಿಯ ಜೇಷ್ಠ ಸಂತಾನಕ್ಕೆ ರಾಜ್ಯ ಹೋಗುತ್ತದೆ—ಇದು ಹಿಂದಿನಿಂದ ನಡೆದು ಬಂದಿರುವ ಪದ್ಧತಿ."

"ಅಂತಲೇ ನಾನು ವಯಸಿನಲ್ಲಿ ಹಿರಿಯವನಾಗಿರುವ ಚಿನ್ನಾದೇವಿಯ ಪುತ್ರನಿಗೆ ಪಟ್ಟಗಟ್ಟಲು ಬಯಸುತ್ತಿರುವುದು. ಇದಕ್ಕೆ ನಿಮ್ಮ ಅಭಿಪ್ರಾಯ ವೇನು?"

"ಪಟ್ಟಮಹಿಷಿಯ ಪುತ್ರನು ಕೇವಲ ಬಾಲಕನೆಂಬ ಕಾರಣದಿಂದ ಅವನಿಗೆ ಆಜನ್ಮಸಿದ್ಧವಾದ ಹಕ್ಕನ್ನು ಕಿತ್ತುಕೊಳ್ಳುವುದು ನ್ಯಾಯವಲ್ಲ ವೆಂದೇ ನನ್ನ ಭಾವನೆ. ಹೀಗೆ ಮಾಡಿದರೆ ಒಂದು ರೀತಿಯಾಗಿ ಧರ್ಮ ಬಿಟ್ಟು ಅಧರ್ಮ ಪ್ರವರ್ತಕರಾದಂತೆ ಆಗುತ್ತದೆ ಪ್ರಭು."

"ಇದು ಅಧರ್ಮ ಹೇಗಾದೀತು? ಪಟ್ಟಾಭಿಷೇಕ ಜೇಷ್ಠಪುತ್ರನಿಗಲ್ಲದೆ

ಕನಿಷ್ಠನಿಗೆ ಅಲ್ಲ” ಇದೂ ಧರ್ಮಸಮ್ಮತವೇ

“ಇವುಗಳಲ್ಲಿ ಯಾವುದು ಧರ್ಮಸಮ್ಮತ–ಯಾವುದು ಅಲ್ಲ ಅನ್ನುವುದನ್ನು ಧರ್ಮಾಧಿಕಾರಿಗಳು ನಿರ್ಣಯಿಸಬೇಕು. ಈಗ ನನ್ನ ಬುದ್ಧಿಗೆ ತಿಳಿಯುವುದು ಇಷ್ಟು. ಪ್ರಭುಗಳು ಅನಾವಶ್ಯಕವಾಗಿ ಸಿಂಹಾಸನವನ್ನು ತ್ಯಾಗ ಮಾಡಿ ಚಿನ್ನಾದೇವಿಯ ಪುತ್ರರಿಗೆ ಪಟ್ಟಗಟ್ಟಿದರೆ ಇದರಲ್ಲಿ ಯಾವುದೋ ಮೋಸವಿದೆ—ದುರಾಲೋಚನೆ ಇದೆ ಎಂದು ಜನಸಾಮಾನ್ಯರು–ಮಾಂಡಲೀಕರು ತಿಳಿಯಲು ಅವಕಾಶ ಕೊಟ್ಟಂತೆ ಆಗುತ್ತದೆ. ಅಲ್ಲದೆ ಸದ್ಯದ ರಾಜಕೀಯ ಪರಿಸ್ಥಿತಿಯಲ್ಲಿ ಪ್ರಭುಗಳು ಸಿಂಹಾಸನ ತ್ಯಾಗ ಮಾಡಿದರೆ ಇದರಿಂದ ಶತ್ರುಗಳ ಮೇಲೆ ವಿಲಕ್ಷಣ ಪರಿಣಾಮ ಉಂಟಾಗುತ್ತದೆ. ಅವರು ತಮ್ಮ ಶಕ್ತಿ ಗುಂದಿರುವುದಕ್ಕೆ ಇದೇ ದರ್ಶನವೆಂದು ಭಾವಿಸಿ, ತಾವಾಗಿ ನಮ್ಮ ಮೇಲೆ ಬೀಳುತ್ತಾರೆ. ಅಲ್ಲದೆ ಸಾಮಂತರಾಗಿರುವವರಿಗೆ ಸ್ವತಂತ್ರರಾಗಲು ಇದರಿಂದ ಪ್ರಚೋದನೆ ಸಿಕ್ಕುತ್ತದೆ. ದೇಶದಲ್ಲಿ ಸುಮ್ಮನೆ ಅಶಾಂತಿಯುಂಟಾಗಿ, ಆಡಳಿತಕ್ರಮ ಕುಸಿದು ಬೀಳುವ ಕಾರಣವಿದೆ. ಆದುದರಿಂದ ಪ್ರಭುಗಳು ಸದ್ಯದ ಪರಿಸ್ಥಿತಿಯಲ್ಲಿ ಆಡಳಿತದ ಯಾವ ಬದಲಾವಣೆಯನ್ನೂ ತರಲೆತ್ನಿಸಬಾರದೆಂದೇ ನನ್ನ ಹೃತ್ಪೂರ್ವಕವಾದ ಸಲಹೆ.”

“ನೀವು ಹೇಳುತ್ತಿರುವ ಭಯವೆಲ್ಲ ಕೇವಲ ನಿಮ್ಮ ಕಲ್ಪನೆಯ ಕೂಸಲ್ಲದೆ ಬೇರೆಯಲ್ಲ. ಚಿನ್ನಾದೇವಿಯ ಕುಮಾರನು ಸಿಂಹಾಸನವನ್ನೇರಿದರೆ ಜನತೆ ಏಕೆ ಅನ್ಯಥಾ ಭಾವಿಸುವುದು? ಅವರಿಗೆ ಬೇಕಾಗಿರುವ ವ್ಯವಸ್ಥೆಗೊಳಪಟ್ಟ ಆಡಳಿತ ಕ್ರಮ—ದೇಶದಲ್ಲಿ ಶಾಂತಿ ನೆಮ್ಮದಿಗಳು ನೆಲೆಯಾಗಿರುವುದು ಇಷ್ಟನ್ನು ಕೊಡಬಲ್ಲ ಯಾವನು ಸಿಂಹಾಸನದಲ್ಲಿ ಕುಳಿತು ಅರಸುತನ ಮಾಡಿದರೆ ಅವರಿಗೇನು? ಅವರು ಬಯುಸಿದುದು ಅವರಿಗೆ ದೊರೆತರೆ ಅವರು ಸಂತೃಪ್ತರಾಗುವರು.”

“ಪ್ರಭುಗಳ ಗ್ರಹಿಕೆ ತಪ್ಪಾಗಿದೆ. ಇದು ಪೂಜ್ಯ ವಿದ್ಯಾರಣ್ಯ ಮುನೀಂದ್ರರಿಂದ ಸಂಸ್ಥಾಪಿತವಾದ ಧರ್ಮ ಸಾಮ್ರಾಜ್ಯ. ಅವರು ಬಿಟ್ಟು ಹೋದ ಪೀಠ—ಧರ್ಮಸಿಂಹಾಸನ! ಇಂತಹ ಪವಿತ್ರಸಿಂಹಾಸನವನ್ನು ಏರಬೇಕಾದರೆ ಅರ್ಹತೆಯಿರಬೇಕು. ಜನತೆ ಅರ್ಹತೆಯುಳ್ಳವರನ್ನು ಮಾತ್ರವೇ ಸಿಂಹಾಸನದ ಮೇಲೇರಿಸುವುದು.”

"ಹಾಗಾದರೆ ಚಿನ್ನಾದೇವಿಯ ಪುತ್ರನಿಗೆ ಸಿಂಹಾಸನವನ್ನೇರಲು ಅರ್ಹತೆಯಿಲ್ಲವೆ?"

ಈ ಮಾತಿಗೆ ನೇರವಾಗಿ ಉತ್ತರ ಹೇಳಲಾರದವನಾದ ತಿಮ್ಮರಸ ಆದರೂ ಹೇಳಿದ.

"ನನ್ನ ಸ್ಪಷ್ಟ ಅಭಿಪ್ರಾಯಕ್ಕೆ ಪ್ರಭುಗಳು ಮನ್ನಿಸಬೇಕು. ಸಾಮ್ರಾಜ್ಯದ ರಕ್ಷಣೆ—ಏಳಿಗೆ ಇಬ್ಬರು ಕುಮಾರರಿಗೂ ಸೇರಿದ್ದು. ಆದರೆ ಸಿಂಹಾಸನವನ್ನು ಹತ್ತಬಲ್ಲ ಅರ್ಹತೆ ಇರುವುದು ಪಟ್ಟಮಹಿಷಿಯ ಗರ್ಭ ಸಂಜಾತರಿಗಲ್ಲದೆ ಬೇರೆಯವರಿಗೆ ಇಲ್ಲ."

"ಇದು ನಿಮ್ಮ ವೈಯಕ್ತಿಕ ಅಭಿಪ್ರಾಯ. ಇದನ್ನು ನಾನು ಒಪ್ಪಲಾರೆ. ನನ್ನ ವೈಯಕ್ತಿಕ ಅಭಿಪ್ರಾಯವನ್ನು ತಿಳಿಸಿಬಿಡುತ್ತೇನೆ. ಸಿಂಹಾಸನ ವಂಶಪಾರಂಪರ್ಯವಾಗಿ ಬಂದುದಾದರೂ—ನಾನು ಕಟ್ಟಿ, ಬೆಳೆಸಿ, ನಿಲ್ಲಿಸಿದ ಸಾಮ್ರಾಜ್ಯ ಇದು. ನನ್ನ ಇಷ್ಟಬಂದವರಿಗೆ—ಯಾರು ದಕ್ಷರಾಗಿ ಆಳುವರೆಂದು ನನಗೆ ಅನಿಸುವುದೋ ಅವರಿಗೆ ಇದನ್ನು ವಹಿಸಿಕೊಡುತ್ತೇನೆ. ಇದರಲ್ಲಿ ವೈಯುಕ್ತಿಕ ಧರ್ಮವೂ ಇದೆ, ಕರ್ತವ್ಯವೂ ಇದೆ, ಎಂದು ನನ್ನ ನಂಬಿಕೆ."

"ಪ್ರಭುಗಳು ಹೀಗೆ ಭಾವಿಸುವುದಾದರೆ—ಅದಕ್ಕೆ ಪ್ರತಿ ಹೇಳುವ ಶಕ್ತಿ ನನ್ನಲ್ಲಿಲ್ಲ."

"ಏಕೆ?"

"ಪ್ರಭುಗಳು ಮನ್ನಿಸಬೇಕು, ತಮ್ಮ ವಿರೋಧ ಮಾತನಾಡಬೇಕಾಗಿದೆ. ಸತ್ಯವನ್ನೇ ನುಡಿಯಬೇಕಾಗಿದೆ. ಇದು ತಾವು ಕಟ್ಟಿದ ಸಾಮ್ರಾಜ್ಯ ದಿಟ. ಆದರೆ ಇದು ನಿಂತಿರುವುದು ನಮ್ಮ ನಿಮ್ಮ ಶಕ್ತಿಯಿಂದಲ್ಲ. ಭುವನೇಶ್ವರಿಯ ಕೃಪೆಯಿಂದ ಇದು ನಿಂತಿದೆ ಎನ್ನುವುದೂ ದಿಟ. ಅಂದರೆ ಇದು ಧರ್ಮಸ್ಥಾಪನೆಗಾಗಿ ಉಂಟಾದ ಸಾಮ್ರಾಜ್ಯ. ಎಲ್ಲಿಯ ತನಕ ಧರ್ಮಕ್ಕೆ ಇಲ್ಲಿ ಚ್ಯುತಿ ಇಲ್ಲವೋ ಅಲ್ಲಿಯ ತನಕ ಈ ಸಾಮ್ರಾಜ್ಯಕ್ಕೆ ಯಾವ ಹಾನಿಯೂ ಇಲ್ಲ. ಅಧರ್ಮ ತಲೆಯೆತ್ತಿದರೆ ಅಂದೇ ವಿಪತ್ತು ಖಂಡಿತ. ಹೀಗೆಂದು ಹಿಂದಿನಿಂದಲೂ ನಡೆದು ಬಂದಿರುವ ಋಷಿವಾಣಿ. ಇದನ್ನು ಪರೀಕ್ಷಿಸಿ ನೋಡುವ ಧೈರ್ಯ ನನಗೆ ಇಲ್ಲ ಪ್ರಭು!"

"ಹಾಗಾದರೆ ಚಿನ್ನಾದೇವಿಯ ಪುತ್ರನು ಸಿಂಹಾಸನವನ್ನು ಹತ್ತುವುದು ನಿಮ್ಮ ಕಣ್ಣಿಗೆಲ್ಲ ಅಧರ್ಮವೆ?"

"ನನ್ನ ಅಭಿಪ್ರಾಯವನ್ನು ಆಗಲೇ ಸ್ಪಷ್ಟಪಡಿಸಿದ್ದೇನೆ ಪ್ರಭು."

"ಇದೇ ನಿಮ್ಮ ಖಂಡಿತ ಅಭಿಪ್ರಾಯವೋ?"

"ಹೌದು ಪ್ರಭು!"

"ಹಾಗಾದರೆ ಕುಮಾರನು ಪಟ್ಟಾಭಿಷಕ್ತನಾದರೆ ಅವನನ್ನು ನೀವು ಸಾಮ್ರಾಟನೆಂದು ಒಪ್ಪಿಕೊಳ್ಳುವುದಿಲ್ಲವೆ?"

"ಸಾಮ್ರಾಟನೆಂದು ಒಪ್ಪಿಕೊಳುವುದೂ ಬಿಡುವುದೂ ಬೇರೆ ಸಂಗತಿ ಪ್ರಭು. ಆದರೆ ಯಾರು ಧರ್ಮಸಮ್ಮತವಾಗಿ ರಾಜ್ಯಾಭಿಷಕ್ತರಾಗಬೇಕೆಂದು ನನಗೆ ತಿಳಿದುದನ್ನು ಹೇಳಿದೆ. ಪ್ರಭುಗಳಿಗೆ ಅಪಚಾರವಾಗಿದ್ದರೆ ಕ್ಷಮಿಸಬೇಕು."

ಈ ಮಾತಿನಿಂದ ತಾನು ಹೇಳಬೇಕಾದುದನ್ನೆಲ್ಲ ಹೇಳಿ ಮುಗಿಸಿದುದಾಯಿತೆನ್ನುವಂತೆ, ತಿಮ್ಮರಸನು ಸುಮ್ಮನಾಗಿ ಒಂದು ನಿಟ್ಟುಸಿರುಬಿಟ್ಟನು. ಅವನ ಮಂಜು ಕವಿದ ಕಣ್ಣಿಗೆ ಅನೇಕ ಭಯಾನಕ ಚಿತ್ರಗಳು ಕಾಣಿಸಿದುವು. ದೇವರೇ ಈ ವಿಪತ್ತುಗಳಿಂದ ಸಾಮ್ರಾಜ್ಯವನ್ನು ಪಾರುಮಾಡು, ಕೃಷ್ಣದೇವರಾಯನಿಗೆ ಸದ್ಬುದ್ಧಿ ಕೊಡು—ಎಂದು ಅವನ ಹೃದಯ ದೇವರಲ್ಲಿ ಮೊರೆಯಿಡುತ್ತಿತ್ತು. ಅದನ್ನು ಕೃಷ್ಣದೇವರಾಯನು ಅರಿತುಕೊಂಡನೋ ಏನೋ. ತಮ್ಮ ಭೇಟಿ ಇಲ್ಲಿಗೆ ಮುಗಿಯಿತೆಂದು ತಿಳಿಸಲು, ತಿಮ್ಮರಸನನ್ನು ಒಮ್ಮೆ ತೀಕ್ಷ್ಣವಾಗಿ ನೋಡಿದ.

ಅದರ ಇಂಗಿತವನ್ನು ಅರಿತುಕೊಂಡು ತಿಮ್ಮರಸನು ಅಲ್ಲಿಂದ ಕಾಲ್ತೆಗೆದ.

ತಿಮ್ಮರಸನು ಅಲ್ಲಿಂದ ಹೊರಟುಹೋದರೂ ಕೃಷ್ಣದೇವರಾಯನು ಮಾತ್ರ ಬಹಳ ಹೊತ್ತು ಅಲ್ಲೇ ಕುಳಿತಿದ್ದ.

ಈ ಎಲ್ಲ ಸಂಗತಿಯನ್ನು ಗೋಪ್ಯವಾಗಿಯೇ ಇರಿಸಿದ್ದರೂ ಅದು ಹೇಗೆ ಎಲ್ಲರಿಗೂ ತಿಳಿಯಿತೋ ಯಾರಿಗೂ ತಿಳಿಯದು. ಅಂತೂ ಕೃಷ್ಣದೇವರಾಯ ತಿಮ್ಮರಸನ ಮಾತುಗಳಲ್ಲಿ ಬಹು ಪಾಲು ಅನೇಕರಿಗೆ ತಿಳಿಯದೆ ಇದ್ದರೂ ಮುಖ್ಯಾಂಶ ಮಾತ್ರ ಎಲ್ಲರಿಗೂ ತಿಳಿದು ಹೋಗಿತ್ತು. ಪ್ರಭುಗಳ

ಸಿಂಹಾಸನ ತ್ಯಾಗ—ಚಿನ್ನಾದೇವಿಯ ಮಗನ ಪಟ್ಟಾಭಿಷೇಕ—ಇವುಗಳು ನಡೆಯಲಿರುವ ಮಹತ್ ಘಟನೆಗಳಾಗಿ ಎಲ್ಲರಿಗೂ ತಿಳಿದಿತ್ತು.

ಇಷ್ಟೆಲ್ಲ ತಿಪ್ಪಾಜಿಯಿಂದಲೇ ತಿಳಿದರೂ ಇನ್ನೂ ತಿರುಮಲಾದೇವಿಗೆ ಈ ಸುದ್ದಿಯಲ್ಲಿ ನಂಬಿಕೆ ಹುಟ್ಟಲಿಲ್ಲ. ಅವಳು ಇನ್ನೂ ಸಂಶಯ ವ್ಯಕ್ತಪಡಿಸುತ್ತಲೇ ಇರುವುದನ್ನು ಕಂಡು, ತಿಪ್ಪಾಜಿ ಎಂದಳು:

"ಹಾಗಾದರೆ ತಿಮ್ಮರಸರನ್ನು ಕರೆಸಿಕೊಂಡು ಕೇಳಿದರೆ ಎಲ್ಲವೂ ತಿಳಿದು ಹೋಗುತ್ತದೆ. ಇದು ಒಂದು ವೇಳೆ ನಿಜವೇ ಆಗಿದ್ದರೆ ನಮ್ಮ ದೌರ್ಭಾಗ್ಯ. ಒಂದು ವೇಳೆ ಸುಳ್ಳೇ ಆಗಿದ್ದರೆ ನಮಗೆ ಸಂತೋಷವೇ. ಯಾವುದೂ ಇಂದೇ ಇತ್ಯರ್ಥವಾಗಲಿ. ಮೊದಲು ತಿಮ್ಮರಸರಿಗೆ ಬರಲು ಹೇಳಿ ಕಳುಹಿಸಿ" ಎಂದಳು.

ಅದರಂತೆ ತಿರುಮಲಾದೇವಿ ತಿಮ್ಮರಸನನ್ನು ಕೂಡಲೇ ಕರೆತರಲು ಸೇವಕರನ್ನು ಕಳುಹಿಸಿ, ಅವರ ಬರುವಿಗಾಗಿ ಕಾದು ಕುಳಿತಳು. ತಿಮ್ಮರಸರು ಯಾವ ವಾರ್ತೆಯನ್ನು ಹೊತ್ತು ತರುವರೋ ಎಂದು ಅವಳ ಹೃದಯ ಒಂದೇ ಸಮನೆ ಬಡಿದುಕೊಳ್ಳುತ್ತಿತ್ತು.

## ೧೨

ತಿಮ್ಮರಸನು ಮಹಾರಾಣಿ ತಿರುಮಲಾದೇವಿಯು ಒಂದು ಮಹತ್ವದ ವಿಷಯವನ್ನು ಸಮಾಲೋಚಿಸಲು ಬರಬೇಕೆಂದು ಕೋರಿದ್ದ ಪತ್ರವನ್ನು ಕಂಡಕೂಡಲೆ ಮಾಡುತ್ತಿದ್ದ ಕೆಲಸವನ್ನು ಬಿಟ್ಟು ಸೇವಕರನ್ನು ಹಿಂಬಾಲಿಸಿ ಅರಮನೆಗೆ ಬಂದನು.

ತಿರುಮಲಾದೇವಿ ತಿಮ್ಮರಸನನ್ನು ಉಚಿತ ಮರ್ಯಾದೆಯಿಂದ ಬರ ಮಾಡಿಕೊಂಡು ಸತ್ಕರಿಸಿದಳು.

" ಅಪ್ಪಾಜಿ, ನಿಮ್ಮನ್ನು ಆತುರವಾಗಿ ಕರೆಸಬೇಕಾಯಿತು. ನಿಮಗೆ ತೊಂದರೆಯಾಗಿದ್ದರೆ ದಯವಿಟ್ಟು ಕ್ಷಮಿಸಿ " ಎಂದಳು.

" ಏನು ಸಮಾಚಾರ ತಾಯಿ ?"

" ಈ ಸುದ್ದಿ ನಿಜವೇ ಅಪ್ಪಾಜಿ ?"

" ಯಾವ ಸುದ್ದಿ ತಾಯಿ ?"

" ಮಹಾಪ್ರಭುಗಳು ಸಿಂಹಾಸನ ತ್ಯಾಗ ಮಾಡಿ, ಚಿನ್ನಾದೇವಿಯ ಕುಮಾರರಿಗೆ ಪಟ್ಟಕಟ್ಟುತ್ತಾರಂತೆ, ಹೌದೆ ?"

ನಿರುದ್ವೇಗದಿಂದ ಕೇಳಿದ ಈ ಪ್ರಶ್ನೆಯಿಂದ ತಿಮ್ಮರಸನಿಗೆ ಏನು ಹೇಳ ಬೇಕೆಂದು ತಿಳಿಯದೆ ಕ್ಷಣಕಾಲ ಹೌಹಾರಿದ.

ಏಕೆಂದರೆ ಈ ಸಂಗತಿಯನ್ನು ಸ್ವಯಂ ಪ್ರಭುಗಳೇ ಯಾರಿಗೂ ತಿಳಿಸ ಬಾರದೆಂದು ಹೇಳಿದ್ದರು. ಈ ಬಗ್ಗೆ ಯಾವ ನಿರ್ಧಾರವನ್ನು ಕೈಗೊಳ್ಳುವ ತನಕ ಇದು ಅತ್ಯಂತ ಗೋಪ್ಯ ಸಂಗತಿಯಾಗಿ ಇರಬೇಕೆಂದು ಕಟ್ಟಪ್ಪಣೆ ಮಾಡಲಾಗಿತ್ತು, ಅದರಂತೆ ತಿಮ್ಮರಸನು ಇದರ ಬಗ್ಗೆ ಯಾರಲ್ಲೂ ಬಾಯಿ ಬಿಟ್ಟಿರಲಿಲ್ಲ. ಗೋಪ್ಯವಾಗಿ ಇರಿಸಲು ಕೋರಿದ ಪ್ರಭುಗಳೇ ಯಾರಿಗೂ ಇದನ್ನು ತಿಳಿಸಿರಲಾರರು. ಹಾಗಾದರೆ ಈ ಸಂಗತಿ ಬಯಲಾದುದೆಂತು ?

ತಮ್ಮಿಬ್ಬರ ಸಂಭಾಷಣೆಯಾಗುವಾಗ ಆ ಸ್ಥಳದಲ್ಲಿ ಯಾರಿಗೂ ಪ್ರವೇಶ ವಿರಲಿಲ್ಲ. ಇಂತಿರುವಾಗ ಈ ಸಮಾಚಾರ ಮಹಾರಾಣಿ ತಿರುಮಲಾದೇವಿಯ ತನಕ ಬಂದು ಮುಟ್ಟಿದ ಬಗೆ ಹೇಗೆ ಎಂದು ಆಶ್ಚರ್ಯವೇ ಆಯಿತು.

ತಿಮ್ಮರಸನು ಅಚ್ಚರಿಪಡುವ ಕಾರಣವಿರಲಿಲ್ಲ. ಅತಿ ಮಹತ್ವದ ಈ ಸಂಗತಿಯನ್ನು ಕೃಷ್ಣದೇವರಾಯನೇ ತನಗೆ ತಿಳಿಯದಂತೆ ಬಯಲು ಮಾಡಿದ್ದನು.

ಆ 'ದಿನ ತಿಮ್ಮರಸನೊಡನೆ ಸಮಾಲೋಚನೆ ನಡಸಿದನಂತರ ರಾಯನು ನೇರ ಚಿನ್ನಾದೇವಿಯ ಅಂತಃಪುರಕ್ಕೆ ನಡೆತಂದನು.

ಅಂತಃಪುರದಲ್ಲಿ ಇಂದು ರಾಜಕುಮಾರನು ಏಕೊ ಅಳುತ್ತಿದ್ದನು. ಅವನು ಯಾವುದಕ್ಕೊ ಚಂಡಿ ಹಿಡಿದು ಕುಳಿತಿದ್ದ. ಏಕೆಂದು ಚಿನ್ನಾದೇವಿಯನ್ನು ಕೇಳಿದಾಗ, ಅವನು ಎಂದೂ ಕೇಳದೆ ಇದ್ದ ವಸ್ತುವಿಗಾಗಿ ಇಂದು ಹಟಮಾಡುತ್ತಿರುವನೆಂದು ತಿಳಿಯಿತು. ಕುಮಾರನು ತನಗೆ ಒಂದು ಕತ್ತಿ ಬೇಕೆಂದು ತಾಯಿಯನ್ನು ಕೇಳಿದನಂತೆ. ತಾಯಿ ಮಗನಿಗೆ ಒಂದು ಮರದ ಕತ್ತಿಯನ್ನು ತರಿಸಿಕೊಟ್ಟಳಂತೆ. ಅದರಿಂದ ತೃಪ್ತಿಗೊಳ್ಳದೆ ರಾಜಕುಮಾರನು ತನಗೆ ನಿಜವಾದ ಕತ್ತಿಯೇ ಬೇಕೆಂದು ರಗಳೆ ಮಾಡುತ್ತಿದ್ದ.

ಚಿನ್ನಾದೇವಿಗೆ ಕುಮಾರನನ್ನು ಸಂತೈಸಲಾಗದೆ ಬೇಜಾರು ಬಂದು ಹೋಗಿತ್ತು. ಅವಳು ಕೃಷ್ಣದೇವರಾಯನ ಬರುವಿಗಾಗಿ ಕಾದಿದ್ದಳು, ಮಗನನ್ನು ಅವನಿಗೆ ಒಪ್ಪಿಸಿ ತಾನು ಸಮಾಧಾನ ತಾಳಲು. ಏಕೆಂದರೆ ಕುಮಾರನಿಗೆ ತಾಯಿಗಿಂತಲೂ ತಂದೆಯಲ್ಲಿ ಹೆಚ್ಚಿನ ಸಲಿಗೆ ಇತ್ತು.

ಕೃಷ್ಣದೇವರಾಯನನ್ನು ದೂರದಿಂದ ನೋಡುತ್ತಲೇ ಕುಮಾರನು ಓಡಿ ಹೋಗಿ "ಅಪ್ಪಾಜಿ, ಅಪ್ಪಾಜಿ" ಎನ್ನುತ್ತ ಅವನನ್ನು ತಬ್ಬಿಕೊಂಡ. ಅನಂತರ ತಾಯಿಯ ಮೇಲೆ ಚಾಡಿ ಹೇಳಿದ.

"ನೋಡು ಅಪ್ಪಾಜಿ, ಅಮ್ಮ ನನಗೆ ಕತ್ತಿ ಕೇಳಿದರೆ ಇಲ್ಲವೆನ್ನುತ್ತಾಳೆ"

"ಮಕ್ಕಳು ಹಾಗೆಲ್ಲ ಕತ್ತಿಯೊಂದಿಗೆ ಆಟವಾಡಬಾರದು ಮಗು." ಎಂದು ಹೇಳಿದ ಅನ್ಯಮನಸ್ಕನಾಗಿ ಕೃಷ್ಣದೇವರಾಯ.

"ಯಾಕೆ ಅಪ್ಪಾಜಿ?"

"ಕತ್ತಿ ತುಂಬ ಹರಿತವಾಗಿರುತ್ತದೆ."

"ನಿಮ್ಮ ಬಳಿಯಲ್ಲಿ ಇದೆಯಲ್ಲ ಅಪ್ಪಾಜಿ?"

"ನಾನು ದೊಡ್ಡವನು ಮಗು. ಹರಿತವಾದ ಕತ್ತಿಯು ನನ್ನನ್ನು ಏನೂ ಮಾಡುವುದಿಲ್ಲ."

" ಅದು ನನ್ನನ್ನೂ ಏನೂ ಮಾಡುವುದಿಲ್ಲ ಅಪ್ಪಾಜಿ—ಅದನ್ನು ನನಗೂ ಕೊಡಿ ಅಪ್ಪಾಜಿ." ಎಂದು ಕುಮಾರನು ಕೇಳಿದ.

" ಕತ್ತಿಯನ್ನು ತೆಗೆದುಕೊಂಡು ನೀನು ಏನು ಮಾಡುತ್ತಿ ಮಗು?

" ಆಟವಾಡುತ್ತೇನೆ."

" ಎಂತಹ ಆಟ."

" ಯುದ್ಧದಾಟ!"

" ನಿನಗೆ ಯಾರು ಹೇಳಿದರು ಮಗು? ಯುದ್ಧದಲ್ಲಿ ಕತ್ತಿಯೊಡನೆ ಆಟವಾಡುತ್ತಾರೆಂದು; ನಿನಗೆ ಯಾರು ಹೇಳಿದರು ಮಗು?" ರಾಯನು ವಿಸ್ಮಯದಿಂದ ಕೇಳಿದ.

ಕೊಂಚ ಕಾಲದ ಹಿಂದೆ ಚಿನ್ನಾದೇವಿಯೇ ಮಗನಿಗೆ ಕೃಷ್ಣದೇವರಾಯನ ಯುದ್ಧ ಸಾಹಸಗಳನ್ನು ರಸವತ್ತಾಗಿ ಬಣ್ಣಿಸಿ, ಮಗನೂ ತಂದೆಯಂತೆ ವೀರಾಗ್ರಣಿಯಾಗಬೇಕೆಂದು ಹೇಳುತ್ತಿದ್ದಳು.

ಆಗ ಮಗುವು ತಟಕ್ಕನೆ ಹೇಳಿತ್ತು:

" ನನಗೂ ಕತ್ತಿಯನ್ನು ಕೊಟ್ಟರೆ ನಾನೂ ಅಪ್ಪಾಜಿಯಾಗುತ್ತೇನೆ."

ಈ ಮಾತು ಕೇಳಿ ಚಿನ್ನಾದೇವಿಯು ಬಿದ್ದು ಬಿದ್ದು ನಕ್ಕಳು. ಆರು ವರ್ಷದ ಮಗುವಿಗೆ ಕತ್ತಿ ಕೊಟ್ಟರೆ ಅಪ್ಪಾಜಿಯಾಗುತ್ತಾನಂತೆ! ಚಿನ್ನಾದೇವಿ ಇದನ್ನು ಎಲ್ಲರಿಗೂ ಹೇಳಿಕೊಂಡು ನಕ್ಕು, ಕುಮಾರನ ರಕ್ತದಲ್ಲಿ ಬಂದಿರುವ ತಂದೆಯ ಗುಣಗಳನ್ನು ಕುರಿತು ಸಂತೋಷಪಟ್ಟಿದ್ದಳು.

ಕುಮಾರನು ತನ್ನ ಮಾತನ್ನು ಮರೆಯಲಿಲ್ಲ. ಅವನು ಮತ್ತೆ ತನಗೆ ಕತ್ತಿ ಬೇಕೆಂದು ಕೇಳಿದ.

" ನೀನು ಅಪ್ಪಾಜಿಯಂತೆ ದೊಡ್ಡವನಾದಾಗ ನಿನಗೆ ಕತ್ತಿಯನ್ನು ಕೊಡುತ್ತೇನೆ ಮಗು. ಈಗ ಕತ್ತಿ ಬೇಕೆಂದು ಹಠಮಾಡಬಾರದು ಮಗು" ಎಂದು ಬುದ್ಧಿ ಹೇಳಿದಳು.

" ನೀನು ಸುಳ್ಳು ಸುಳ್ಳೇ ಹೇಳುತ್ತಿದ್ದಿ" ಎಂದು ತಾಯಿಯ ಮಾತನ್ನು ಗಮನಕ್ಕೆ ತಂದುಕೊಂಡಿರಲಿಲ್ಲ ಕುಮಾರ.

ಈಗ ಅಪ್ಪಾಜಿಯೂ ಅದೇ ಮಾತನ್ನು ಹೇಳಿದ್ದ.

" ನೀನು ದೊಡ್ಡವನಾದ ಮೇಲೆ ನಿನಗೆ ಕತ್ತಿಯನ್ನು ಕೊಡುತ್ತೇನೆ ಮಗು."

"ಸುಳ್ಳು ಹೇಳುತ್ತೀರಿ ಅಪ್ಪಾಜಿ."

"ನಾನು ಎಂದಾದರೂ ಸುಳ್ಳು ಹೇಳಿದ್ದೇನೆಯೇ ಮಗು?"

"ಬೇಕಾದಷ್ಟು ಸಲ ಹೇಳಿದ್ದೀರಿ!"

ನಿರ್ದಾಕ್ಷಿಣ್ಯವಾಗಿ ಹೇಳಿದ ಕುಮಾರ.

"ಎಂದು ಹೇಳಿದ್ದೇನೆ?"

"ನಾನು ಏನು ಕೇಳಿದರೂ ನೀವು ಹಾಗೆಯೇ ಹೇಳುತ್ತಿದ್ದೀರಿ. ನಾನು ನಿಮ್ಮ ಕಿರೀಟವನ್ನು ಕೇಳಿದರೆ ದೊಡ್ಡವನಾದ ಮೇಲೆ ಕೊಡುವುದಾಗಿ ಹೇಳುತ್ತಿದ್ದೀರಿ. ನಿಮ್ಮ ಸಿಂಹಾಸನ ಬೇಕೆಂದರೆ ಅದಕ್ಕೂ ಹಾಗೆಯೇ ಹೇಳುತ್ತಿದ್ದೀರಿ. ಈಗ ಕತ್ತಿಯನ್ನು ಕೇಳಿದರೂ ಅದಕ್ಕೂ ದೊಡ್ಡವನಾಗಲಿ ಎಂದು ಹೇಳುತ್ತಿದ್ದೀರಿ. ಎಲ್ಲ ಸುಳ್ಳು" ಎಂದು ಆರೋಪಿಸಿದ. ಈ ಮಾತು ಕೇಳಿ ಕೃಷ್ಣದೇವರಾಯನು ಅವಾಕ್ಕಾಗಿ ಕುಳಿತ.

"ಇಲ್ಲ ಮಗು ನೀನು ದೊಡ್ಡವನಾದ ಮೇಲೆ ಖಂಡಿತವಾಗಿಯೂ ನಿನಗೆ ಕಿರೀಟ, ಸಿಂಹಾಸನ, ಕತ್ತಿಗಳನ್ನು ನಾನೇ ಒಪ್ಪಿಸಿಕೊಡುತ್ತೇನೆ. ಈಗ ಆ ಮಾತು ಬೇಡ ಮಗು."

"ಏಕೆ ಅಪ್ಪಾಜಿ?"

"ಈಗ ಯಾವುದಕ್ಕೂ ಅಕಾಲ ಮಗು! ಯಾವುದಕ್ಕೂ ಕೊಂಚ ಕಾಲ ತಡೆಯಬೇಕು ಮಗು."

"ಹಾಗಾದರೆ ನಾನು ಸಿಂಹಾಸನದಲ್ಲಿ ಕುಳಿತುಕೊಳ್ಳಲು ನಿಮ್ಮಷ್ಟು ದೊಡ್ಡವನಾಗುವ ತನಕ ಕಾಯಬೇಕೆ ಅಪ್ಪಾಜಿ?"

ಈ ಮಗುವಿನ ಪ್ರಶ್ನೆಯನ್ನು ಕೇಳಿ ಕೃಷ್ಣದೇವರಾಯ ತಬ್ಬಿಬ್ಬಾದ!

"ಇಲ್ಲ ಮಗು....ಇಲ್ಲ. ಇನ್ನು ಕೆಲವೇ ದಿನಗಳಲ್ಲಿ ನಿನ್ನನ್ನು ಸಿಂಹಾಸನದ ಮೇಲೆ ಕೂಡಿಸಿ ಪಟ್ಟಗಟ್ಟಿ, ಸಾಮ್ರಾಟನೆಂದು ಸಾರುತ್ತೇನೆ."

"ನೀವು ಈ ಮಾತನ್ನು ಕಳೆದ ವರ್ಷದಿಂದಲೂ ಹೇಳುತ್ತ ಬಂದಿದ್ದೀರಿ" ಎಂದು ಅಲ್ಲೇ, ತಂದೆ ಮಕ್ಕಳ ವಿಚಿತ್ರ ಸಂವಾದವನ್ನು ಆಲಿಸುತ್ತ ಕುಳಿತಿದ್ದ ಚಿನ್ನಾದೇವಿಯೂ ನಡುವೆ ಬಾಯಿ ಹಾಕಿದಳು.

"ಇಲ್ಲ ಚಿನ್ನಾ. ಈ ಬಾರಿ ನಿನ್ನ ಹಾಗೂ ಕುಮಾರನ ಆಸೆಯನ್ನು ಈಡೇರಿಸಿ ಕೊಡಲು ಸಂಕಲ್ಪಿಸಿದ್ದೇನೆ."

ಎಂದು ಹೇಳಿ, ಚಿನ್ನಾದೇವಿಯನ್ನು ಬಳಿಗೆ ಕರೆದು ಅವಳಿಗೆ ತಿಮ್ಮರಸನೊಂದಿಗೆ ತಾನು ನಡಸಿದ ಎಲ್ಲ ಸಮಾಲೋಚನೆಯನ್ನೂ ವಿವರಿಸಿದ.

ಈ ಎಲ್ಲ ಸಂಗತಿಯನ್ನು ಕೇಳಿ ಚಿನ್ನಾದೇವಿಗೆ ಸಂತೋಷದಿಂದ ಕುಣಿದಾಡುವಂತೆ ಆಯಿತು. ತನ್ನ ಕುಮಾರನಿಗೆ ರಾಜ್ಯಾಭಿಷೇಕ! ತಾನು ರಾಜಮಾತೆಯಾಗಲಿರುವೆ—ಎಂಬುದುನ್ನು ನೆನೆದು ಅವಳ ಹೃದಯ ಸಂತೋಷದಿಂದ ಬಿರಿಯಿತು.

ಆದರೂ ತನ್ನ ಸಂತೋಷವನ್ನು ಮಾತಿನಲ್ಲಿ ವ್ಯಕ್ತಪಡಿಸದೆ ಬಿನ್ನಾಣದಿಂದ ಹೇಳಿದಳು.

"ಮಹಾಪ್ರಭುಗಳಿಗೆ ಕುಮಾರನ ಮನಸ್ಸು ತಿಳಿದಿರುವಂತೆ ತಾಯಿಯಾದ ನನಗೆ ತಿಳಿದಿಲ್ಲ!"

"ಅದು ಹೇಗೆ ಚಿನ್ನಾ?"

"ಕುಮಾರನನ್ನು ಅದೆಷ್ಟು ಸುಲಭವಾಗಿ ಸಮಾಧಾನಪಡಿಸಿಬಿಟ್ಟಿರಿ."

"ಇಷ್ಟೇ ತಾನೇ. ಮಗು ತನಗೆ ಸಿಂಹಾಸನ, ಕಿರೀಟ, ಪಟ್ಟದ ಕತ್ತಿ ಬೇಕೆಂದ. ಆಗಲಿ ಕೊಡುತ್ತೇನೆ ಎಂದು ಹೇಳಿದೆ, ಇದರಿಂದ ಸುಮ್ಮನಾದ."

"ತಮ್ಮ ಮಾತನ್ನು ಆ ಪೋರ ನಂಬಿದನೆ?"

"ಏಕೆ?"

"ಪ್ರಭುಗಳು ಹಿಂದಿನಿಂದಲೂ ಹಾಗೆ ಹೇಳುತ್ತಲೇ ಇರುವರೆಂದು ಅವನ ಆಕ್ಷೇಪಣೆ."

"ಇಲ್ಲ ಚಿನ್ನಾ. ಈ ಬಾರಿ ಕುಮಾರನ ಆಸೆಯನ್ನು ಈಡೇರಿಸಲು ನಿರ್ಧರಿಸಿದ್ದೇನೆ."

"ಮಹಾಪ್ರಸಾದ!" ಎಂದು ಪ್ರಭುಗಳ ಕೈಯನ್ನು ಕಣ್ಣಿಗೊತ್ತಿಕೊಂಡಳು ಚಿನ್ನಾದೇವಿ.

ಈ ಸಂತೋಷದ ವಾರ್ತೆಯನ್ನು ಚಿನ್ನಾದೇವಿಯು ತನ್ನ ಹೃದಯದಲ್ಲಿ ಬಚ್ಚಿಟ್ಟುಕೊಳ್ಳಲು ಸಮರ್ಥಳಾಗದೆ, ಅದನ್ನು ತನ್ನ ತಂದೆಯಾದ ಕೊಂಡಮರಸಯ್ಯ ಮತ್ತು ಸೋದರನಾದ ವಿಜಯಭದ್ರನೊಂದಿಗೆ ಪಾಲುಗೊಂಡು, ಸುಖಿಸಿದಳು.

ಅವರಿಗೆ ಈ ಸಂಗತಿ ತಿಳಿದ ಮೇಲೆ ಇನ್ನು ಕೇಳುವುದೇನಿದೆ? ಎಲ್ಲ

ರಿಗೂ ತಿಳಿದುಹೋಯಿತು. ಕಸ್ತೂರಿಯ ಕಂಪಿನಂತೆ ಈ ಸಂತೋಷದ ವಾರ್ತೆ ಎಲ್ಲೆಡೆಯಲ್ಲೂ ವ್ಯಾಪಿಸಿ, ತಿರುಮಲಾದೇವಿಯ ಅಂತಃಪುರಕ್ಕೂ ಬಂದಿತ್ತೆಂದು ತಿಮ್ಮರಸನು ಮಾತ್ರ ತಿಳಿಯದೆ ಹೋದ.

ಅಂತಲೇ ಅವನು ಪ್ರಶ್ನಿಸಿದ.

"ತಮಗೆ ಈ ಸುದ್ದಿಯನ್ನು ಯಾರು ಹೇಳಿದರು ತಾಯಿ?"

"ಹಾಗೆಯೇ ವರ್ತಮಾನ ಬಂದಿತು. ಇದು ಎಷ್ಟರ ಮಟ್ಟಿಗೆ ನಿಜವೆಂದು ತಿಳಿಯಲೆಂದೇ ನಿಮ್ಮನ್ನು ನಾನು ಈಗ ಕರೆಸಿದ್ದು."

ತಿಮ್ಮರಸನಿಗೆ ರಾಜಾಜ್ಞೆಯ ನೆನಪಾಯಿತು:

'ಈ ಸಂಗತಿಯನ್ನು ಯಾರಿಗೂ ತಿಳಿಸಬಾರದು.'

ಆದರೆ ಈ ಸಂಗತಿ ಈ ವೇಳೆಗಾಗಲೇ ಎಲ್ಲರಿಗೂ ತಿಳಿದೇ ಹೋಗಿದೆ. ತಾನು ಈ ಬಗ್ಗೆ ಬಾಯಿ ಬಿಡಬೇಕೋ ಬೇಡವೋ ಎಂಬುದನ್ನು ತಿಳಿಯದೆ ಕ್ಷಣಕಾಲ ಆಲೋಚಿಸಿ, ಹೇಳಿದ.

"ನಿಮಗೆ ಹೇಗೆನಿಸುತ್ತದೆ ತಾಯಿ?"

"ಇಂಥ ಸುದ್ದಿ ನಿಜವಿಲ್ಲವಾದರೂ ಸುಮ್ಮನೆ ಹುಟ್ಟಿರಲಾರದೆಂದು ನನ್ನ ಅನಿಸಿಕೆ."

"ನಮ್ಮೆಲ್ಲರ ದೌರ್ಭಾಗ್ಯದಿಂದ, ಈ ಸುದ್ದಿ ಅಕ್ಷರಶಃ ನಿಜ ತಾಯಿ."

ಈ ಮಾತು ಕೇಳಿ ಕುಸಿದುಬಿದ್ದಳು ತಿರುಮಲಾದೇವಿ. ಇದುವರೆಗೂ ತಾನು ಯಾವುದನ್ನು ಸುಳ್ಳಾಗಿರಬಹುದೆಂದು ತಿಳಿದಿದ್ದಳೋ ಅದು ಸತ್ಯ—ಅಕ್ಷರಶಃ ಸತ್ಯವೆಂದು ತಿಮ್ಮರಸನೇ ಹೇಳಿದ ಮೇಲೆ ಇನ್ನು ಸಂದೇಹಕ್ಕೆ ದಾರಿ ಎಲ್ಲಿ? ತಾನು 'ಸುಳ್ಳಾಗಬಾರದೇ' ಎಂದು ಹಂಬಲಿಸಿದ್ದ ಈ ಸುದ್ದಿ ಕಡೆಗೂ ಸತ್ಯವೇ ಆಯಿತು....ಹಾಗಾದರೆ ಮುಂದೆ ತನ್ನ ಮಗನ ಸ್ಥಿತಿ?

ಕೂಡಲೇ ಅವಳಿಗೆ ತಿರುಮಲದೇವನ ಜ್ಞಾಪಕವಾಯಿತು.

ಆ ಮಗುವಿನ ಮೇಲಣ ಅತಿಯಾದ ಮಮತೆ ಈ ಮಗುವಿನ ಭವಿಷ್ಯವನ್ನು ಮಣ್ಣುಗೂಡಿಸೀತೆಂದು ತಿರುಮಲಾದೇವಿಯು ತಿಳಿದಿರಲಿಲ್ಲ. ಚಿನ್ನಾದೇವಿಯ ಮೇಲೆ, ಅವಳ ಹೊಟ್ಟೆಯಲ್ಲಿ ಹುಟ್ಟಿದ ಆ ಮಗುವಿಗೆ ಮಹಾಪ್ರಭುಗಳಿಗೆ ವಿಶೇಷವಾದ ಪ್ರೀತಿವಾತ್ಸಲ್ಯವಿದ್ದ ಮಾತ್ರಕ್ಕೆ ಈ ಮಗುವಿನ ಆಜನ್ಮಸಿದ್ಧ ಹಕ್ಕಿಗೆ ಧಕ್ಕೆ ಬರುವುದೆಂದು ಅವಳು ಕನಸುಮನಸಿನಲ್ಲಿಯೂ ತಿಳಿದಿರಲಿಲ್ಲ.

ಈಗ ತನ್ನ ಮಗ ತಿರುಮಲದೇವನ ಭವಿಷ್ಯ ನಿರ್ಧಾರವಾಗಿತ್ತು. ಸಾಮ್ರಾಟ ಪಟ್ಟಮಹಿಷಿಯ ಹೊಟ್ಟೆಯಲ್ಲಿ ಹುಟ್ಟಿಯೂ, ಸಾಮ್ರಾಟನಾಗಿ ಶೋಭಿಸುವ ಪುಣ್ಯ ಅವನದಾಗಿರಲಿಲ್ಲ: ಹಾಯ್ ಕುಮಾರ! ನಿನ್ನದು ಎಂತಹ ಹೀನ ಅದೃಷ್ಟ!" ಎಂದು ತಿರುಮಲಾದೇವಿ ಶೋಕತಪ್ತಳಾಗಿ, ಕುಸಿದು ಬಿದ್ದಳು.

ತಿಪ್ಪಾಜಿಯು ಮಾಡಿದ ಉಚಿತ ಶುಶ್ರೂಷೆಯಿಂದ ಬೇಗನೆ ಎಚ್ಚೆತ್ತುಕೊಂಡಳು ತಿರುಮಲಾದೇವಿ. ಅನಂತರ "ಅಪ್ಪಾಜಿ, ನೀವಾದರೂ ಪ್ರಭುಗಳಿಗೆ ತಿಳಿಯಹೇಳಬಾರದಿತ್ತೆ? ನಿಮಗೆ ಮಹಾಪ್ರಭುಗಳು ಮಾಡಿರುವ ಹಂಚಿಕೆ ಪ್ರಿಯವಾಯಿತೆ?" ಎಂದು ಬಡಬಡಿಸಿದಳು.

"ನಮ್ಮನ್ನು ಕೇಳುವವರು ಯಾರು ತಾಯಿ? ಕೇಳಲು ನಾವು ಯಾವ ದೊಡ್ಡ ಮನುಷ್ಯರು? ಮಹಾಪ್ರಭುಗಳಿಗೆ ನಮ್ಮ ಅಭಿಪ್ರಾಯ ಕಟ್ಟಿಕೊಂಡು ಆಗಬೇಕಾದ್ದೇನು? ಎಲ್ಲವೂ ಪ್ರಭುಗಳ ಇಷ್ಟ. ಇದನ್ನು ಟೀಕಿಸುವ ಹಕ್ಕು ಸೇವಕರಿಗೆ ಇವೆಯೇ ತಾಯಿ?"

ತಿಮ್ಮರಸನ ಮಾತಿನಲ್ಲಿ ನೋವಿತ್ತು.

"ಯಾಕೆ ಅಪ್ಪಾಜಿ, ತುಂಬ ಬೇಸರದಿಂದ ಮಾತನಾಡುತ್ತಿದ್ದೀರಿ? ಪ್ರಭುಗಳ ವರ್ತನೆ ನಿಮಗೆ ಸೇರದಿದ್ದರೆ ಅದನ್ನು ಪ್ರಭುಗಳ ಸಮ್ಮುಖದಲ್ಲಿ ಟೀಕಿಸಿ, ಅವರ ಅವಿಚಾರವನ್ನು ಮನಗಾಣುವಂತೆ ಮಾಡಬೇಕು. ಈ ಹಕ್ಕು ನಿಮಗೆ ಇದೆ ಅಪ್ಪಾಜಿ, ನಿಮ್ಮಂತಹ ಸ್ವಾಮಿನಿಷ್ಠ ಸೇವಕರಿಗೆ ಇದೆ. ನೀವು ನಿಲ್ಲಿಸಿದ ಸಿಂಹಾಸನ ಈ ರತ್ನಸಿಂಹಾಸನ! ಈ ರತ್ನ ಸಿಂಹಾಸನದ ಆಗುಹೋಗುಗಳ ಬಗೆಗೆ ನಿಮಗೆ ತಿಳಿದ ನಾಲ್ಕು ಮಾತು ಹೇಳುವ ಅಧಿಕಾರ ನಿಮಗೆ ಇಲ್ಲದ ಮೇಲೆ ಈ ಅಧಿಕಾರ ಮತ್ತೆ ಯಾರಿಗೆ ಇದೆ ಅಪ್ಪಾಜಿ?"

"ನೀವು ಹೇಳುವ ಮಾತು ಒಂದು ಕಾಲದಲ್ಲಿ ನಿಜವಾಗಿತ್ತು ತಾಯಿ. ಆದರೆ ಇಂದು ಈ ಮಾತಿಗೆ ಬೆಲೆ ಇಲ್ಲ. ಪ್ರಭುಗಳ ಭಾಗಕ್ಕೆ ಇಂದು ತಿಮ್ಮರಸನು ಇದ್ದೂ ಇಲ್ಲದ ವ್ಯಕ್ತಿ!"

"ಮಹಾಪ್ರಭುಗಳ ಸೇವೆಯಲ್ಲಿ ದೇಹವನ್ನು ತೇದಿರುವ ನೀವು ಈ ಮಾತನ್ನು ಹೇಳಬೇಕಾದರೆ ನಿಮ್ಮ ಹೃದಯದಲ್ಲಿ ಎಷ್ಟು ವೇದನೆ ತುಂಬಿರಬೇಕು? ಮಹಾಪ್ರಭುಗಳ ವರ್ತನೆಯಿಂದ ನಿಮ್ಮ ಮನಸ್ಸು ಎಷ್ಟು ನೊಂದಿರ

ಬೇಕು? ನಿಮ್ಮನ್ನು ಪಿತೃಸಮಾನವಾಗಿ ತಿಳಿದು, ಅಪ್ಪಾಜಿ ಎಂದು ಕರೆದು ಗೌರವಿಸುತ್ತಿದ್ದ ಪ್ರಭುಗಳೇಕೆ ಹೀಗೆ ಆದರೆಂಬುದು ನನಗೆ ತಿಳಿಯದಾಗಿದೆ. ನಿಜಕ್ಕೂ ಇದು ಯಾವುದೋ ವಿಪತ್ತಿನ ಮುನ್‌ಸೂಚನೆ ಅಪ್ಪಾಜಿ. ನಮ್ಮನ್ನು ಪಂಪಾಪತಿಯೇ ಕಾಪಾಡಬೇಕಾಗಿದೆ" ರಾಣಿಯ ಮಾತಿನಲ್ಲಿ ದುಗುಡವಿತ್ತು.

"ಮಹಾಪ್ರಭುಗಳ ಪ್ರೀತಿವಿಶ್ವಾಸಗಳಿಗೆ ಇಂದೂ ಕೊರತೆ ಇಲ್ಲ ತಾಯಿ. ಪ್ರಭುಗಳು ಮೊದಲಿನ 'ಅಪ್ಪಾಜಿತನ'ವನ್ನೇ ಉಳಿಸಿದ್ದಾರೆ. ಆದರೆ ಈ ಅಪ್ಪಾಜಿ ಎನ್ನುವ ಮಾತಿಗೆ ಬೆಲೆಯಿಲ್ಲವಾಗಿದೆ ಅಷ್ಟೆ. ಪ್ರಭುಗಳು ಈಗ ಮೊದಲಿನಂತೆ ಅಲ್ಲ. ಮೇಲಿಂದ ಮೇಲೆ ದೊರೆತ ದಿಗ್ವಿಜಯಗಳಿಂದ ಅವರ ಸ್ವಭಾವದಲ್ಲಿ ಅನೇಕ ಮಾರ್ಪಾಡುಗಳಾಗಿವೆ. ತಮ್ಮ ಶಕ್ತಿ ಸಾಮರ್ಥ್ಯಗಳ ಬಗ್ಗೆ ದುರಭಿಮಾನವೂ, ದುರಹಂಕಾರವೂ ಉಂಟಾಗಿದೆ ಎಂದು ಬಹಳ ವ್ಯಥೆಯಿಂದ ಹೇಳಬೇಕಾಗಿದೆ ತಾಯಿ. ತಮ್ಮ ಮಾತಿಗೆ, ಕತ್ತಿಗೆ ಇದಿರಿಲ್ಲ ವೆಂದು ಬಹಮನಿ ಸುಲ್ತಾನರ ಆತ್ಮಗೌರವಕ್ಕೆ ಬರೆ ಕೊಡುವಂತೆ ವರ್ತಿಸಿ ದ್ದಾರೆ ತಾಯಿ. ಬಿಜಾಪುರದ ಸುಲ್ತಾನನು ಬಹಿರಂಗ ಸಭೆಯಲ್ಲಿ ಬಂದು ತಮ್ಮ ಪದತಲವನ್ನು ಚುಂಬಿಸುವ ತನಕ ಅವನ ಮೇಲಿನ ಯುದ್ಧ ಘೋಷಣೆ ಯನ್ನು ಹಿಂತೆಗೆಯುವುದಿಲ್ಲವೆಂದು ಪ್ರಭುಗಳು ಮೇಲಿಂದ ಮೇಲೆ ಸಾರಿ ಹೇಳುತ್ತಿದ್ದರು. ಅವರ ಉದ್ಧಟವರ್ತನೆಯ ಫಲ—ಮಹಾಪ್ರಭುಗಳು ಗಾಯಗೊಂಡು ಬದುಕುವುದೇ ಕಠಿಣವಾಯಿತು. ನಮ್ಮ ಪುಣ್ಯ ದೊಡ್ಡದು. ಮಹಾಪ್ರಭುಗಳು ಗುಣಮುಖರಾದರು. ಆದರೂ ಮುಸಲ್ಮಾನರ ದ್ವೇಷ ಎಂತಹ ವಿಷಫಲವನ್ನು ಕೊಡುವುದೆಂಬುದಕ್ಕೆ ಈ ಘಟನೆಯೇ ಸಾಕ್ಷಿ. ಇನ್ನಾದರೂ ಬಹಮನೀ ಸುಲ್ತಾನರೊಂದಿಗೆ ಗೌರವಯುತವಾದ ಒಪ್ಪಂದ ಮಾಡಿಕೊಳ್ಳಲಿ. ನಾನು ಹೇಳಿ ಹೇಳಿ ಸೋತೆ ತಾಯಿ. ನನ್ನ ಮಾತಿಗೆ ಪ್ರಭು ಗಳು ಕಿವಿಗೊಡುತ್ತಿಲ್ಲ. ಈಗ ಕೊಂಡಮರಸಯ್ಯನ ಮಾತೇ ಪ್ರಭುಗಳಿಗೆ ವೇದವಾಕ್ಯವಾಗಿದೆ. ಅವರು ಪ್ರಭುಗಳಿಗೆ ಈ ಸ್ಥಿತಿಯಲ್ಲೂ ಸಮರೋತ್ಸಾಹ ತುಂಬುತ್ತಿದ್ದಾರೆ. ಆದರೆ ದೇವರ ದಯದಿಂದಲೆಂಬಂತೆ ಈಚೆಗೆ ಪ್ರಭುಗಳು ಯುದ್ಧವಿಸರ್ಜನೆಯ ಮಾತು ತೆಗೆದಿದ್ದಾರೆ........ಆಡಳಿತದ ಕಡೆಗೆ ಗಮನ ಹರಿಸಿದ್ದಾರೆ. ಇದು ಶುಭಸೂಚನೆ. ಆದರೆ ಈ ಶುಭಸೂಚನೆಯ ಸಂದರ್ಭ ದಲ್ಲೇ ಪ್ರಭುಗಳು ಸಿಂಹಾಸನ ತ್ಯಾಗ, ಕುಮಾರರ ಪಟ್ಟಾಭಿಷೇಕಗಳ

ಅಶುಭದ ವಾರ್ತೆಯನ್ನು ಕೇಳಿ ನನ್ನ ಹೃದಯ ಏನು ಮಾಡಲೂ ತಿಳಿಯದೆ ಸುಮ್ಮನೆ ತತ್ತರಿಸುತ್ತಿದೆ. ಪ್ರಭುಗಳಿಗೆ ಈ ಸಲಹೆಯನ್ನು ಅದಾರು ಮಾಡಿದರೋ. ಅದರಲ್ಲಿ ಅದಾವ ಸ್ವಾರ್ಥ ಅಡಗಿದೆಯೋ ಆ ಪಂಪಾಪತಿಗೇ ಗೊತ್ತು! ಅಲ್ಲಿಗೆ ಇದು ಯಾವುದೋ ವಿಪತ್ಕಾರಕ ಸೂಚನೆ ಎಂಬುದಂತೂ ನಿಜ."

"ಹಾಗಾದರೆ ಈ ವಿಪತ್ತಿನಿಂದ ಪಾರಾಗುವ ದಾರಿಯೇ ಇಲ್ಲವೇ ಅಪ್ಪಾಜಿ?"

"ಪ್ರಭುಗಳು ಸದ್ಯದ ರಾಜಕೀಯ ಪರಿಸ್ಥಿತಿಯಲ್ಲಿ ತಟಸ್ಥರಾಗಿದ್ದರೆ ಯಾವ ವಿಪತ್ತೂ ಇಲ್ಲ ತಾಯಿ. ಆದರೆ ಪ್ರಭುಗಳು ಸ್ವಾರ್ಥ ಸಾಧಿಸುವ ನೆಪದಲ್ಲಿ ತಾವಾಗಿ ವಿಪತ್ತುಗಳನ್ನು ಮೇಲೆ ತಂದುಕೊಳ್ಳುತ್ತಿರುವರೆಂದೇ ನನ್ನ ನಂಬಿಕೆ. ಪ್ರಭುಗಳು ಅಸ್ವಸ್ಥರಾಗಿರುವ—ಈ ವಿಷಮ ಪರಿಸ್ಥಿತಿಯಲ್ಲಿ ಸಿಂಹಾಸನ ತ್ಯಾಗ—ಕುಮಾರನ ಪಟ್ಟಾಭಿಷೇಕಗಳ ಮಾತು ಏಕೆ ತಾಯಿ? ಇವುಗಳಿಂದ ಆಗಬಹುದಾದ ಅನರ್ಥಗಳನ್ನು ನೆನೆದರೆ ನನ್ನ ಎದೆಯೊಡೆಯುತ್ತದೆ." ಎಂದು ನಡುಗುವ ಧ್ವನಿಯಲ್ಲಿ ಹೇಳಿದ. ಒಮ್ಮೆಲೆ ನಡೆಯಲಿರುವ ಸಿಂಹಾಸನ ತ್ಯಾಗ—ಪಟ್ಟಾಭಿಷೇಕಗಳಿಂದ ಜನತೆಯ ಮೇಲೆ, ಸಾಮಂತ ಮಾಂಡಲೀಕರ ಮೇಲೆ–ಹೊರಗಿನ ಶತ್ರುಗಳ ಮೇಲೆ ಆಗಲಿರುವ ಪ್ರತಿಕ್ರಿಯೆಯನ್ನು ಕಣ್ಣಿಗೆ ಕಟ್ಟುವಂತೆ ಬಣ್ಣಿಸಿದ.

ಇದನ್ನೆಲ್ಲ ಕೇಳಿದ ತಿರುಮಲಾದೇವಿಗೆ ಸಾಮ್ರಾಜ್ಯಕ್ಕೆ ಯಾವುದೋ ಗಂಡಾಂತರ ಕಾದಿದೆ, ಎಂದು ಭಾಸವಾಯಿತು.

ಇದನ್ನು ಯಾರಾದರೂ ನಿವಾರಿಸಬಾರದೆ? ಅವಳ ಹೃದಯ ಮೊರೆಯಿಟ್ಟಿತು. ಮಹಾರಾಜರಿಗೆ ತಿಳಿವಳಿಕೆಯನ್ನು ಹೇಳಿ ಅವರ ವಿಚಾರಗಳನ್ನು ಬಿಟ್ಟುಕೊಡುವಂತೆ ಮಾಡಬಲ್ಲವರು ಸಾಮ್ರಾಜ್ಯದಲ್ಲಿ ಒಬ್ಬರೂ ಇಲ್ಲವೆ? ಎಂದು ಅವಳು ಪರಿತಪಿಸಿದಳು.

ಆ ಶಕ್ತಿ ಇದ್ದ ಏಕೈಕ ವ್ಯಕ್ತಿಯಾಗಿದ್ದ ತಿಮ್ಮರಸನ ಮಾತು ಇಂದು ಪ್ರಭುಗಳಿಗೆ ಬೇಸರವಾಗಿದೆ. ಪ್ರಭುಗಳನ್ನು ಅವರಿಗೆ ಒದಗಿರುವ ವಿಪನ್ನಾವಸ್ಥೆಯಿಂದ ಎಚ್ಚರಿಸಿ, ಅವರ ವಿಚಾರದ ಕಣ್ಣನ್ನು ತೆರೆಸಬಲ್ಲ ವ್ಯಕ್ತಿ ಯಾರು?

" ಅದು ನೀವು ತಾಯಿ. ನಿಮ್ಮಿಂದ ಮಾತ್ರ ಸಾಧ್ಯವಾದರೆ ಆದೀತು. ನೀವೂ ಒಮ್ಮೆ ಪ್ರಭುಗಳೊಡನೆ ಈ ಬಗ್ಗೆ ವಿಚಾರಮಾಡಿ. ಪ್ರಭುಗಳು ತಮ್ಮ ನಿರ್ಧಾರವನ್ನು ಬದಲಿಸದೆ, ತಮ್ಮ ಹಠವನ್ನೇ ಮುಂದುವರಿಸಿದರೆ— ಮುಂದಿನದನ್ನು ಪಂಪಾಪತಿಗೆ ಬಿಟ್ಟುಬಿಡೋಣ." ಎಂದು ಸಲಹೆ ಮಾಡಿದ ತಿಮ್ಮರಸ.

ಈ ಸಲಹೆ ತಿರುಮಲಾದೇವಿಗೆ ಸೂಕ್ತವೆನಿಸಿತು.

ಅವಳು ಮಹಾಪ್ರಭುಗಳೊಂದಿಗೆ ಈ ವಿಷಯ ಪ್ರಸ್ತಾಪ ಮಾಡಲು ನಿಶ್ಚಯಿಸಿದಳು.

ಅದಕ್ಕೆ ತಕ್ಕಂತೆ ಪ್ರಹಾಪ್ರಭುಗಳ ಸವಾರಿ ಅಂದೇ ಅಲ್ಲಿಗೆ ಚಿತ್ತೈಸಿತ್ತು. ಪ್ರಭುಗಳನ್ನು ಪ್ರೀತಿಯಿಂದ ಬರಮಾಡಿಕೊಂಡು, ಉಚಿತ ರೀತಿಯಲ್ಲಿ ಸತ್ಕರಿಸಿ, ಸಂತೋಷಗೊಳಿಸಿ, ಮಾತಿನ ಮಧ್ಯೆ ಸಹಜವಾಗಿಯೇ ತಾನು ಕೇಳಿದ್ದ ಸಂಗತಿಗಳನ್ನು ಪ್ರಭುಗಳ ಸಿಂಹಾಸನ ತ್ಯಾಗ—ಕುಮಾರನ ಪಟ್ಟಾಭಿಷೇಕದ ವಾರ್ತೆಯನ್ನು ಪ್ರಭುಗಳ ಗಮನಕ್ಕೆ ತಂದಳು.

ಈ ಮಾತಿನಿಂದ ಕೃಷ್ಣದೇವರಾಯನು ಮೊದಲು ಚಕಿತನಾದರೂ ಇದು ತಿರುಮಲಾದೇವಿಯಿಂದ ಇಂದಲ್ಲ ನಾಳೆಯಾದರೂ ಮುಚ್ಚಿಡಲಾಗದ ಸಂಗತಿ ಎಂಬುದನ್ನು ನೆನೆದು ಯಾವ ಬಗೆಯ ಉದ್ವೇಗವಿಲ್ಲದೆ ತಾನು ಆಲೋಚಿಸಿರುವ ಎಲ್ಲ ಯೋಚನೆಯನ್ನೂ ಆದ್ಯಂತವಾಗಿ ತಿಳಿಸಿ, ತಿಮ್ಮರಸರೊಂದಿಗೆ ಈ ಬಗ್ಗೆ ಪ್ರಸ್ತಾಪ ಮಾಡಿದುದನ್ನು ತಿಳಿಸಿದ.

ಇದನ್ನೆಲ್ಲ ಶಾಂತಚಿತ್ತದಿಂದ ಕೇಳಿದ ತಿರುಮಲಾದೇವಿ, ಈ ವಿಷಯಗಳಾವುವೂ ತನಗೆ ಸಂಬಂಧಿಸವೆಂಬಂತೆ ನಿರ್ವಿಕಾರ ಧ್ವನಿಯಲ್ಲಿ ಪ್ರಶ್ನಿಸಿದಳು:

" ಪ್ರಭುಗಳ ಆಲೋಚನೆಯನ್ನು ಕೇಳಿ ತುಂಬ ಸಂತೋಷವಾಯಿತು. ಆದರೆ ಇದನ್ನು ಕಾರ್ಯಗತಮಾಡುವ ಮುನ್ನ ಮಹಾಪ್ರಭುಗಳು ಪ್ರಜಾಭಿಪ್ರಾಯವನ್ನು – ಅಂದರೆ ಮಂತ್ರಿಪರಿಷತ್ತಿನ ಅಭಿಪ್ರಾಯವನ್ನು ಪಡೆದು ನಡೆದರೆ ಇದರಿಂದ ಹೆಚ್ಚಿನ ಶ್ರೇಯಸ್ಸುಂಟು; ಅಲ್ಪಮತಿಗೆ ತೋರಿದ ಈ ಸಲಹೆಯನ್ನು ಆದರಿಸುವುದೂ ಬಿಡುವುದೂ ಪ್ರಭುಗಳ ಚಿತ್ತ ! "

" ಪ್ರಜಾಭಿಪ್ರಾಯ — ಮಂತ್ರಿಪರಿಷತ್ತಿನ ಅಭಿಪ್ರಾಯ ತೆಗೆದುಕೊಂಡು ಅದರಂತೆ ನಡೆಯಲು ಇದು ಏನು ಸಂಧಿವಿಗ್ರಹವೆ ? ಇದು

ಕೇವಲ ರಾಜಕುಟುಂಬಕ್ಕೆ ಸಂಬಂಧಿಸಿರುವ ವಿಷಯ. ಇದರಲ್ಲಿ ಯಾರಿಗೂ ತಲೆಹಾಕುವ ಅಧಿಕಾರವಿಲ್ಲ!"

"ಪ್ರಭುಗಳು ತಿಳಿದಿರುವಂತೆ ಇದು ರಾಜಕುಟುಂಬಕ್ಕೆ ಮಾತ್ರವೇ ಸಂಬಂಧಿಸಿದ ವೈಯಕ್ತಿಕ ವಿಚಾರವಲ್ಲ. ಅಪಚಾರವಾಗಿದ್ದರೆ ಕ್ಷಮಿಸಬೇಕು. ಇದು ಸಿಂಹಾಸನವನ್ನು ಕುರಿತ ಸಮಸ್ಯೆ. ಸಿಂಹಾಸನ ಜನತೆಯದು. ಅಂದ ಮೇಲೆ ಸಿಂಹಾಸನ ತ್ಯಾಗ—ಪಟ್ಟಾಭಿಷೇಕದಂತಹ ಮಹದ್ಘಟನೆಗಳು ನಡೆಯುವಂದು ಪ್ರಜಾಸಮುದಾಯದ ಅಭಿಪ್ರಾಯ ತೆಗೆದುಕೊಳ್ಳದೆ ದುಡುಕುವುದರಿಂದ ಹಾನಿಯಾಗುವ ಸಂಭವವಿದೆ ಪ್ರಭು!"

"ಪ್ರಜಾಹಿತದೃಷ್ಟಿಯಿಂದಲೇ ಈ ಸಿಂಹಾಸನ ತ್ಯಾಗ—ಪಟ್ಟಾಭಿಷೇಕಗಳು ನಡೆಯುತ್ತಿರುವುದು!"

"ಇದನ್ನು ಹೇಳಬೇಕಾಗಿರುವವವರು ಪ್ರಜೆಗಳು ಪ್ರಭು!"

"ನಮ್ಮ ಮಾತಿನಲ್ಲಿ ನಿನಗೆ ಅಪನಂಬಿಕೆಯೋ?!"

"ಹಾಗಲ್ಲ ಪ್ರಭು! ಸಿಂಹಾಸನಕ್ಕೆ ತಮ್ಮನಂತರ ಯಾರು ಬರಬೇಕು ಎನ್ನುವುದನ್ನು ನಿರ್ಣಯಿಸುವವರು ಪ್ರಜಾಕೋಟಿಯೇ ಹೊರತು ತಾವಲ್ಲ ಪ್ರಭು!"

"ಇದು ನಾನು ಸಂಪಾದಿಸಿದ ರಾಜ್ಯ. ನಾನು ಕಟ್ಟಿ ಬೆಳೆಸಿದ ರಾಜ್ಯ. ಇದರ ಹಿತರಕ್ಷಣೆಯ ಭಾರ ನನಗೆ ಸೇರಿದೆ!"

"ಅಂತೆಯೇ ಈ ಮಾತೂ ಸತ್ಯ—ಇದು ಪ್ರಜೆಗಳ ರಾಜ್ಯ; ಪ್ರಜೆಗಳು ರಕ್ತ ಹರಿಸಿ ಕಟ್ಟಿ ಬೆಳೆಸಿದ ರಾಜ್ಯ. ಅದರ ರಕ್ಷಣೆ ಅವರಿಗೂ ಸೇರಿದೆ."

ಈ ಮಾತಿಗೆ ಏನು ಹೇಳಬೇಕೋ ತಿಳಿಯದೆ ಕೃಷ್ಣದೇವರಾಯನು ಸುಮ್ಮನಾದನು.

"ಇದು ಪ್ರಜೆಗಳ ರಾಜ್ಯವೇ ಆಗಲಿ. ಪ್ರಜಾಪ್ರತಿನಿಧಿಯಾಗಿ ರಾಜ್ಯವಾಳುವ ನನಗೆ ಪ್ರಜೆಗಳ ಆಸೆ ಆಕಾಂಕ್ಷೆಗಳೇನೆಂಬುದು ತಿಳಿದಿದೆ. ಪ್ರಜಾಹಿತಕ್ಕಾಗಿಯೇ ಮಾಡುವ ಈ ಸಿಂಹಾಸನ ತ್ಯಾಗ—ಪಟ್ಟಾಭಿಷೇಕಗಳಿಂದ ಪ್ರಜಾಕೋಟಿಯ ಹಿತರಕ್ಷಣೆಯಾಗುತ್ತವೆ ಎಂದೇ ನನ್ನ ನಂಬಿಕೆ."

"ತಮ್ಮ ನಂಬಿಕೆಯು ಕೇವಲ ತಮ್ಮ ವೈಯುಕ್ತಿಕ ಅಭಿಪ್ರಾಯವಾಗದೆ ಮಂತ್ರಿ ಪರಿಷತ್ತಿನ ಬೆಂಬಲ ದೊರೆತು ಅದು ಪ್ರಜಾಕೋಟಿಯ

ಅಭಿಪ್ರಾಯವಾಗಬೇಕೆಂದೇ ನನ್ನ ಕೋರಿಕೆ."

ಈ ಮಾತಿನಿಂದ ಕೆರಳಿ ಹೇಳಿದ:

"ಮಂತ್ರಿಪರಿಷತ್ತು ಇರುವುದು ನನ್ನ ಸಲಹೆಗಳನ್ನು, ಶಾಸನಗಳನ್ನು ಕಾರ್ಯಗತ ಮಾಡುವುದಕ್ಕೇ ಹೊರತು ಅದರ ಸಲಹೆಗಳನ್ನು ನಾನು ವಿವೇಚಿಸಿ ಅದರಂತೆ ನಡೆಯುವುದಕ್ಕಲ್ಲ!"

"ಧರ್ಮ ರಾಜ್ಯದಲ್ಲಿ ಪ್ರಜಾಭಿಪ್ರಾಯಕ್ಕೆ ಮನ್ನಣೆ ದೊರೆಯಲೇ ಬೇಕು ಪ್ರಭು. ಪ್ರಜಾಹಿತ ರಕ್ಷಣೆ–ಪ್ರಜಾ ಪ್ರತಿನಿಧಿಗಳಾದ ಮಂತ್ರಿ ಪರಿಷತ್ತಿನ ಕರ್ತವ್ಯ. ಆ ಬಗ್ಗೆ ಮಂತ್ರಿ ಪರಿಷತ್ತು ಮಾಡುವ ಸಲಹೆಗಳನ್ನು ಪ್ರಭುಗಳು ಕಾರ್ಯಗತ ಮಾಡಿದಾಗಲೇ ಪ್ರಜಾಹಿತ ಸಾಧಿಸುವುದು."

"ಸಾಮ್ರಾಜ್ಯದ ಆಡಳಿತದಲ್ಲಿ ಉದ್ಭವಿಸುವ ಪ್ರತಿಯೊಂದು ಸಮಸ್ಯೆಗಳಿಗೂ ಮಂತ್ರಿ ಪರಿಷತ್ತಿನ ನಿರ್ಣಯಕ್ಕೆ ಕಾದು ಕುಳಿತಿರುವ ಯಾವ ಮಹತ್ಕಾರ್ಯವನ್ನೂ ಸಾಧಿಸಲು ಸಾಧ್ಯವಿಲ್ಲ–ಅವರನ್ನು ನೆಚ್ಚಿ ಕುಳಿತಿದ್ದರೆ ನಾನು ಈಗ ಗಳಿಸಿರುವ ಅಖಂಡ ದಿಗ್ವಿಜಯ ಸಾಧ್ಯವೇ ಇರುತ್ತಿರಲಿಲ್ಲ!"

"ಮಂತ್ರಿ ಪರಿಷತ್ತಿನ ಅಭಿಪ್ರಾಯವೆಂದರೆ ಅವರ ಸಾಮೂಹಿಕ ಅಭಿಪ್ರಾಯ. ಇದನ್ನು ಅವರು ಪ್ರಧಾನ ಅಮಾತ್ಯರಾದ ತಿಮ್ಮರಸರ ಮೂಲಕ ಪ್ರಕಟಿಸಿದ್ದಾರೆ. ಪ್ರಭುಗಳ ದಿಗ್ವಿಜಯದಲ್ಲಿ ತಿಮ್ಮರಸರು ಬಲಗೈಯಾಗಿ ನಿಂತದ್ದರಿಂದ, ಪ್ರಭುಗಳು ಪ್ರಜಾಭಿಪ್ರಾಯದ ವಿರುದ್ಧ ಹೂಡುವ ಅವಕಾಶ ಬರಲಿಲ್ಲ. ಇಂದು ಪ್ರಭುಗಳು ಉದಾರವಾಗಿ ವರ್ತಿಸಿ ಈ ಸಿಂಹಾಸನ ಪರಿತ್ಯಾಗ ಮತ್ತು ಪಟ್ಟಾಭಿಷೇಕಗಳ ಬಗ್ಗೆ ಮಂತ್ರಿ ಪರಿಷತ್ತಿನ ಅಭಿಪ್ರಾಯವೇನೆಂದು ತಿಳಿದು ಅದರಂತೆ ನಡೆದರೆ, ತಮಗೂ ಶ್ರೇಯಸ್ಸು, ಸಾಮ್ರಾಜ್ಯಕ್ಕೂ ಶ್ರೇಯಸ್ಸು!"

"ತಿಮ್ಮರಸರ ಅಭಿಪ್ರಾಯವೇನೆಂದು ನನಗೆ ತಿಳಿದಿದೆ!"

ಈ ಮಾತು ಕೇಳಿ ಮಹಾರಾಣಿ ಬೆರಗಾಗಿ ಕತ್ತೆತ್ತಿ ನೋಡಿದಳು.

"ಅವರ ಅಭಿಪ್ರಾಯವೇನೆಂದು ನಿನಗೂ ತಿಳಿದಿದೆ—ಅಲ್ಲವೆ?

—ಎಂದು ಪ್ರಶ್ನಿಸಿ ತಿರುಮಲಾದೇವಿಯನ್ನು ಮಾತಿಲ್ಲದಂತೆ ಮಾಡಿದ ಕೃಷ್ಣದೇವರಾಯ.

ಕೃಷ್ಣದೇವರಾಯನಿಗೆ ತಿಮ್ಮರಸ ಹಾಗೂ ತಿರುಮಲಾದೇವಿಯರ

ನಡುವೆ ನಡೆದ ಸಂಭಾಷಣೆ ಗುಪ್ತಚಾರರ ಮೂಲಕ ವರದಿಯಾಗಿತ್ತು. ಅಂತೆಯೇ ಕೃಷ್ಣದೇವರಾಯನು ಹಾಗೆ ಅಂದುದು.

ಈ ಮಾತಿನಿಂದ ಅಚಲಿತಳಾಗದೆ ತಿರುಮಲಾದೇವಿ ಹೇಳಿದಳು:"ನನ್ನ ಪುತ್ರನಿಗೆ ಸಿಂಹಾಸನ ದೊರೆಯಲೆಂದು ನಾನು ಈ ಮಾತನ್ನು ಹೇಳುತ್ತಿಲ್ಲ ಪ್ರಭು. ಆ ಮಗುವಿನ ಹಣೆಯಲ್ಲೂ ಸಾಮ್ರಾಟ ಪದವಿ ಬರೆದಿದೆಯೋ ಇಲ್ಲವೊ ಕಂಡವರು ಯಾರು? ಸದ್ಯದ ಪರಿಸ್ಥಿಯಲ್ಲಿ ಪ್ರಭುಗಳು ಆಡಳಿತ ವ್ಯವಸ್ಥೆಯಲ್ಲಿ ಒಂದು ಸಣ್ಣ ಮಾರ್ಪಾಡು ಮಾಡಿದರೂ ಇದರಿಂದ ದೇಶದ ಜನತೆಯ ಮೇಲೆ, ಸಾಮಂತಮಾಂಡಲೀಕರ ಮೇಲೆ, ಶತ್ರುಗಳ ಮೇಲೆ ಆಗುವ ಪರಿಣಾಮ ಮಾತ್ರ ಒಳ್ಳೆಯದಲ್ಲವೆಂದು ನನ್ನ ಅನಿಸಿಕೆ. ಪ್ರಭುಗಳು ನೆಮ್ಮದಿಯಿಂದ ಇರುವ ಪ್ರಜೆಗಳ ಮನಸ್ಸಿನಲ್ಲಿ ಸಿಂಹಾಸನ ತ್ಯಾಗ ಮಾಡಿ, ವೃಥಾ ಶಂಕೆ ಕಳವಳಗಳನ್ನು ಏಕೆ ತರಬೇಕು? ಪ್ರಭುಗಳಿಗೆ ಆ ಕುಮಾರನ ಮೇಲೆ ಅತಿಶಯವಾದ ಪ್ರೀತಿ ಇರಬಹುದು. ಅವನಿಗೇ ಪಟ್ಟಗಟ್ಟಲು ಹಾತೊರೆಯುತ್ತಿರಬಹುದು. ಆದರೆ ಅದಕ್ಕೆ ಇದೇ ವೇಳೆಯೇ. ಪ್ರಭುಗಳು ಯುದ್ಧರಂಗದಿಂದ ಗಾಯಗೊಂಡು ಹಿಂತಿರುಗಿ ವಿಶ್ರಾಂತಿಯನ್ನು ಅನುಭವಿಸುತ್ತಲಿರುವ ಸಂಗತಿ ಜಗತ್ತಿಗೇ ತಿಳಿದಿದೆ. ಇಂಥಹ ವಿಷಮ ಸನ್ನಿವೇಶದಲ್ಲಿ, ಪ್ರಭುಗಳು ಕುಮಾರನಿಗಾಗಿ ಸಿಂಹಾಸನವನ್ನು ತ್ಯಜಿಸಿದರೆ ಇದರಿಂದ ಸಾಮ್ರಾಜ್ಯದ ಹಿತಚಿಂತನೆಗೆ ಹಾನಿಯಾಗಬಹುದು. ಆದುದರಿಂದ ನಾನು ಮಾಡುವ ಪ್ರಾರ್ಥನೆ ಇಷ್ಟು: ಪ್ರಭುಗಳು ದೊಡ್ಡ ಮನಸ್ಸು ಮಾಡಿ, ಸದ್ಯದ ಪರಿಸ್ಥಿತಿಯಲ್ಲಿ ರಾಜಕೀಯವಾದ ಯಾವ ಬದಲಾವಣೆಗಳಿಗೂ ತೊಡಗಬಾರದು. ನನ್ನ ಈ ಕೋರಿಕೆಯನ್ನು ಈಡೇರಿಸಿಕೊಟ್ಟರೆ ನಾನು ಕೃತಾರ್ಥಳಾದಂತೆ."

—ಎಂದು ದೈನ್ಯದಿಂದ ಪ್ರಾರ್ಥಿಸಿದಳು ತಿರುಮಲಾದೇವಿ.

ಕೃಷ್ಣದೇವರಾಯನಿಗೆ ತಿರುಮಲಾದೇವಿಯ ಮಾತುಗಳು ವಿಸ್ಮಯ ಉಂಟುಮಾಡಿದುವು.

ತಿರುಮಲಾದೇವಿ ತನ್ನ ಮಗನಿಗೇ ಸಿಂಹಾಸನ ಕೊಡಬೇಕೆಂದು ಹಠ ಹಿಡಿದು, ಬಲಾತ್ಕರಿಸಬಹುದೆಂದು ಕೃಷ್ಣದೇವರಾಯನು ಊಹಿಸಿದ್ದ. ಆದರೆ ತಿರುಮಲಾದೇವಿ, ತನ್ನ ಮಗನ ಹಕ್ಕುದಾರಿಕೆಯನ್ನು ಸ್ಥಾಪಿಸಿಕೊಳ್ಳಲೆತ್ನಿಸಲಿಲ್ಲ!

ತಿರುಮಲಾದೇವಿ, ಚಿನ್ನಾದೇವಿಯನ್ನು ಮೊದಲಿಸಿ, ಅವಳು ಮಾಡಿ
ದುರ್ಬೋಧನೆ, ಒಳಸಂಚು ಎಂದು ಅವಳನ್ನೂ ಹಳಿಯುವಳೆಂದು ತಿ
ದಿದ್ದ. ಆದರೆ ರಾಯನ ಊಹೆ ಸುಳ್ಳಾಯಿತು.

ತಿರುಮಲಾದೇವಿ ಕೃಷ್ಣದೇವರಾಯನು ಊಹಿಸಿದ್ದಂತೆ ಕೀಳಾ
ವರ್ತಿಸದೆ, ಮಹಾರಾಣಿಗೆ ತಕ್ಕ ರೀತಿಯಲ್ಲಿ, ಉದಾತ್ತ ರೀತಿಯಲ್ಲಿ ವರ್ತಿ
ಸಿದಳು. ಅವಳ ಬಗ್ಗೆ ರಾಯನ ಅಭಿಮಾನ ಹೆಚ್ಚಾಯಿತು. ಅವಳ ವ್ಯಕ್ತಿತ್ವ
ಹಿರಿಮೆಯ ಮುಂದೆ ತಾನು ಕಿರಿಯನಾದಂತೆ ಭಾಸವಾಯಿತು.

ರಾಯನು ಯಾವ ಮಾತನ್ನೂ ಕಟ್ಟಕಡೆಯ ತೀರ್ಮಾನವೆಂದ
ಹೇಳದೆ ಅಲ್ಲಿಂದ ಹೊರಟುಹೋದರೂ, ಅವನ ತಲೆಯಲ್ಲಿ ತಿರುಮಲ
ದೇವಿಯು ಹೇಳಿದ್ದ ಸಂಗತಿಗಳು ಮೇಲಿಂದ ಮೇಲೆ ಬಂದು ಹೋಗುತ್ತಿದ್ದುವ

ತಿರುಮಲಾದೇವಿ ಹೇಳಿದ್ದ ಮಾತುಗಳಲ್ಲಿ ಸತ್ಯವಿತ್ತು. ಮಂತ್ರಿ
ಪರಿಷತ್ತಿನ ಅಭಿಪ್ರಾಯ ತೆಗೆದುಕೊಳ್ಳದೆ—ತಿಮ್ಮರಸನ ಅಭಿಪ್ರಾಯವನ್ನು
ಮನ್ನಿಸದೆ, ತಾನೇ ಸ್ವಯಂಭುವಿನಂತೆ, ಸಿಂಹಾಸನದ ಆಗುಹೋಗುಗಳನ್ನು
ನಿರ್ಣಯಿಸಲು ಹೊರಟಿರುವುದು ಜನತೆಯಲ್ಲಿ, ಸಾಮಂತ, ಮಾಂಡಲೀಕರ
—ಶತ್ರುಗಳಲ್ಲಿ ಯಾವ ಬಗೆಯ ಪರಿಣಾಮ ಉಂಟುಮಾಡುವುದು? ಎ
ಪ್ರಶ್ನೆ ರಾಯನ ಮುಂದೆ ಇತ್ತು.

ಇದಕ್ಕೆ ಸರಿಯಾದ ಉತ್ತರ ಎಷ್ಟು ಆಲೋಚಿಸಿದರೂ ಹೊಳೆಯಲಿಲ್ಲ
ಒಮ್ಮೆ ತಿಮ್ಮರಸ, ಹಾಗೂ ತಿರುಮಲಾದೇವಿಯರು ಹೇಳಿದ್ದಂತೆ, ತನ್ನ
ಯೋಚನೆಯಿಂದ ಸಾಮ್ರಾಜ್ಯಕ್ಕೆ ಹಾನಿಯೇ ಉಂಟಾದೀತೆನ್ನುವ ಭಯ!
ಮತ್ತೊಮ್ಮೆ ಅವರದೆಲ್ಲವೂ ಅರ್ಥವಿಲ್ಲದ ಹೆದರಿಕೆ–ಕಲ್ಪನೆಯ ಕೂಸು
ಎಂದು ಧೈರ್ಯ!

ತಾನು ಸಿಂಹಾಸನವನ್ನು ತ್ಯಾಗಮಾಡಿದರೆ ಏನಂತೆ? ರಾಜ್ಯಾಡಳಿ
ದಿಂದ ನಿವೃತ್ತನಾಗುವುದಿಲ್ಲವಲ್ಲ!

ತನ್ನ ಬದಲು ಕುಮಾರನು ಚಕ್ರವರ್ತಿಯಾಗಿ ಸಿಂಹಾಸನದ
ಮಂಡಿಸುತ್ತಾನೆ. ತಾನು ಚಕ್ರವರ್ತಿಯ ಪ್ರತಿನಿಧಿಯಾಗಿ ಇದ್ದುಕೊಂಡು
ಸಾಮ್ರಾಜ್ಯವನ್ನು ಕುಮಾರನ ಹೆಸರಿನಲ್ಲಿ ಆಳುವುದು ಸುಳ್ಳೆ? ತನ್ನ ಸ್ಥಾ
ಮಾನದಲ್ಲಿ ಬದಲಾವಣೆಯಾದರೇನಂತೆ! ಅಧಿಕಾರದಲ್ಲಿ ಯಾವ ಬದಲ

ವಣೆಯೂ ಇಲ್ಲ. ಹೀಗಿರುವಲ್ಲಿ ತಿಮ್ಮರಸ ಮತ್ತು ತಿರುಮಲಾದೇವಿಯರು ಎಬ್ಬಿಸಿರುವ ಹುಯಿಲು, ಕೇವಲ ಅವರ ಭ್ರಾಂತಿಯೇ ಸರಿ. ತಾನು ಯಾರಿಗೂ ಯಾವುದಕ್ಕೂ ಅಂಜಬಾರದು. ಮಾಡಿದ ನಿರ್ಧಾರವನ್ನು, ಹಿಡಿದ ಸಂಕಲ್ಪವನ್ನು ನೆರವೇರಿಸಲೇಬೇಕು." ಎಂದು ರಾಯನು ತನ್ನಲ್ಲೇ ನಿರ್ಧರಿಸಿದ.

ಈ ನಿರ್ಧಾರ ರಾಜಘೋಷಣೆಗಾಗಿ ಹೊರಬೀಳಲು ಬಹಳ ಕಾಲ ಬೇಕಾಗಲಿಲ್ಲ.

# ೧೩

ರಾಜಘೋಷಣೆಯನ್ನು ರಾಜಧಾನಿಯಲ್ಲೆಲ್ಲಾ ಕೊಂಬು, ಕಹಳೆ, ಭೇರಿಗಳ ನಿನಾದ ಧ್ವನಿಯೊಂದಿಗೆ ಬಿತ್ತರಿಸಲಾಯಿತು. ರಾಜಧಾನಿಯ ಜನಸ್ತೋಮ ನಿರಭ್ರ ಆಕಾಶದಲ್ಲಿ ಒಮ್ಮೆಲೇ ಕೇಳಿಸದ ಸಿಡಿಲಿನ ಅಬ್ಬರದಂತೆ, ಅನಿರೀಕ್ಷಿತವಾಗಿ ಹೊರಬಿದ್ದ ಈ ಸುದ್ದಿಯನ್ನು ಕೇಳಿ ದಿಗ್ಭ್ರಾಂತರಾದರು. ಅಂತೆಯೇ ಈ ಸುದ್ದಿ ಸಾಮ್ರಾಜ್ಯಾದ್ಯಂತವೂ ಕಾಳ್ಗಿಚ್ಚಿನಂತೆ ಹರಡಿ, ಪ್ರಜಾಕೋಟಿಯನ್ನು ಕೆಲಕಾಲ ಸ್ಥಂಭೀಭೂತಗೊಳಿಸಿತು. ಸಾಮಂತರು ಮಾಂಡಲೀಕರು ತಮಗೆ ಬಂದ ರಾಜಘೋಷಣೆಯ ರಾಯಸವನ್ನು ಓದಿಕೊಂಡು ರಾಜಧಾನಿಯಲ್ಲಿ ಎಂತಹುದೋ ಭಾರಿ ಉತ್ಕ್ರಾಂತಿ ನಡೆದಿದೆ ಎಂದು ಗಾಬರಿಗೊಂಡು, ತಮ್ಮ ಗಮನವನ್ನು ಅತ್ತ ಕೇಂದ್ರೀಕರಿಸಿದರು— ಮತ್ತೆ ಯಾವ ತುರುತಿನ ಆದೇಶ ಬರುವುದೋ ಎಂದು ಹೆದರಿ. ಆದರೆ ಅವರಿಗೆ ಬಂದುದು ಸೈನ್ಯ ಸಿದ್ಧತೆಯ ಆಣತಿಯಲ್ಲ, ರಾಜಧಾನಿಯಲ್ಲಿ ಶೀಘ್ರದಲ್ಲಿ ನಡೆಯಲಿರುವ ಕುಮಾರರ ಪಟ್ಟಾಭಿಷೇಕಮಹೋತ್ಸವಕ್ಕೆ ಬರಬೇಕೆಂದು ಕೋರುವ ಆಮಂತ್ರಣದ ಓಲೆ.

ಮಂತ್ರಿಪರಿಷತ್ತಿನ ಸದಸ್ಯರಿಗೆ ರಾಜಘೋಷಣೆಯಿಂದ ಆದ ಆಶ್ಚರ್ಯ ಅಷ್ಟಿಷ್ಟಲ್ಲ. ಕೃಷ್ಣದೇವರಾಯನು ಸಿಂಹಾಸನ ತ್ಯಾಗಮಾಡಿ, ಅನಂತರ ತೆರವಾದ ಸಿಂಹಾಸನದಲ್ಲಿ ಚಿನ್ನಾದೇವಿಯ ಕುಮಾರನ ಪಟ್ಟಾಭಿಷೇಕ ಮಾಡುವ ವಿಷಯವನ್ನು ಪೂರ್ವಭಾವಿಯಾಗಿ ತಮ್ಮೊಂದಿಗೆ ಸಮಾಲೋಚನೆ ನಡಸಿದ್ದರೆ, ಈ ವಿಷಯದಲ್ಲಿ ತಮ್ಮ ಅಭಿಪ್ರಾಯವನ್ನು ಕೇಳಿದ್ದಿದ್ದರೆ ಚೆನ್ನಾಗಿತ್ತೆಂದು ಬಗೆದರು. ತಮ್ಮನ್ನು ಸಂಪೂರ್ಣವಾಗಿ ನಿರ್ಲಕ್ಷಿಸಿದುದಕ್ಕಾಗಿ ಅವರಿಗೆ ತುಂಬ ಅಸಮಾಧಾನವಾಯಿತು.

ಅದರಲ್ಲೂ ತಿಮ್ಮರಸನಿಗಂತೂ ರಾಜಘೋಷಣೆಯಿಂದ ತುಂಬ ಬೇಸರವಾಗಿತ್ತು. ತನ್ನೊಂದಿಗೆ ಕೃಷ್ಣದೇವರಾಯನು ಈ ಬಗ್ಗೆ ಸಮಾಲೋಚನೆ ನಡಸಿದುದೇನೋ ದಿಟ. ಆದರೆ ತನ್ನೊಡನೆ ಈ ವಿಷಯ ಪ್ರಸ್ತಾಪ ಮಾಡುವ ಮುನ್ನ ರಾಯನು ಈ ನಿರ್ಧಾರಕ್ಕೆ ಬಂದು ಮುಟ್ಟಿದ್ದ. ತಿಮ್ಮರಸ

ನೊಡನೆ ಆದ ಮಾತು ಕತೆಯ ಉದ್ದೇಶ ರಾಯನ ನಿರ್ಧಾರಕ್ಕೆ ಅಂಗೀಕಾರ ಮುದ್ರೆಯನ್ನು ಪಡೆಯುವುದೇ ಆಗಿತ್ತು. ಆದರೆ ತಿಮ್ಮರಸನು ತ್ರಿಕರಣಪೂರ್ವಕ ವಾಗಿ ಯಾವುದು ಅನ್ಯಾಯ, ಅಧರ್ಮವೆಂದು ಬಗೆದಿದ್ದನೋ ಅದನ್ನು ನ್ಯಾಯ – ಧರ್ಮವೆಂದು ಒಪ್ಪಿಕೊಳ್ಳಲು ಸಿದ್ಧನಾಗಿರಲಿಲ್ಲ. ಅವನು ತನ್ನ ಮನಸ್ಸಿನಲ್ಲಿದ್ದ ಸ್ಪಷ್ಟವಾದ ಅಭಿಪ್ರಾಯವನ್ನು ರಾಯನಿಗೆ ತಿಳಿಸಿದ್ದ— ಇದರಿಂದ ಮುಂದಾಗುವ ಪರಿಣಾಮವನ್ನು ಲೆಕ್ಕಿಸದೆ. ಆದರೆ ತಿಮ್ಮರಸನ ಅಭಿಪ್ರಾಯವನ್ನು ರಾಯನು ಉಪೇಕ್ಷೆ ಮಾಡಿ, ತುಂಬ ಅಪಮಾನಮಾಡಿದ್ದ.

ತಿಮ್ಮರಸನ ಸಲಹೆಯಂತೆ ಈ ಬಗ್ಗೆ ವಿಚಾರಮಾಡಿದ ಮಹಾರಾಣಿ ತಿರುಮಲಾದೇವಿಗೂ ಮಸಿ ಬಳಿದಿದ್ದ.

ಇದರಿಂದ ತಿಮ್ಮರಸನಿಗೆ ಅವಮಾನವಾದಂತೆ ಆಗಿತ್ತು.

ಈ ಅವಮಾನವನ್ನುಹೊತ್ತು ಮಂತ್ರಿ ಪರಿಷತ್ತಿನ ಸದಸ್ಯರಿಗಾಗಲೀ ರಾಜಧಾನಿಯ ಪೌರರಿಗಾಗಲೀ, ಯಾವ ರೀತಿಯಾಗಿ ತಲೆ ತೋರಿಸುವುದು ಎನ್ನುವಷ್ಟು ಹೀನಾಯವಾಗಿತ್ತು.

ಈ ಅಪಮಾನವನ್ನು ಹೇಗೆ ತೊಡೆದುಹಾಕುವುದೆಂದು ತಿಳಿಯದೆ ಒಂದೆರಡು ದಿನ ತುಂಬ ಪರಿತಪಿಸಿದ. ಈ ಚಿಂತೆ ತಿಮ್ಮರಸನನ್ನು ನಿದ್ರಾಹಾರಗಳಿಗೆ ಬಿಡದೆ ಕಾಡಿದ್ದುವು. ಕೃಷ್ಣದೇವರಾಯನನ್ನು ನೋಡಲು ಅರಮನೆಗೆ ನಡೆತಂದ.

ಅರಮನೆಯಲ್ಲಿ ಕೃಷ್ಣದೇವರಾಯನು ಬರಲಿರುವ ಪಟ್ಟಾಭಿಷೇಕ ಮಹೋತ್ಸವದ ಸಿದ್ಧತೆಗಳಲ್ಲಿ ತೊಡಗಿದ್ದ. ಅವನು ಸಾಮ್ರಾಜ್ಯಾದ್ಯಂತ ಬರೆಸಬೇಕಾಗಿದ್ದ ಆಮಂತ್ರಣ ಪತ್ರಗಳನ್ನು ಬರೆಸುವುದರಲ್ಲಿ ನಿರತನಾಗಿದ್ದ. ಅವನಿಗೆ ಕೊಂಡಮರಸಯ್ಯ ಮತ್ತು ವಿಜಯಭದ್ರರು ನೆರವಾಗುತ್ತಿದ್ದರು. ಈ ಸಂಭ್ರಮದಲ್ಲಿ ತಿಮ್ಮರಸನನ್ನು ರಾಯನು ಹೆಚ್ಚಿಗೆ ಹಚ್ಚಿಕೊಂಡಿರಲಿಲ್ಲ. ಬಹುಶಃ ತಿಮ್ಮರಸನು ತನ್ನ ಈ ಯೋಚನೆಯನ್ನು ಉಗ್ರವಾಗಿ ಪ್ರತಿಭಟಿಸಿದುದ್ದರಿಂದ ಇರಬೇಕು! ಈ ಮೊದಲೇ ರಾಯನ ದೃಷ್ಟಿಯಲ್ಲಿ ತಿಮ್ಮರಸನಿಗೆ ಇದ್ದ ಪ್ರಾಶಸ್ತ್ಯ ಕುಗ್ಗಿತ್ತು. ಆಸ್ಥಾನದಲ್ಲಿ ಮಹಾದಂಡನಾಯಕನಾಗಿದ್ದ ಕೊಂಡಮರಸಯ್ಯನ ವರ್ಚಸ್ಸು ಬೆಳೆಯುತ್ತಿತ್ತು.

ತಿಮ್ಮರಸನು ಯಾವುದೋ ತುರುತು ವಿಷಯವನ್ನು ತನ್ನೊಂದಿಗೆ ಸಮಾ

ಲೋಚಿಸಲು ಬಂದಿರುವ ವಾರ್ತೆಯನ್ನು ಕೇಳಿ, ರಾಯನು ಮಾಡುತ್ತಿದ್ದ ಕೆಲಸ ವನ್ನು ಬಿಟ್ಟು, ತಿಮ್ಮರಸನನ್ನು ಬರಮಾಡಿಕೊಂಡು, ಆಪ್ತಾಲೋಚನ ಮಂದಿರಕ್ಕೆ ಕರೆದುಕೊಂಡು ಹೋಗಿ ಸಮಾಚಾರವೇನೆಂದು ವಿಚಾರಿಸಿದ.

"ಪ್ರಭುಗಳು ಇದುವರೆಗೆ ಈ ತಿಮ್ಮರಸನನ್ನುಸ್ವಂತ ತಂದೆಯಂತೆ ನೋಡಿಕೊಂಡಿರಿ. ನನ್ನ ವಿಷಯದಲ್ಲಿ ಅತಿಶಯವಾದ ಪ್ರೀತಿ ಗೌರವಗಳನ್ನು ಇಟ್ಟುಕೊಂಡು, ನನ್ನ ಅಲ್ಪ ಸೇವೆಗೆ ಮಹದವಕಾಶ ಕಲ್ಪಿಸಿ ಕೊಟ್ಟಿರಿ. ನಾನು ಪ್ರಭುಗಳ ಸೇವೆಯನ್ನು ಇದುವರೆಗೂ ನಿರ್ವಂಚನೆಯಿಂದ ಮಾಡಿದ್ದೇನೆ. ಈ ಸೇವೆಯಲ್ಲೇ ಈ ದೇಹ ಮುಪ್ಪಾಗಿದೆ. ಮೈಯಲ್ಲಿ ಕಸುವಿರುವ ವರೆಗೂ ಪ್ರಭುಗಳ ಸೇವೆಯನ್ನು ತ್ರಿಕರ್ಣ ಪೂರ್ವಕವಾಗಿ ಮಾಡಿದ ನಾನು ಇಂದು ಪ್ರಭುಗಳಲ್ಲಿ ಮಾಡಿಕೊಳ್ಳುವ ಒಂದು ಪ್ರಾರ್ಥನೆ ಇದೆ....ನನ್ನನ್ನು ಪ್ರಭುಗಳು ತಮ್ಮ ಸೇವೆಯಿಂದ ನಿವೃತ್ತಿ ಮಾಡಿ, ರಾಜ್ಯಾಡಳಿತದ ಎಲ್ಲ ಹೊರೆಯಿಂದ ಪಾರುಮಾಡಿ, ನನ್ನ ವಿಶ್ರಾಂತಿ ಜೀವನಕ್ಕೆ ಅವಕಾಶ ಕಲ್ಪಿಸಿ ಕೊಡಬೇಕೆಂದು ನನ್ನ ಪ್ರಾರ್ಥನೆ. ಪಾದಸೇವಕನ ಈ ನಮ್ರ ಪ್ರಾರ್ಥನೆಯನ್ನು ಪ್ರಭುಗಳು ಈಡೇರಿಸಿ ಕೊಡಬೇಕು."

ಕೃಷ್ಣದೇವರಾಯನು ಗಮನವಿಟ್ಟು ಆಲಿಸಿದ. ತಿಮ್ಮರಸನ ಮಾತುಗಳೆಲ್ಲ ಮುಗಿದ ಮೇಲೆ ರಾಯನು ನಗುತ್ತ ಹೇಳಿದ.

"ಅಪ್ಪಾಜಿ, ನಿಮ್ಮನ್ನು ಕೆಲಸದಿಂದ ನಿವೃತ್ತಿ ಮಾಡಲು ನನ್ನ ಅಭ್ಯಂತರವಿಲ್ಲ. ಆದರೆ ನೀವು ಸನ್ಯಾಸವನ್ನು ಸ್ವೀಕರಿಸಿ, ಶ್ರೀಶ್ರೀಪಾದರಾಯರ ಶಿಷ್ಯರಾಗಿ, ಜೋಳಿಗೆ ಹಿಡಿದು, ಹರಿನಾಮಸಂಕೀರ್ತನೆ ಮಾಡುತ್ತಾ ಭಿಕ್ಷಾಟನೆಗೆ ಹೊರಟು ಹೋದರೆ?"

"ಯಾಕೆ ಪ್ರಭು? ನನ್ನ ವಿಷಯದಲ್ಲೂ ಇಷ್ಟು ಅನುಮಾನವೇ?" ತಿಮ್ಮರಸನು ನಗುತ್ತಲೇ ಕೇಳಿದ.

"ನಿಮ್ಮ ವಿಷಯದಲ್ಲಿ ನಮಗೆ ಅನುಮಾನವೇ. ನೀವು ಸಾಮ್ರಾಜ್ಯದ ಸಾವಿರ ಕರ್ತವ್ಯದ ಜವಾಬ್ದಾರಿಯನ್ನು ಹೊತ್ತಿರುವಾಗಲೇ ನಿಮ್ಮ ಮನಸ್ಸು ಧಾರ್ಮಿಕ ಜೀವಕ್ಕಾಗಿ ಹಾತೊರೆಯುತ್ತಿತ್ತು. ಈಗ ಎಲ್ಲ ಕೆಲಸದಿಂದ ನಿವೃತ್ತಿಯಾಗಿ ಬಿಟ್ಟರೆ ಸರಿಯೇ ಸರಿ. ನೀವು ದಾಸಕೂಟದ ಪ್ರಮುಖ ಸದಸ್ಯರಾಗಿ ಬಿಡುತ್ತೀರಿ ಎನ್ನುವ ಹೆದರಿಕೆ ನನಗೆ."

ಕೃಷ್ಣದೇವರಾಯನು ಇನ್ನೂ ನಗುತ್ತಲೇ ಇದ್ದನು.

"ದಾಸಕೂಟಕ್ಕೆ ಸೇರಿಕೊಂಡು ಯಾವ ಹಂಗಿಲ್ಲದ ಆ ಹಕ್ಕಿಯಂತಹ ಜೀವನವೆಲ್ಲಿ – ರಾಜಕೀಯದಲ್ಲಿ ತೊಳಲುತ್ತಿರುವ ನನ್ನ ಜೀವನವೆಲ್ಲಿ— ಅದಕ್ಕೂ ಪುಣ್ಯ ಬೇಕು ಪ್ರಭು."

"ತಮ್ಮನ್ನು ಮಹಾಮಂತ್ರಿ ಪದವಿಗೇರಿಸಿ ನಾನು ತುಂಬ ತೊಂದರೆ ಕೊಟ್ಟಿರಬೇಕಲ್ಲವೇ ಅಪ್ಪಾಜಿ?" ರಾಯನು ನಗೆಯಾಡಿದ.

"ತೊಂದರೆಯಲ್ಲ ಪ್ರಭು! ಮಹಾಶೀರ್ವಾದ. ಪ್ರಭುಗಳ ಸೇವೆಯಲ್ಲಿ – ಜನತಾಸೇವೆಯಲ್ಲಿ ಈ ದೇಹ ಸವೆದು ಪಾವನವಾಯಿತು."

"ಹಾಗಾದರೆ ನೀವೇಕೆ ಇಂದು ನಿವೃತ್ತಿಯನ್ನು ಬಯಸುತ್ತಿದ್ದೀರಿ?" ರಾಯನು ಗಂಭೀರವಾಣಿಯಲ್ಲಿ ಪ್ರಶ್ನಿಸಿದನು.

"ದೇಹ ಜೀರ್ಣವಾದ ಮೇಲೆ,ಅಂಗಾಂಗಳು ಸೋತು ಸೊರಗಿದ ಮೇಲೆ ಪ್ರಭುಗಳ ಸೇವೆಯನ್ನು ಮೊದಲಿನಂತೆ ಶ್ರದ್ಧಾಪೂರ್ವಕವಾಗಿ ಮಾಡಲು ಸಾಧ್ಯವೆ ಪ್ರಭು?....ಯಾವ ಕೆಲಸವೇ ಆಗಲಿ, ಮಾಡಿದರೆ ಮನ ಮೆಚ್ಚುವಂತೆ ಮಾಡಬೇಕು, ದೈವ ಮೆಚ್ಚಿ ಅಹುದು ಅನ್ನಬೇಕು....ಅದಿಲ್ಲದೆ ವೃಥಾ ಅಧಿಕಾರ ಮೋಹದಿಂದ, ಹೊರಲಾಗದ ಜವಾಬ್ದಾರಿಯನ್ನು ಹೊತ್ತು ಕುಳಿತರೆ, ಇದರಿಂದ ಇಬ್ಬಗೆಯ ದ್ರೋಹ, ಸ್ವಾಮಿ ದ್ರೋಹ. ಅಂತಲೇ ನನ್ನ ಪ್ರಾರ್ಥನೆಯನ್ನು ಪ್ರಭುಗಳು ಈಡೇರಿಸಿ, ಕೃತಾರ್ಥರನ್ನಾಗಿ ಮಾಡಬೇಕು."

"ನಿಮಗೆ ನಿಜವಾಗಿಯೂ ಕೆಲಸದಿಂದ ನಿವೃತ್ತಿಯಾಗುವುದು ಬೇಕಾಗಿದೆಯೇ ಅಪ್ಪಾಜಿ? ಇದುವರೆಗೂ ವಿನೋದವಾಗಿ ಹೇಳುತ್ತಿದ್ದೆ. ಈಗ ಹೇಳಿ. ನಿಮ್ಮನ್ನು ನಿವೃತ್ತಿಗೊಳಿಸಿ ನಿಮ್ಮ ಸ್ಥಳವನ್ನು ತುಂಬಲು ಬೇರೆ ಅಪ್ಪಾಜಿಯನ್ನು ನಾನು ಎಲ್ಲಿಂದ ತರಲಿ?"

ರಾಯನ ಧ್ವನಿ ನಡುಗುತ್ತಿತ್ತು. ಅದರಲ್ಲಿ ಒಂದು ಬಗೆಯ ನೋವು ಇತ್ತು.

"ನನಗಿಂತಲೂ ಸಾವಿರ ಪಾಲು ಈ ಪದವಿಗೆ ಅರ್ಹರಾದ ವ್ಯಕ್ತಿಗಳು ಸಿಗುತ್ತಾರೆ ಪ್ರಭು! ಪ್ರಭುಗಳು ಈ ಬಗ್ಗೆ ಚಿಂತಿಸಬಾರದು" ಎಂದು ಭರವಸೆ ಕೊಡುವವರಂತೆ ಹೇಳಿದ.

"ರಾಜ್ಯಾಡಳಿತಕ್ಕೆ ದಕ್ಷರಾದ ವ್ಯಕ್ತಿ ದೊರೆಯಬಹುದು ಅಪ್ಪಾಜಿ

ಆದರೆ ಕೃಷ್ಣದೇವರಾಯನಿಗೆ ಒಬ್ಬ ಅಪ್ಪಾಜಿ—ತಂದೆ, ಮಾತ್ರ ಸಿಕ್ಕುವುದು ದುರ್ಲಭ!"

"ಪ್ರಜೆಗಳ ಅಭಿಮಾನಕ್ಕೆ ನಾನು ಚಿರಋಣಿಯಾಗಿದ್ದೇನೆ. ಇದನ್ನು ಯಾವ ರೀತಿಯಾಗಿ ಹಿಂದಿರುಗಿಸಬೇಕೋ ತಿಳಿಯದಾಗಿದೆ. ಪ್ರಭುಗಳು ನನ್ನ ಬಗ್ಗೆ ಹೀಗೆಲ್ಲ ಚಿಂತಿಸುವ ಕಾರಣವೇ ಇಲ್ಲ. ನಾನು ಕೆಲಸದಿಂದ ನಿವೃತ್ತನಾದ ಮಾತ್ರಕ್ಕೇ ನಾನು ಪ್ರಭುಗಳ ಸಂಪರ್ಕದಿಂದ ದೂರ ಹೋಗುವೆ ನೆಂದು ಭಾವಿಸಬಾರದು! ಈ ತಿಮ್ಮರಸನು ಎಲ್ಲೇ ಇರಲಿ, ಹೇಗೇ ಇರಲಿ ಸದಾ ಪ್ರಭುಗಳ ಸಾಮ್ರಾಜ್ಯದ ಚಿಂತೆಯಲ್ಲೇ ಆಯುಷ್ಯವನ್ನು ಕಳೆಯು ತ್ತಾನೆ. ತಿಮ್ಮರಸನ ರಾಜನಿಷ್ಠೆಯ ಬಗ್ಗೆ ಪ್ರಭುಗಳಿಗೆ ಸಂಶಯವೆ?"

"ಸಂಶಯವಿಲ್ಲ ಅಪ್ಪಾಜಿ. ನಿಮ್ಮನ್ನು ಅಧಿಕಾರದಿಂದ ನಿವೃತ್ತಿ ಮಾಡಿ, ಸಾಮ್ರಾಜ್ಯದ ಎಲ್ಲ ಹೊರೆಯನ್ನು ನಾನೊಬ್ಬನೇ ಹೇಗೆ ಹೊರಲಿ ಎನ್ನುವ ಚಿಂತೆ ನನ್ನದು. ನಿಮ್ಮನ್ನು ಬಿಡುಗಡೆಮಾಡುವುದೆ?....ಖಂಡಿತ ನಿಮ್ಮನ್ನು ನಿವೃತ್ತಿಗೊಳಿಸಲು ಖಂಡಿತ ಸಾಧ್ಯವಿಲ್ಲ; ನಿಮ್ಮ ಸೇವೆ ಸಾಮ್ರಾ ಜ್ಯಕ್ಕೆ ಇನ್ನೂ ಅಗತ್ಯವಿದೆ. ಆದುದರಿಂದ ಇನ್ನೂ ಪ್ರಧಾನಾಮಾತ್ಯರಾಗಿ ಇರಲೇಬೇಕು."

"ಪ್ರಭುಗಳಿಗೆ ನನ್ನ ವಿಷಯದಲ್ಲಿ ಅಪಾರ ನಂಬಿಕೆ ಇದೆ. ಆದರೂ...."

"ಏನು ಅನುಮಾನ ಅಪ್ಪಾಜಿ?"

"ಪ್ರಭುಗಳು ಅನ್ಯಥಾ ತಿಳಿಯಬಾರದು....ಸದ್ಯದ ರಾಜಕೀಯ ಪರಿ ಸ್ಥಿತಿಯಲ್ಲಿ ನಾನು ಅಧಿಕಾರದಲ್ಲಿ ಇದ್ದು ಪ್ರಯೋಜನವಿಲ್ಲ ಪ್ರಭು."

"ನಿಮ್ಮ ಮಾತು ನನಗೆ ಅರ್ಥವಾಗುತ್ತಿಲ್ಲ."

"ಸತ್ಯವನ್ನು ನುಡಿಯುವೆನೆಂದು ನನ್ನ ಮೇಲೆ ಆಗ್ರಹ ಮಾಡ ಬಾರದು; ನನ್ನ ಅಂತರಾತ್ಮ ನಿರ್ದೇಶಿಸಿದ ದಾರಿಯಲ್ಲಿ ನಾನು ಹೋಗು ತ್ತಿದ್ದೇನೆ. ನನಗೆ ಪ್ರಭುಗಳು ಮಾಡಿರುವ ನಿರ್ಧಾರ ಏಕೋ ಮನಸ್ಸಿಗೆ ಬಂದಿಲ್ಲ ಪ್ರಭು. ನನ್ನ ಅಂತರಾತ್ಮನು ಒಪ್ಪದ ಕೆಲಸವನ್ನು ನಾನು ಮಾಡಿ, ಏಕೆ ಆತ್ಮವಂಚನೆ ಮಾಡಿಕೊಳ್ಳಬೇಕು? ಪ್ರಭುಗಳು ಹೇಗೂ ಸಿಂಹಾಸನ ತ್ಯಾಗ ಮಾಡುತ್ತೀರಿ. ಅದರೊಂದಿಗೆ ತಿಮ್ಮರಸನ ಅಮಾತ್ಯ ಪದವಿಯ ತ್ಯಾಗವನ್ನೂ ಒಪ್ಪಿಕೊಂಡು, ನನ್ನನ್ನು ಉದ್ಧರಿಸಬೇಕು ಪ್ರಭು!"

ಈ ಮಾತು ಕೇಳಿ ಕೃಷ್ಣದೇವರಾಯನ ಮುಖ ಗಂಭೀರವಾಯಿತು. ಅವನು ಗಂಭೀರವಾಣಿಯಲ್ಲಿ ಹೇಳಿದ.

"ಹಾಗಾದರೆ ಕುಮಾರನು ರಾಜ್ಯಾಭಿಷಿಕ್ತನಾಗುವ ಮೊದಲೇ ನೀವು ನಿವೃತ್ತಿಯನ್ನು ಬಯಸುತ್ತಿದ್ದೀರಿ."

"ಹೌದು ಪ್ರಭು!"

"ಹಾಗಾದರೆ....ಹಾಗಾದರೆ ಕುಮಾರನ ಆಳ್ವಿಕೆಯನ್ನು ನೀವು ವಿರೋಧಿಸುವಿರೆಂದಾಯಿತು."

"ರಾಜಘೋಷಣೆಯನ್ನು ಉಲ್ಲಂಘಿಸಿ ನಡೆಯುವ ಅಧಿಕಾರ ಯಾರಿಗೆ ಇದೆ ಪ್ರಭು! ಎಲ್ಲವೂ ರಾಜಾಜ್ಞೆಯಂತೆ ನಡೆಯಬೇಕು. ವ್ಯಕ್ತಿಗತವಾದ ಅಭಿಪ್ರಾಯಗಳಿಗೆ ಅಧಿಕಾರದಲ್ಲಿ ಇರುವ ತನಕ ಬೆಲೆ ಇಲ್ಲ—ಅಂತಲೇ ನಾನು ಬಿಡುಗಡೆಯನ್ನು ಬಯಸುತ್ತಿರುವುದು ಪ್ರಭು."

"ಹಾಗಾದರೆ ನೀವು ವ್ಯಕ್ತಿಶಃ ಒಂದು ಅಭಿಪ್ರಾಯ; ಅಮಾತ್ಯರಾಗಿ ಒಂದು ಅಭಿಪ್ರಾಯ ಉಳ್ಳವರು ಎಂದಾಯಿತು. ಈಗ ನನ್ನ ಮಾತಿಗೆ ಸ್ಪಷ್ಟವಾಗಿ ಉತ್ತರ ಹೇಳಿ. ಕುಮಾರನು ಪಟ್ಟಕ್ಕೆ ಬಂದು ರಾಜ್ಯಸೂತ್ರಗಳನ್ನು ಕೈಲಿ ಹಿಡಿದರೆ ನೀವು ಪ್ರಧಾನಮಂತ್ರಿಯಾಗಿ ಇರಲು ಸಿದ್ಧರಿಲ್ಲವೆ?"

"ಇಲ್ಲ ಪ್ರಭು."

"ಏಕೆ?"

"ಅಭಿಪ್ರಾಯ ಭೇದವಿರುವ ವ್ಯಕ್ತಿಗೆ ಪ್ರಧಾನಿಯಾಗಿದ್ದುಕೊಂಡು ಸೇವೆ ಸಲ್ಲಿಸಲು ಸಾಧ್ಯವಿಲ್ಲ ಪ್ರಭು. ಇಂತಹ ವ್ಯಕ್ತಿ ಅಧಿಕಾರದಲ್ಲಿ ಇದ್ದರೆ ತ್ರಿಕರಣಪೂರ್ವಕವಾಗಿ ಸೇವೆ ಮಾಡಲು ಸಾಧ್ಯವೇ ಇಲ್ಲ ಪ್ರಭು."

"ಈ ಮಾತನ್ನು ನಿಮ್ಮಿಂದ—ಸಾಮ್ರಾಜ್ಯದ ಸೇವೆಯನ್ನು ಅವಿಚ್ಛಿನ್ನವಾಗಿ ಐವತ್ತು ವರ್ಷಕಾಲ ಮಾಡಿರುವ ನಿಮ್ಮಿಂದ ಕೇಳಬೇಕಾಗಿ ಬಂದುದಕ್ಕೆ ತುಂಬ ವಿಷಾದಪಡುತ್ತೇನೆ. ಆದರೂ ಸದ್ಯದ ರಾಜಕೀಯ ಪರಿಸ್ಥಿತಿಯಲ್ಲಿ ನಿಮ್ಮ ಸೇವೆ ಅಮೂಲ್ಯವಾಗಿರುವುದರಿಂದ ನೀವು ಅಮಾತ್ಯ ಪದವಿಯಲ್ಲಿ ಇರಲೇ ಬೇಕೆಂದು ನನ್ನ ಆಶಯ."

"ಪ್ರಭುಗಳು ಈ ಬಾರಿ ನನ್ನನ್ನು ಕ್ಷಮಿಸಬೇಕು."

"ಸಾಧ್ಯವಿಲ್ಲ ಅಪ್ಪಾಜಿ, ಸಾಧ್ಯವಿಲ್ಲ—ನಿಮ್ಮನ್ನು ನಿವೃತ್ತಗೊಳಿಸುವುದು ಸಾಧ್ಯವಿಲ್ಲ."

“ಪ್ರಭುಗಳು ನನ್ನನ್ನು ಈ ಧರ್ಮ ಸಂಕಟದಿಂದ ಪಾರುಮಾಡ ಬೇಕು. ನನ್ನನ್ನು ಈ ಬಾರಿ ಮನ್ನಿಸಬೇಕು.”

“ಅಪ್ಪಾಜಿ, ನಿಮ್ಮನ್ನು ನಿವೃತ್ತಿ ಮಾಡುವ ಧರ್ಮ ಸಂಕಟಕ್ಕೆ ನನ್ನ ನ್ನೇಕೆ ಸಿಕ್ಕಿಸುತ್ತೀರಿ? ....ಖಂಡಿತ ಸಾಧ್ಯವಿಲ್ಲ ಅಪ್ಪಾಜಿ. ನನ್ನ ಸ್ನೇಹ, ಪ್ರೀತಿವಿಶ್ವಾಸಗಳಿಂದ ತಮ್ಮನ್ನು ಅಮಾತ್ಯ ಪದವಿಯಲ್ಲಿ ಉಳಿಸಿಕೊಳ್ಳಲು ಅಸಮರ್ಥನಾದರೆ—ಅಪ್ಪಾಜಿ....ನಿಮ್ಮನ್ನು ಸಾಮ್ರಾಟನ ಆಜ್ಞೆಯಿಂದ ಉಳಿಸಿಕೊಳ್ಳಬೇಕಾಗುತ್ತದೆ. ಈ ಸಂದರ್ಭ ಒದಗುವಂತೆ ಮಾಡಬೇಡಿ ಅಪ್ಪಾಜಿ!”

ರಾಯನ ಮಾತಿನಲ್ಲಿ ಮೃದುತ್ವವಿದ್ದರೂ, ಅದರ ಹಿಂದೆ ಕಾಠಿಣ್ಯದ ದೃಢನಿರ್ಧಾರವಿತ್ತು.

ಇದನ್ನು ಅರಿತೇ ತಿಮ್ಮರಸನು ಹೇಳಿದ: “ಸಾಮ್ರಾಟರ ಆಜ್ಞೆಯನ್ನು ಧಿಕ್ಕರಿಸುವ ರಾಜದ್ರೋಹಿ ತಿಮ್ಮರಸನಲ್ಲ ಪ್ರಭು.”

“ಈ ಮಾತು ನಿಮ್ಮಿಂದ ಬರುವುದೆಂದು ತಿಳಿದಿತ್ತು. ನೀವು ಇನ್ನು ನಿವೃತ್ತಿಯ ಮಾತನ್ನು ಎತ್ತಬಾರದು!”

“ಪ್ರಭುವಾಜ್ಞೆ!” ತಿಮ್ಮರಸ ಇಷ್ಟವಿಲ್ಲದಿದ್ದರೂ ಈ ಮಾತು ಹೇಳ ಬೇಕಾಯಿತು—ಹೇಳಿದ.

ಅಲ್ಲಿಗೆ ಅವರ ಭೇಟಿಗೆ ಕೊನೆ ಬಂದಿತು. ತಿಮ್ಮರಸನು ಪ್ರಭುಗಳಿಗೆ ವಂದಿಸಿ, ಅಲ್ಲಿಂದ ಹೊರಟುಹೋದ.

ತಿಮ್ಮರಸನು ಅಧಿಕಾರದ ಚಿನ್ನದ ಸಂಕೋಲೆಯಿಂದ ತಪ್ಪಿಸಿಕೊಂಡು ವ್ಯಕ್ತಿ ಸ್ವಾತಂತ್ರ್ಯವನ್ನು ಪಡೆಯುವ ಆಸೆಯಿಂದ ಅರಮನೆಗೆ ಹೋಗಿದ್ದ.

ಈಗ ಬಿಗಿದಿದ್ದ ಸಂಕೋಲೆ ಇನ್ನಿಷ್ಟು ಬಿಗಿಯಾಗಿತ್ತು. ಹಿಂದೆ ಇದ್ದ ವ್ಯಕ್ತಿ ಸ್ವಾತಂತ್ರ್ಯ ಕೂಡ ಈಗ ಇಲ್ಲವಾಗಿತ್ತು.

ಇನ್ನುಮೇಲೆ ಪ್ರಧಾನಾಮಾತ್ಯನಾದ ತಿಮ್ಮರಸನು ಸಾಮ್ರಾಟ ಕೃಷ್ಣ ದೇವರಾಯನ ಆಜ್ಞಾನುವರ್ತಿ!

ವ್ಯಕ್ತಿ ಸ್ವಾತಂತ್ರ್ಯವಿಲ್ಲದ, ವಿಚಾರ ಸ್ವಾತಂತ್ರ್ಯವಿಲ್ಲದ ಹೃದಯ ಶೂನ್ಯವಾದ ಒಂದು ಆಡಳಿತ ಯಂತ್ರ!

ತನಗೆ ಬಂದ ದುಃಸ್ಥಿತಿಯನ್ನು ನೆನೆದು ತಿಮ್ಮರಸನು ಬಹಳ ಖಿನ್ನನಾದ.

ಅತ್ತ ಕೃಷ್ಣದೇವರಾಯನಿಗೂ ತಿಮ್ಮರಸನ ವರ್ತನೆಯಿಂದ ಮನಸ್ಸಿಗೆ ತುಂಬ ವ್ಯಥೆಯಾಗಿತ್ತು. ಇದುವರೆಗೆ ತಿಮ್ಮರಸನೆಂದೂ ಈ ರೀತಿಯಾಗಿ ರಾಯನಲ್ಲಿ ಬೇಡಿಕೆ ಸಲ್ಲಿಸಿರಲಿಲ್ಲ. ಎಷ್ಟೋ ಬಾರಿ ಕೂದಲು ನರೆತು ಹಣ್ಣಾದ ತಿಮ್ಮರಸನ ದೇಹವನ್ನು ನೋಡಿ, ಈ ಇಳಿವಯಸ್ಸಿನಲ್ಲಿ ಅದೆಂತಹ ಯುವಕರನ್ನು ನಾಚಿಸುವ ಉತ್ಸಾಹ? ಅದೆಂತಹ ಚಟುವಟಿಕೆ ಎಂದು ರಾಯನು ಬೆರಗಾಗಿದ್ದ. ಒಮ್ಮೆ ವಿನೋದವಾಗಿ "ನಿಮಗೆ ಈ ಜನ್ಮದಲ್ಲಿ ವಿಶ್ರಾಂತಿ ಇಲ್ಲವೇ ಅಪ್ಪಾಜಿ?" ಎಂದು ಪ್ರಶ್ನಿಸಿದ್ದ. ತಿಮ್ಮರಸನು ಹೇಳಿದ ಉತ್ತರವಿನ್ನೂ ರಾಯನ ಕರ್ಣರಂಧ್ರದಲ್ಲಿ ನಿನದಿಸುತ್ತಿತ್ತು.

"ವಿಶ್ರಾಂತಿ? ತಿಮ್ಮರಸನಿಗೆ ಪ್ರಭುಗಳ ಸೇವೆಯಿಂದ ವಿಶ್ರಾಂತಿಯೆ? ನನಗೆ ಒಂದೇ ದಿನ ವಿಶ್ರಾಂತಿ—ಚಿರವಿಶ್ರಾಂತಿ ಪ್ರಭು! ಅಲ್ಲಿಯ ತನಕ ಗಂಧದ ಕೊರಡಿನಂತೆ ಈ ದೇಹವನ್ನು ಪ್ರಭುಗಳ ಸೇವೆಯಲ್ಲಿ ತೇಯಬೇಕೆಂದಿದ್ದೇನೆ, ಕರ್ಪೂರದಂತೆ ಉರಿದು ಹೋಗಬೇಕೆಂದಿದ್ದೇನೆ. ಅಲ್ಲಿಯ ತನಕ ತಿಮ್ಮರಸನಿಗೆ ವಿಶ್ರಾಂತಿಯಿಲ್ಲ." ಎಂದು ನಕ್ಕು ನುಡಿದಿದ್ದ.

ಈಗ ಅದೇ ತಿಮ್ಮರಸ ಅಮಾತ್ಯ ಪದವಿಯಿಂದ ಬಿಡುಗಡೆಯನ್ನು ಬಯಸುತ್ತಿದ್ದಾನೆ! ಎಂತಹ ಬದಲಾವಣೆ? ಕೇವಲ ಎರಡೇ ವರ್ಷಗಳಲ್ಲಿ! ಇಷ್ಟು ಬದಲಾವಣೆಗೆ ಕಾರಣ?

—ರಾಜಕುಮಾರನ ಪಟ್ಟಾಭಿಷೇಕವನ್ನು ನಾನು ನಿರ್ಧರಿಸಿರುವುದರಿಂದ; ತಿಮ್ಮರಸನ ಅಂತರಾತ್ಮಕ್ಕೆ ನನ್ನ ನಿರ್ಧಾರ ಒಪ್ಪಿಗೆಯಾಗದ ಕಾರಣದಿಂದ. ತಿಮ್ಮರಸನು ಈ ಒಂದು ಅಭಿಪ್ರಾಯ ಭೇದಕ್ಕೆ ಅಮಾತ್ಯಪದವಿಯಿಂದ ನಿವೃತ್ತಿಯನ್ನು ಬಯಸಬೇಕೆ? ಇದಕ್ಕೆ ಬೇರೆ ಏನಾದರೂ ಪ್ರಚೋದನೆ ಇರಬಹುದೆ? ಬಹುಶಃ ಮಂತ್ರಿ ಪರಿಷತ್ತಿನ ಸದಸ್ಯರನ್ನು ನಾನು ನಿರ್ಲಕ್ಷಿಸಿದ್ದುದರಿಂದ ಅವರು ಕುಪಿತರಾಗಿ ತಿಮ್ಮರಸನಿಗೆ ನಿವೃತ್ತಿ ಹೊಂದಲು ಪ್ರೇರೇಪಿಸಿರಬಹುದೆ? ಅಥವಾ ತಿರುಮಲಾದೇವಿ ತನ್ನ ಮಗನಿಗೆ ಸಿಂಹಾಸನ ದೊರೆಯದ ಕಾರಣದಿಂದ ತಿಮ್ಮರಸನನ್ನು ಈ ರೀತಿ ಎತ್ತಿಕಟ್ಟಿರಬಹುದೆ? ತನ್ನ ಸಲಹೆಯನ್ನು ತಾನು ಕಿವಿಯ ಮೇಲೆ ತಂದುಕೊಳ್ಳದ ಕಾರಣಕ್ಕಾಗಿ ರೋಸಿ, ಈ ಬಗೆಯ ಬಲಾತ್ಕಾರದ ನಿವೃತ್ತಿಯನ್ನು ಬಯಸಿರಬಹುದೆ?

ರಾಯನಿಗೆ ಯಾವುದೂ ತಿಳಿಯಲಿಲ್ಲ.

ಇಷ್ಟಾದರೂ ತಿಮ್ಮರಸನು ನಿವೃತ್ತಿಯನ್ನು ಬಯಸುವುದರ ಹಿಂದೆ ಯಾವುದೋ ರಾಜಕೀಯವಾದ ಮಹತ್ವ ಅಡಗಿರುವಂತೆ ಅನಿಸಿತು. ಅದೇನೆಂದು ಆ ಗಳಿಗೆಯಲ್ಲಿ ರಾಯನಿಗೆ ಸ್ಪಷ್ಟಪಡಲಿಲ್ಲ.

ಈಗ ರಾಯನ ಚಿಂತೆಯ ಕಾರಣ ತಿಮ್ಮರಸನು ರಾಜ್ಯಾಡಳಿತದಿಂದ ನಿವೃತ್ತಿಯಾಗುವ ವಿಷಯವಲ್ಲ. ಅದು ಹೆಚ್ಚಿನ ದುಃಖಕ್ಕೆ ಕಾರಣವಾಗಲಿಲ್ಲ. ಇದರೊಂದಿಗೆ ಸುಮಾರು ಇಪ್ಪತ್ತು ಇಪ್ಪತ್ತೈದು ವರ್ಷಗಳಿಂದ ತಂದೆಯಂತೆ ನೋಡಿಕೊಂಡು ಬಂದಿದ್ದ ಅಪ್ಪಾಜಿ ಒಮ್ಮೆಲೇ ಕೃಷ್ಣದೇವರಾಯನ ಬಾಳಿನ ದಿಗಂತದಿಂದ ನಿರ್ಗಮನವಾಗಲು ಬಯಸಿದ್ದ. ಅನೇಕ ಕಷ್ಟಗಳ ನಡುವೆ, ಸುಖದುಃಖಗಳ ನಡುವೆ ದಾರಿಯ ಬೆಳಕಾಗಿ, ಗೆಳೆಯನಾಗಿ, ಮಂತ್ರಿಯಾಗಿ, ತಂದೆಯಾಗಿ, ಮುನ್ನಡಿ ಇಡಿಸಿದ ಪ್ರಿಯವಾದ ವ್ಯಕ್ತಿ ಈಗ ರಾಯನ ಜೀವನ ಚಿತ್ರದಿಂದ ಮರೆಯಾಗಲು ಬಯಸಿದ್ದ! ರಾಜಕೀಯದ ಚಿಂತೆಯಲ್ಲಿ ಅವರ ಪರಸ್ಪರ ಸ್ನೇಹ ವಿಶ್ವಾಸಗಳು ಒಮ್ಮೆಲೇ ಸುಟ್ಟು ಬೂದಿಯಾಗುವ ಪ್ರಸಂಗ ಬಂದುದಕ್ಕಾಗಿ ರಾಯನಿಗೆ ತುಂಬ ವಿಷಾದವಾಯಿತು.

ಕೇವಲ ವಿಶ್ವಾಸದಿಂದ ತಿಮ್ಮರಸನನ್ನು ಅಧಿಕಾರದಲ್ಲಿ ಉಳಿಸಿಕೊಳ್ಳಲು ರಾಯನು ಅಸಮರ್ಥನಾಗಿದ್ದ.

ಈಗ ಸಾಮ್ರಾಟ್ ಕೃಷ್ಣದೇವರಾಯನಾಗಿ ರಾಜಾಜ್ಞೆ ಹೊರಡಿಸಿ, ತಿಮ್ಮರಸನನ್ನು ಅಮಾತ್ಯ ಪದವಿಯಲ್ಲಿ ನಿಲ್ಲಿಸಿಕೊಂಡಿದ್ದ. ತಮ್ಮಿಬ್ಬರ ಮಧುರ ಬಾಂಧವ್ಯದ ಹೊನ್ನ ಮಂದಿರದಲ್ಲಿ ಎಂತಹ ಬಿರುಕು ಬಿಟ್ಟಿತು? —ಎಂದು ಮಮ್ಮಲ ಮರುಗಿದ.

ಈಗ ಆದುದಕ್ಕಾಗಿ ಚಿಂತಿಸಿ ಫಲವಿಲ್ಲ. ರಾಯನ ನಿರ್ಧಾರ ರಾಜಘೋಷಣೆಯಾಗಿ ಪ್ರಕಟವಾಗಿತ್ತು. ಅದನ್ನು ಕಾರ್ಯಗತ ಮಾಡಲು ಇನ್ನು ಕೆಲವೇ ದಿನಗಳು ಉಳಿದಿದ್ದುವು. ಇದಕ್ಕೆ ಯಾರೇ ವಿರೋಧಿಸಲಿ, ಯಾರೇ ಎದುರಿಸಲಿ, ನಿಶ್ಚಯಿಸಿದ್ದ ಕಾರ್ಯವು ನಡೆದೇತೀರಬೇಕು........ ಎಂದುಕೊಂಡು, ತನ್ನ ಮನದ ಕೊರಗನ್ನು ಮರೆಯಲು, ಈ ಮಹೋತ್ಸವದ ನಿಮಿತ್ತನಾಗಿ ನಡೆಯಬೇಕಾಗಿದ್ದ ಏರ್ಪಾಡುಗಳಲ್ಲಿ ಮನಸ್ಸನ್ನು ಕೊಟ್ಟ.

ಕುಮಾರನ ಪಟ್ಟಾಭಿಷೇಕಕ್ಕೆ ಸಂಬಂಧಿಸಿದಂತೆ ಸಾವಿರ ಕೆಲಸಗಳು ಕಾದಿದ್ದುವು. ಅರಮನೆಯ ಜೋಯಿಸರ ಮೂಲಕ, ಕುಮಾರನ ಪಟ್ಟಾಭಿ

ಷೇಕಕ್ಕೆ ಮುಹೂರ್ತ ಲಗ್ನಗಳನ್ನು ಕುದುರಿಸಿ, ಅಂದಿಗೆ ರಾಜಧಾನಿಗೆ ಆಗಮಿಸಲು, ಸಂಸ್ಥಾನದ್ಯಾಂತ ಪ್ರಮುಖ ವ್ಯಕ್ತಿಗಳಿಗೆ ಆಮಂತ್ರಣದ ಕರೆಯೋಲೆ ಹೋಗಿತ್ತು.

ಅರಮನೆಯ ಶೃಂಗಾರ, ಬಂದವರು ಇಳಿದುಕೊಳ್ಳಲು ಮಾಡಬೇಕಾದ್ದ ವಸತಿ ಸೌಕರ್ಯ, ಪಟ್ಟಾಭಿಷೇಕಕ್ಕೆ ಸಂಬಂಧಿಸಿದ ಸಾವಿರ ಸಣ್ಣ ಪುಟ್ಟ ಕೆಲಸಗಳೆಲ್ಲದಕ್ಕೂ ರಾಯನೇ ಗಮನಕೊಟ್ಟು ಪ್ರತಿಯೊಂದು ಕೆಲಸಗಳನ್ನೂ ಪರಿಶೀಲಿಸುತ್ತಿದ್ದನು. ಇಲ್ಲಿಯ ತನಕ ತಿಮ್ಮರಸನು ಅಮಾತ್ಯ ಪದವಿಯಿಂದ ಬಿಡುಗಡೆಯನ್ನು ಬಯಸುತ್ತಿದ್ದವನು ಈ ಎಲ್ಲ ವೈಭವದಲ್ಲಿ ತನ್ನ ಪಾತ್ರವಿಲ್ಲ ವೆನ್ನುವಂತೆ ನಿರ್ಲಿಪ್ತನಾಗಿದ್ದ. ಆದರೆ ತನ್ನ ಅಮಾತ್ಯ ಪದವಿ—ತನಗಿನ್ನು ಮುಳ್ಳಿನ ಕಿರೀಟವಾಗಿದೆ ಎಂಬುದನ್ನು ತಿಳಿದಾಗ, ಆ ಪದವಿಯ ಗೌರವವನ್ನು ಕಾಯಲು, ಮನಸ್ಸಿಲ್ಲದಿದ್ದರೂ, ಮಾಡುವ ಕೆಲಸದಲ್ಲಿ ಹಿತವಿಲ್ಲದಿದ್ದರೂ—ಮಾಡಲೇಬೇಕಾದ ಕೆಲಸಗಳನ್ನು ರಾಯನ ಘನತೆಗೆ ತಕ್ಕಂತೆ ಮಾಡಲು ತೊಡಗಿದ್ದ. ತಿಮ್ಮರಸನ ಸಹಕಾರ ದೊರೆತುದರಿಂದ ರಾಯನಿಗೆ ಒಂದಿಷ್ಟು ತೃಪ್ತಿಯುಂಟಾಗಿದ್ದರೂ, ಅದು ಅಮಾತ್ಯನಾಗಿ ತಿಮ್ಮರಸ ಮಾಡುತ್ತಿರುವ ಕೆಲಸವೆಂದು ತಿಳಿಯಲು ರಾಯನಿಗೆ ಬಹಳ ಕಾಲ ಬೇಕಾಗಲಿಲ್ಲ. ಈ ವಿಚಾರದಿಂದ ತಲೆ ಕೆಡಿಸಿಕೊಳ್ಳಲು ವೇಳೆಯಿಲ್ಲದಷ್ಟು ರಾಯನು ಉತ್ಸವದ ಗಡಿಬಿಡಿಯಲ್ಲಿ ಇದ್ದ.

ಎಷ್ಟು ಮಾಡಿದರೂ ಇನ್ನೂ ಮುಗಿಯದ ಕೆಲಸಗಳು ಇದ್ದೇ ಇತ್ತು. ಸಾವಿರಾರು ಮಂದಿ ಸೇವಕರು, ನೌಕರರು—ಗಂಡು ಹೆಣ್ಣುಗಳೆನ್ನದೆ, ಹಗಲು ರಾತ್ರಿ ದುಡಿದರೂ ಇನ್ನೂ ಮಾಡಬೇಕಾದ ಕೆಲಸಗಳು ಉಳಿದೇ ಇತ್ತು. ಸಾಮ್ರಾಟರ ಸಿಂಹಾಸನ ತ್ಯಾಗ, ಕುಮಾರರ ಪಟ್ಟಾಭಿಷೇಕವೆಂದರೆ ಸುಮ್ಮನಾಯಿತೆ? ಹಿಂದೆಂದೂ ಈ ಬಗೆಯ ಘಟನೆಗಳು ಹೀಗೆ ಒಟ್ಟಿಗೆ ಮೇಳೈಸಿರಲಿಲ್ಲ. ಪಟ್ಟಾಭಿಷೇಕ ಮಹೋತ್ಸವವನ್ನು ಕಂಡೇ ರಾಜಧಾನಿಯ ಜನತೆ ಸುಮಾರು ಇಪ್ಪತ್ತು ವರ್ಷಗಳ ಮೇಲೆ ಆಗಿತ್ತು. ಈಗ ಅವರಿಗೆ ನಲಿಯಲು, ಸಂತೋಷದಿಂದ ಹಿಗ್ಗಿ ಕುಣಿಯಲು ಒಂದು ಅಪೂರ್ವವಾದ ಸುಸಂಧಿ. ಯುದ್ಧಭೀತಿಯನ್ನು ಮರೆತು, ನೆಮ್ಮದಿಯ ಬದುಕನ್ನು ನೆನೆದು ಕೆಲಕಾಲವಾದರೂ ಸುಖವಾಗಿ, ಮನರಂಜನೆಗಳಲ್ಲಿ ಮೈಮರೆಯಲು ಒಂದು ಅಪೂರ್ವ

ಸುಯೋಗ. ಇದನ್ನು ಉಚಿತ ರೀತಿಯಲ್ಲಿ ಜನತೆ ಉಪಯೋಗಿಸಿಕೊಳ್ಳದೆ ಬಿಟ್ಟೀತೆ? ರಾಜಧಾನಿಯಲ್ಲಿ ಪ್ರತಿಯೊಬ್ಬರ ಮನೆಯಲ್ಲಿ ಪಟ್ಟಾಭಿಷೇಕದ ಸಂಭ್ರಮವೇ ಆಯಿತು.

ಬೀದಿ ಬೀದಿಗಳನ್ನು ಶೃಂಗರಿಸಿ, ತಳಿರು ತೋರಣ, ಹಸಿರುವಾಣಿ ಚಪ್ಪರಗಳಿಂದ ಸಿಂಗರಿಸಲಾಯಿತು. ಹೊರಗಿನಿಂದ ಬರುವ ಸಾಮಂತರು, ರಾಜಪ್ರತಿನಿಧಿಗಳಾದ ಮಾಂಡಲಿಕರು, ಹಿರಿಯ ಕಿರಿಯ ಪಾಳೇಗಾರರು, ಹೆಸರಾಂತ ಕಲಾವಿದರು, ಶಿಲ್ಪಿಗಳು, ಸಂಗೀತಗಾರರು, ನರ್ತಕಿಯರು, ಸುಪ್ರಸಿದ್ಧ ಧರ್ಮಪೀಠ ಮಠಗಳ ಶ್ರೀಪಾದಂಗಳವರು, ಪಟ್ಟಣ ಶೆಟ್ಟರು, ಮೊದಲಾದವರೆಲ್ಲರ ಯೋಗ್ಯತೆಗೆ ತಕ್ಕಂತೆ ಇಳಿದುಕೊಳ್ಳಲು ಬಿಡಾರಗಳೂ, ವಸತಿಗೃಹಗಳೂ ತ್ವರೆಯಿಂದ ನಿರ್ಮಾಣವಾದುವು. ಅವುಗಳಲ್ಲಿನ ಸೌಕರ್ಯ, ಕಲಾವಿದರ ಜಾಣ್ಮೆ ಎಂತಹವರನ್ನಾದರೂ ಬೆರಗುಗೊಳಿಸುವಂತಹುದು. ಇಂದ್ರಲೋಕದಿಂದ ಅಮರಾವತಿಯನ್ನೇ ಧರೆಗೆ ಇಳಿಸುವ ಸಾಹಸ ನಡೆದಿತ್ತು. ಇದರಲ್ಲಿ ಶಿಲ್ಪಿಗಳು ಬಹುಮಟ್ಟಿಗೆ ಕೃತಕೃತ್ಯರಾಗಿದ್ದರು.

ದೇಶದ ಎಲ್ಲ ದೇವಾಲಯಗಳಲ್ಲೂ ಪಟ್ಟಾಭಿಷೇಕದ ನಿಮಿತ್ತವಾಗಿ ವಿಶೇಷವಾದ ಪೂಜೆಪುರಸ್ಕಾರಗಳು ನಡೆಯಲು ಏರ್ಪಟ್ಟುವು. ಎಲ್ಲೆಡೆಯಲ್ಲೂ ದೇವಾಲಯಗಳಿಗೆ ದಾನವಾಗಿ ದತ್ತಿಗಳು ಕೊಡಲ್ಪಟ್ಟುವು. ಬಡಬಗ್ಗರಿಗೆ ಊಟ, ವಸ್ತ್ರಗಳ ವ್ಯವಸ್ಥೆ ಮಾಡಿದರು. ಬ್ರಾಹ್ಮಣರಿಗೆ, ವಿದ್ವಜ್ಜನರಿಗೆ—ಕಲಾವಿದರಿಗೆ ಅವರವರ ಯೋಗತೆಗೆ ತಕ್ಕಂತೆ ಸಂಭಾವನೆ—ಮರ್ಯಾದೆಗಳನ್ನು ಮಾಡಿ ಗೌರವಿಸಲು ನಿರ್ದೇಶಗಳು ಹೋದುವು. ಸಾಮಾನ್ಯ ಜನತೆಯೂ ಈ ಉತ್ಸವದಲ್ಲಿ ಪಾಲುಗೊಳ್ಳಲು ತಕ್ಕ ಮನರಂಜನೆಗಳನ್ನು ಒದಗಿಸಲ್ಪಟ್ಟುವು. ಪ್ರತಿ ಗ್ರಾಮ ನಗರ ಖೇಡಗಳಲ್ಲಿ ಜನತೆ ಕೆಲವು ಕಾಲವಾದರೂ ತಮ್ಮ ಕೋಟಲೆಗಳನ್ನು ಮರೆತು, ಸಂತೋಷದಿಂದ ಹಾಡಿ ಮೆರೆಯಲು ಏನೆಲ್ಲ ಬೇಕೋ ಅಷ್ಟು ವ್ಯವಸ್ಥೆ ನಡೆಯಿತು. ಇದುವರೆಗೆ ಯುದ್ಧದಲ್ಲಿ ಗೆದ್ದು ತಂದಿದ್ದ ಎಲ್ಲ ಸಂಪತ್ತು, ಹಿಂದಿನಿಂದ ಸಂಗ್ರಹಿಸಿಕೊಂಡು ಬಂದಿದ್ದ ಭಂಡಾರದ ಐಶ್ವರ್ಯವೆಲ್ಲ ಕೋಡಿ ಹರಿದು, ಸಾಮ್ರಾಜ್ಯದ ಮನೆ ಮನೆಯನ್ನು ಮುಟ್ಟಿತು.

ವೇಳೆಗೆ ಸರಿಯಾಗಿ ಆಹ್ವಾನಿತರೆಲ್ಲರೂ, ತಮ್ಮ ಕಾಣಿಕೆ, ಉಡುಗೊರೆ

ಗಳೊಂದಿಗೆ ಬಂದು, ಅವರಿಗೆಂದೇ ಗೊತ್ತಾಗಿದ್ದ ನಿವಾಸಗಳಲ್ಲಿ ತಂಗಿದರು.

ಪಟ್ಟಾಭಿಷೇಕಕ್ಕೆ ಇನ್ನೆಲ್ಲ ಒಂದೆರಡು ದಿನಗಳು ಉಳಿದಿವೆ.

ಪಟ್ಟಾಭಿಷೇಕ ನಡೆಯ ಬೇಕಾಗಿದ್ದ ಮಂಟಪವನ್ನು ಚಕ್ರೇಶ್ವರನ ವೈಭವಕ್ಕೆ ತಕ್ಕಂತೆ ಅಲಂಕರಿಸಲಾಗಿತ್ತು. ದೇಶ ದೇಶಗಳಿಂದ ಕರೆಸಿದ ಅನೇಕ ಶಿಲ್ಪಿಗಳು, ಕುಶಲ ಕೆಲಸಗಾರರು, ಚಿತ್ರಗಾರರು ತಮ್ಮ ಕಲೆಯನ್ನೆಲ್ಲ ಅಲ್ಲಿ ಎರಕ ಹೊಯ್ದರು. ಗಂಧ, ದಂತ, ಚಿನ್ನಗಳಿಂದ ನಿರ್ಮಿಸಿದ್ದ ಸ್ಥಂಭ ರಾಜಿಗಳು ದೀಪದ ಬೆಳಕಿನಲ್ಲಿ ಹೊಳೆಯುತ್ತಿದ್ದುವು. ಮುತ್ತು, ರತ್ನ, ವಜ್ರ, ವೈಡೂರ್ಯ,ಗೋಮೇಧಿಕ, ಪುಷ್ಯರಾಗ, ನೀಲಮಣಿಗಳಿಂದ ಅಲಂಕರಿಸಲ್ಪಟ್ಟ ನವರಂಗ ಅಪೂರ್ವ ಶೋಭೆಯಿಂದ ಮೆರೆದಿತ್ತು. ಪ್ರತಿಯೊಂದು ಕಂಬವನ್ನೂ, ಪ್ರತಿಯೊಂದು ಗೋಡೆಯನ್ನೂ, ಕಡೆಗೆ ಮಂಟಪದ ಭಿತ್ತಿಯನ್ನೂ ಚಿತ್ರಕಾರರು, ಶಿಲ್ಪಿಗಳು ತಮ್ಮ ಕಲಾಕೃತಿಗಳಿಂದ ಮುಚ್ಚಿಬಿಟ್ಟಿದ್ದರು.

ಅವುಗಳ ಒಂದೊಂದರ ಸೊಬಗು, ಸೌಂದರ್ಯಗಳನ್ನು ಸವಿಯಲು ಸಾವಿರ ನಾಲಗೆ ಬೇಕೆನ್ನುವಂತೆ ಆಗಿತ್ತು.

ಎಲ್ಲೆಡೆಯಲ್ಲೂ ವೈಭವ.

ಎಲ್ಲೆಡೆಯಲ್ಲೂ ಸಂತೋಷ ಸಂಭ್ರಮ.

ತಿರುಮಲಾದೇವಿಯ ಅಂತಃಪುರದಲ್ಲಿ ಮಾತ್ರ ದುಃಖದ ಛಾಯೆ; ನಿರಾಶೆಯ ಕಾರ್ಮೋಡ ಕವಿದಿತ್ತು.

ಅರಮನೆಯ ಜನವೆಲ್ಲ ಕುಮಾರನ ಪಟ್ಟಾಭಿಷೇಕದ ಮಹೋತ್ಸವದ ಸಂಭ್ರಮದಲ್ಲಿ ತೇಲಾಡುತ್ತಿರುವಾಗ ತಿಪ್ಪಾಜಿ ಮತ್ತು ತಿರುಮಲಾದೇವಿಯರು ಮಾತ್ರ ನಿರುತ್ಸಾಹದ ಸುಳಿಯಲ್ಲಿ ಸಿಕ್ಕಿಬಿಟ್ಟಿದ್ದರು.

ಅವರಿಬ್ಬರಿಗೆ ಈ ಉತ್ಸವದಲ್ಲಿ ಯಾವ ಆಸಕ್ತಿಯೂ ಇರಲಿಲ್ಲ. ತಾನು ಪಟ್ಟಮಹಿಷಿಯಾಗಿದ್ದೂ, ತನ್ನ ಹೊಟ್ಟೆಯಲ್ಲಿ ಗಂಡು ಸಂತಾನವಾಗಿದ್ದೂ ನ್ಯಾಯವಾದ ಸಿಂಹಾಸನದ ಅಧಿಕಾರಿಯನ್ನು ನಿರ್ಲಕ್ಷಿಸಿ, ಮೋಹಾಂಧನಾಗಿ, ಸವತಿಯ ಪುತ್ರನಿಗೆ ಪಟ್ಟಾಭಿಷೇಕ ನಡೆಸಿರುವಾಗ ಅವಳಿಗೆ, ಯಾವ ಆಸಕ್ತಿ ಇದ್ದೀತು ?

ಈ ಪಟ್ಟಾಭಿಷೇಕದಿಂದ ತನ್ನ ಪಟ್ಟಮಹಿಷಿಯ ಪದವಿಗೆ, ಮಹಾರಾಣಿಯ ಪದವಿಗೆ ಏನು ಗೌರವ ಉಳಿಯಿತು ? ತಾನು ಇನ್ನುಮೇಲೆ ಇತರ

ರಾಣಿಯರಂತೆಯೇ, ಸಾಮಾನ್ಯರಾಣಿ. ತನ್ನ ಮಗ ಸಾಮಾನ್ಯ ಅರಸು ಕುಮಾರ....

ತಿರುಮಲಾದೇವಿಗೆ ತನ್ನ ಘನತೆಗೆ ಬಿದ್ದ ಪೆಟ್ಟಿಗಿಂತಲೂ ತನ್ನ ಮಗನ ಯೋಗ್ಯತೆಗೆ ಉಂಟಾದ ಅಪಚಾರದಿಂದ ಹೆಚ್ಚು ಮನಸ್ಸುನೊಂದಿತು.

ಪಟ್ಟಮಹಿಷಿಯಾದ—ತನ್ನ ಹೊಟ್ಟೆಯಲ್ಲಿ ಹುಟ್ಟಿಯೂ, ಈ ಮಗನಿಗೆ ಸಿಂಹಾಸನದ ಅಧಿಕಾರವಿಲ್ಲ! ನಾಳೆ ಚಿನ್ನಾದೇವಿಯ ಪುತ್ರನು ಸಾಮ್ರಾಟನಾದರೆ, ತನ್ನ ಮಗನು ಅವನ ಅಡಿಯಾಳು. ಅವನ ದ್ವೇಷಕ್ಕೆ, ತಿರಸ್ಕಾರಕ್ಕೆ ಬಲಿಯಾಗಿ ಅವನ ಕೃಪಾಪೋಷಣೆಯಿಂದ ಮಾತ್ರ ಬದುಕಿರುವ ಕ್ಷುದ್ರ ಜಂತು! ಇದನ್ನು ನೆನೆಯಲು ಹೆದರಿದಳು ತಿರುಮಲಾದೇವಿ. ಅವಳಿಗೆ ಕೂಡಲೇ ತನ್ನ ಮಗುವಿನ ನೆನಪಾಯಿತು. ತೊಟ್ಟಿಲಲ್ಲಿ ಹಾಯಾಗಿ ನಿದ್ರಿಸುತ್ತಿದ್ದ ಆ ಕಂದನನ್ನು ಕಂಡು ಮನಸ್ಸಿಗೆ ನೆಮ್ಮದಿಯಾದರೂ, ಹೃದಯದಲ್ಲಿದ್ದ ಆಂದೋಳನ ಮಗನ ದೌರ್ಭಾಗ್ಯವನ್ನು ನೆನೆಯುವಂತೆ ಮಾಡಿತು.

ಅವಳಿಗೆ ಹಿಂದೊಮ್ಮೆ ತಿಪ್ಪಾಜಿ ಹೇಳಿದ್ದ ಮಾತುಗಳು ತಟಕ್ಕನೆ ನೆನಪಾದುವು. 'ನಾಳಿನ ಚಕ್ರೇಶ್ವರ' 'ಕರ್ನಾಟಕದ ರತ್ನಸಿಂಹಾಸನದ ಮಾರಮಣ' 'ಮಹಾರಾಜಾಧಿರಾಜ ಪರಮೇಶ್ವರ! ಎಂಬೆಲ್ಲ ಮಾತುಗಳು ತಿರುಮಲಾದೇವಿಯನ್ನು ಮೂದಲಿಸುವಂತೆ ತೋರಿತು. ಅವಳಿಗೆ ಈ ಮಾತುಗಳು ಅಂಬಿನ ಅಲಗಿನಂತೆ ಅವಳ ಹೃದಯವನ್ನು ಘಾತಿಸಿದುವು.

"ಅಯ್ಯೋ ಕಂದ, ನಿನಗೆ ಎಂತಹ ದುರ್ಗತಿ ಬಂದಿತು" ಎಂದು ಮಲಗಿದ್ದ ಮಗುವನ್ನು ಎತ್ತಿಕೊಂಡು, ಎದೆಗಪ್ಪಿಕೊಂಡು, ಉದ್ಗರಿಸದಳು.

ಇದನ್ನು ನೋಡಿ ಅಲ್ಲೇ ಇದ್ದ ತಿಪ್ಪಾಜಿಗೆ ದುಃಖದ ಕಟ್ಟೆಒಡೆಯಿತು. ಅವಳು ಗದ್ಗದಿಸುವ ಧ್ವನಿಯಲ್ಲಿ ತಿರುಮಲಾದೇವಿಯನ್ನು ಸಂತೈಸಲೆತ್ನಿಸಿದಳು.

ಹೊರಗಡೆ ಹೆಂಗೆಳೆಯರ ಮೋಹಕನಗು. ನೃತ್ಯಾಭ್ಯಾಸವನ್ನು ಮಾಡುತ್ತಿದ್ದರೋ ಏನೋ! ಕಾಲ್ಗೆಜ್ಜೆಯ ಜಣಜಣ ಧ್ವನಿ, ವೀಣೆಯ ಮಂಜುಳರವ, ಕೊಳಲಿನ ಇಂಪಾದ ಗಾನ, ಮೃದಂಗದ ಗಂಭೀರ ಸ್ವನ ಅಲೆಅಲೆಯಾಗಿ ಕೇಳಿಸಿತು. ಇದನ್ನು ಕೇಳಿ ಕಿಡಿಕಿಡಿಯಾದಳು ತಿಪ್ಪಾಜಿ. ಹೋಗಿ, ಬಾಗಿಲನ್ನು ಮುಚ್ಚಿ ಬರುತ್ತಾ, ತನ್ನಲ್ಲೇ ಒದರಿಕೊಂಡಳು. ಇವು ತಿರುಮಲಾದೇವಿಗೂ ಕೇಳಿಸುವಷ್ಟು ಗಟ್ಟಿಯಾಗಿತ್ತು.

" ಆಗಲಿ, ಆಗಲಿ, ಎಷ್ಟು ವೈಭವ ಬೇಕೋ ಅಷ್ಟೂ ವೈಭವದಿಂದ ಪಟ್ಟಾಭಿಷೇಕ ಮಾಡಿಸಿಕೊಳ್ಳಲಿ. ಚಿನ್ನದ ಮಳೆಯನ್ನೇ ಕರೆಯಲಿ. ಸಂತೋಷದ ಕಡಲನ್ನೇ ಉಕ್ಕಿಸಲಿ ಇವುಗಳಾವುದರಿಂದಲೂ ನಡೆದಿರುವ ಅನ್ಯಾಯವನ್ನಾಗಲಿ, ಅಧರ್ಮವನ್ನಾಗಲೀ ಮುಚ್ಚಲಾರರು. ಮಹಾಪ್ರಭುಗಳು ಮಾಡಿರುವ ಈ ಅನ್ಯಾಯಕ್ಕೆ, ಈ ದ್ರೋಹಕ್ಕೆ ಇಂದಲ್ಲ, ನಾಳೆ ಅವರು ಪಶ್ಚಾತ್ತಾಪಪಡಲೇಬೇಕು, ಪಡುತ್ತಾರೆ. ಆ ದಿನವನ್ನು ನಾನು ಕಾಣದೆ ಹೋಗುವೆನೇ.... " ತಿಪ್ಪಾಜಿ ರೋಸಿಹೋಗಿದ್ದಳು.

ತನ್ನ ಹೊಟ್ಟೆಯಲ್ಲಿಯೂ ಅತೃಪ್ತಿಯ ದಾವಾನಲವೆದ್ದಿದ್ದರೂ, ಅಸಹನೆಯ ಅಗ್ನಿಪರ್ವತವು ಹೊಗೆಯಾಡುತ್ತಿದ್ದ ಅಸ್ಥಿರತೆಯ ಪ್ರಚಂಡ ಬಿರುಗಾಳಿ ಬೀಸುತ್ತಿದ್ದರೂ, ತನ್ನ ಎಲ್ಲ ಆವೇಗವನ್ನು ಸಂಯಮದ ಅಂಕೆಯಲ್ಲಿ ದಮನಗೊಳಿಸಿ ನುಡಿದಳು ತಿರುಮಲಾದೇವಿ.

" ಹೋಗಲಿ ಬಿಡು ತಿಪ್ಪಾಜಿ. ಅದುದು ಆಗಿಹೋಯಿತು. ಅನ್ಯಾಯ ಮಾಡಿದ ಅಧರ್ಮಿಗಳೇ ಉದ್ಧಾರವಾಗಲಿ, ಅವರಿಗೆ ಕೇಡು ಬಗೆದು ನಾವೇಕೆ ನಮ್ಮ ಅಲ್ಪತೆಯನ್ನು ಪ್ರದರ್ಶಿಸಬೇಕು. ನಮಗೆ ಕೇಡುಬಗೆದರೂ ನಾವು ಅವರಿಗೆ ಒಳ್ಳೆಯದನ್ನೇ ಕೋರೋಣ."

" ನಾವು ಕೇಡುಬಗೆಯುವುದೇನು ಬಂತು ಮಹಾರಾಣಿ ? ಎಲ್ಲವೂ ಅವರವರು ಕಟ್ಟಿಟ್ಟ ಬುತ್ತಿ. ಅವರು ಅನುಭವಿಸಲೇಬೇಕು. ಅವರ ಕರ್ಮಫಲ, ಪಾಪದ ಶೇಷವನ್ನು ಅವರು ಇಂದಲ್ಲ ನಾಳೆ ಭುಜಿಸಲೇಬೇಕು. ಎಲ್ಲವೂ ಮಾಡಿದ್ದುಣ್ಣೋ ಮಾಹಾರಾಯ ! ಇದು ತಲಾಂತರದ ಸತ್ಯ. ಕುಮಾರನಿಗೆ ಪಟ್ಟಾಭಿಷೇಕ ಮಾಡಲು ಎಷ್ಟು ಸಡಗರ, ಎಷ್ಟು ಸಂಭ್ರಮ. ಆದರೆ ವಿಧಿ ಅವನಿಗೆ ಕಾದಿಟ್ಟಿರುವುದೇನೆಂಬುದನ್ನು ಅವರು ಅರಿಯರು. ಇಂದು ಪಟ್ಟಾಭಿಷೇಕ. ಸಂಭ್ರಮ...." ಕೆರಳಿ ಹೇಳಿದಳು ತಿಪ್ಪಾಜಿ. ತಾನು ಏನು ಮಾತನಾಡುತ್ತಿರವೆನೆಂದು ಅವಳಿಗೆ ಪ್ರಜ್ಞೆ ಇರಲಿಲ್ಲ.

ತಿಪ್ಪಾಜಿಯ ಕಡೆಯ ಮಾತನ್ನು ಕೇಳಿ, ತಿರುಮಲಾದೇವಿ ಸಿಡಿಲು ಬಡಿದವಳಂತೆ ಚೀರಿದಳು. " ತಿಪ್ಪಾಜೀ.... ಏನು ನಿನ್ನ ಮಾತು ? "

ಆಗಲೇ ತಿಪ್ಪಾಜಿಗೆ ಮೈಮೇಲೆ ಎಚ್ಚರ, ತಾನು ಆಡಿರುವ ಮಾತುಗಳ ಸ್ಮರಣೆ. ಅವಳಿಗೆ ಮುಖ ಬಿಳಿಚಿಕೊಂಡಿತು. ತನ್ನ ಮಾತನ್ನು ಬೇರೆ ಯಾರಾದರೂ ಕೇಳಲಿಲ್ಲ ತಾನೇ ? ಎಂದು ಅವಳು ಸುತ್ತಲೂ ನೋಡಿ,

ಬೇರಾರೂ ಅಲ್ಲಿ ಇಲ್ಲದುದರಿಂದ ಸಮಾಧಾನದ ನಿಟ್ಟುಸಿರು ಬಿಟ್ಟಳು.

ತಿಪ್ಪಾಜಿಯ ಮಾತು ಕೇಳಿ ತಿರುಮಲಾದೇವಿಗೆ ತುಂಬ ಕೆಡುಕೆನಿಸಿತು. ಅವಳು ಗದರಿಕೊಳ್ಳುವಂತೆ ಹೇಳಿದಳು. " ತಿಪ್ಪಾಜಿ, ಸಿಟ್ಟಿನ ಕೈಗೆ ಬುದ್ಧಿ ಕೊಟ್ಟು ಇಷ್ಟು ಹುಚ್ಚಳಾಗುವುದೆ? ನೀನು ನಿನ್ನ ಭಾವೋನ್ಮಾದದಲ್ಲೂ ಆಡುವ ಮಾತಿನ ಮೇಲೆ ಗಮನವಿರಲಿ. ಈಗ ಗೋಡೆಗಳಿಗೂ ಕಿವಿಯಿರುವ ಕಾಲ. ದೇವರ ದಯೆಯಿಂದ ಈಗ ನಾವಿಬ್ಬರೇ ಇದ್ದೇವೆ. ನಿನ್ನ ಮಾತನ್ನು ಬೇರೆ ಯಾರಾದರೂ ಕೇಳಿದ್ದರೆ ಏನು ಗತಿ? ಅನಾಹುತವೇ ನಡೆದು ಹೋಗುತ್ತಿತ್ತು! ಇನ್ನುಮೇಲಾದರೂ ಯಾವ ಮಾತೇ ಆಗಲಿ, ಆಡುವಾಗ ಮೈಮೇಲೆ ಎಚ್ಚರವಿರಲಿ. "

" ನಾನು ಏನು ಹೇಳಿದೆ, ಆಡಬಾರದ ಮಾತು ? "

" ಏನು ಹೇಳಿದೆ ಎಂಬುದನ್ನು ನೀನೇ ಜ್ಞಾಪಿಸಿಕೋ."

" ರಾಜಕುಮಾರನ ಪಟ್ಟಾಭಿಷೇಕದ ಸಂಭ್ರಮ ನನಗೆ ಬೇರೆ ಏನನ್ನೋ ನೆನಪಿಗೆ ತಂದಿತು. ಉದ್ವೇಗವನ್ನು ತಡೆಯಲಾಗಲಿಲ್ಲ, ಏನೋ ಹೇಳಿಬಿಟ್ಟಿದ್ದೇನೆ...."

" ನೀನು ಏನೇ ಹೇಳಿರು. ದೇವರ ದಯದಿಂದ ಯಾರಿಗೂ ಹಾಗೆ ಆಗುವುದು ಬೇಡ. ನಮಗೆ ಇತರರು ಕೇಡು ಬಗೆದರೂ ಅವರಿಗೆ ನಾವು ಪ್ರತಿಯಾಗಿ ಕೇಡು ಬಗೆಯುವುದು ಬೇಡ. ಹಾಗೆ ಮಾಡಿದರೆ ನಮ್ಮ ಮಾನವತೆಯನ್ನು ಅಸುರೀ ವೃತ್ತಿಗೆ ಬಲಿಗೊಟ್ಟಂತೆ. ನಮ್ಮ ಮಾನವತೆ ಬೆಳೆದು ದೈವಿಕತೆಯಾಗಬೇಕೇ ಹೊರತು ರಾಕ್ಷಸೀ ವೃತ್ತಿಯಾಗಬಾರದು. ನಾವು ಸರ್ವರಿಗೂ ಹಿತವನ್ನೇ ಕೋರೋಣ, ಸರ್ವರಿಗೂ ಹಿತವಾಗುವುದನ್ನೇ ಸಾಧಿಸೋಣ ! ' ಸರ್ವೇ ಜನಾ ಸುಖಿನೋ ಭವಂತು' ಇದು ನಮ್ಮ ಜೀವನದ ನೀತಿಯಾಗಬೇಕು. ಆಗಲೇ ಧರೆ ನಂದನವಾಗುವುದು. ಮರ್ತ್ಯರು ಅಮರರಾಗುವುದು...."

" ಧರೆ ನಂದನವಾಗುವುದೋ ಮರ್ತ್ಯರು ಅಮರರಾಗುವರೋ ಈ ವೇದಾಂತವೆಲ್ಲ ಯಾರಿಗೆ ಬೇಕು. ಇದನ್ನು ನೆಚ್ಚಿಯೇ ನಿಮಗೆ ಈ ಸ್ಥಿತಿ ಬಂದಿತು " ಎಂದು ತಿಪ್ಪಾಜಿ ವಿಷಣ್ಣಳಾಗಿ ನಕ್ಕಳು. ತಿರುಮಲಾದೇವಿಯ ಮಾತು ಅವಳಿಗೆ ಸೇರಲಿಲ್ಲವೆನ್ನಲು ಆ ಮಾತೇ ಸಾಕ್ಷಿ.

# ೧೪

ರಾಜಕುಮಾರನ ಪಟ್ಟಾಭಿಷೇಕ ಮಹೋತ್ಸವವು ರಾಜಧಾನಿಯಲ್ಲಿ ಬಹು ವಿಜೃಂಭಣೆಯಿಂದ ನೆರವೇರಿತು. ದೇಶದ ಮೂಲೆಮೂಲೆಗಳಿಂದ ಬಂದಿದ್ದ ಅತಿಥಿಗಳು ಕುಮಾರ ಸಾಮ್ರಾಟನಿಗೆ ಕಪ್ಪಕಾಣಿಕೆಗಳನ್ನು ಸಲ್ಲಿಸಿದರು. ಕೃಷ್ಣದೇವರಾಯನು ಚಕ್ರವರ್ತಿಯ ಪ್ರತಿನಿಧಿಯಾಗಿ ನಿಂತುಕೊಂಡು ಬಂದಿದ್ದ ಪ್ರಮುಖ ವ್ಯಕ್ತಿಗಳ ಪರಿಚಯವನ್ನು ಕುಮಾರನಿಗೆ ಮಾಡಿಕೊಟ್ಟನು. ಅಂತಲೇ ಅವರ ಹರಕೆ, ಆಶೀರ್ವಾದ, ಸ್ನೇಹ, ಸಹಕಾರಗಳನ್ನೂ ಗಳಿಸಿಕೊಟ್ಟು, ರಾಜ್ಯಭಾರಕ್ಕೆ ಅವಕಾಶ ಕಲ್ಪಿಸಿ ಕೊಟ್ಟ, ಮಹಾಮಹಾ ಮಠಾದೀಶ್ವರರೂ, ಧರ್ಮಗುರುಗಳೂ ರಾಜಕುಮಾರನಿಗೆ ಆಶೀರ್ವಾದ ಮಾಡಿ, ಅವನ ಯಶೋದುಂದುಭಿ ದಶದಿಕ್ಕುಗಳಲ್ಲಿ ಹರಡಲೆಂದು ಹಾರೈಸಿದರು.

ಪಟ್ಟಾಭಿಷೇಕಕ್ಕೆ ಬಂದಿದ್ದವರಿಗೆಲ್ಲ ಅವರವರ ಯೋಗ್ಯತೆ ಅಂತಸ್ತುಗಳಿಗೆ ಅನುಗುಣವಾಗಿ, ಧನಕನಕ ತುರಗವಾಹನಗಳಿಂದ ಸನ್ಮಾನಿಸಲಾಯಿತು. ಎಲ್ಲರಿಗೂ ಉಚಿತವಾದ ಪಾರಿತೋಷಗಳು ಸಲ್ಲಿಸಲ್ಪಟ್ಟವು. ರಾಜಧಾನಿಯ ಜನರು ಮಾತ್ರವೇ ಅಲ್ಲದೆ ಸಾಮ್ರಾಜ್ಯದ ಜನತೆ ಆಬಾಲವೃದ್ಧರಾದಿಯಾಗಿ ಕುಮಾರನ ಪಟ್ಟಾಭಿಷೇಕದ ಸಂದರ್ಭದಲ್ಲಿ ಉಂಡು ಉಟ್ಟು ತೃಪ್ತಿಪಟ್ಟರು. ಎಲ್ಲರ ಮನಸ್ಸಿನಲ್ಲೂ ಈ ಉತ್ಸವದ ಸವಿನೆನಪು ಹಸಿರಾಗಿ ಉಳಿಯಿತು.

ಕೃಷ್ಣದೇವರಾಯನಿಗೆ ಈಗ ಮನಸ್ಸಿಗೆ ಎಷ್ಟೋ ನೆಮ್ಮದಿ. ಕುಮಾರನ ಪಟ್ಟಾಭಿಷೇಕವನ್ನು ವಿರೋಧಿಸಿ,ಸಾಮಂತರು,ಮಾಂಡಲೀಕರೆಲ್ಲಿ ವಿದ್ರೋಹದ ಚಳುವಳಿಯನ್ನು ಆರಂಭಿಸುತ್ತಾರೋ,ಜನತೆ ಎಲ್ಲಿ ದಂಗೆ ಏಳುತ್ತದೋ ಎಂದು ತುಂಬ ಹೆದರಿಕೊಂಡಿದ್ದ. ತಿಮ್ಮರಸನು ಹೇಳಿದ್ದ ಮಾತುಗಳು ರಾಯನಿಗೆ ಆ ಬಗೆಯ ಹೆದರಿಕೆಯನ್ನು ಹುಟ್ಟಿಸದೆ ಹೋಗಿರಲಿಲ್ಲ. ಆದರೆ ಪಂಪಾಪತಿಯ ದಯೆಯಿಂದ ಈ ಮಹೋತ್ಸವದಲ್ಲಿ ಯಾವ ಆಭಾಸವಾಗಲಿಲ್ಲ. ಎಲ್ಲವೂ ಸುಸೂತ್ರವಾಗಿ ನೆರವೇರಿತ್ತು. ಎಲ್ಲರೂ ಈ ಮಹೋತ್ಸವದ ಸಂದರ್ಭದಲ್ಲಿ

ನಡೆದ ದಾನ, ಧರ್ಮ, ಊಟೋಪಚಾರ, ಮನರಂಜನೆಗಳಿಂದ ತೃಪ್ತಿ ಪಟ್ಟಿದ್ದರು. ಇದರಿಂದ ರಾಯನ ಮನಸ್ಸಿನಲ್ಲಿ ಕೊರೆಯುತ್ತಿದ್ದ ಒಂದು ಶಂಕೆ ನಿವಾರಿಸಲ್ಪಟ್ಟಿತ್ತು. ತಿಮ್ಮರಸನು ತಿರುಮಲಾದೇವಿಯ ಪರ ಪಕ್ಷಪಾತದಿಂದ, ಹೀಗೆ ವಿರೋಧಿಸಿ ಮಾತನಾಡಿರಬೇಕೆಂದು ರಾಯನು ಈಗ ತಿಳಿಯುವಂತಾಯಿತು. ಮೊದಲಿನಿಂದಲೂ ಚಿನ್ನಾದೇವಿಯ ಮೇಲೆ ಅಕಾರಣವಾಗಿ ದ್ವೇಷ ಸಾಧಿಸುತ್ತಿದ್ದ ತಿಮ್ಮರಸನಿಗೆ ಚಿನ್ನಾದೇವಿಯ ಪುತ್ರನು ಸಿಂಹಾಸನಕ್ಕೆ ಬಂದುದು ಸಹಜವಾಗಿಯೇ ಈರ್ಷೆಗೆ ಕಾರಣವಾಗಿದೆ —ಕೇವಲ ಮತ್ಸರದಿಂದ ಕೂಡಿ ಕುಮಾರನ ಪಟ್ಟಾಭಿಷೇಕಕ್ಕೆ ಪ್ರತಿಭಟನೆಯನ್ನು ವ್ಯಕ್ತಪಡಿಸಿದ್ದಾನೆ, ಎಂದು ಮನಸ್ಸಿಗೆ ಖಚಿತವಾಯಿತು. ಇದರಿಂದಾಗಿ, ತಿಮ್ಮರಸನ ವಿಷಯದಲ್ಲಿ ರಾಯನಿಗೆ ಒಂದು ಬಗೆಯ ಪೂರ್ವಾಭಿಪ್ರಾಯ ಬೆಳೆಯಲು ಆರಂಭಿಸಿತು. ಕೃಷ್ಣದೇವರಾಯನು ತಿಮ್ಮರಸನ ಎಲ್ಲ ಕೆಲಸಗಳಲ್ಲಿ ಸಂಶಯ ದೃಷ್ಟಿಯನ್ನೇ ಬೆಳಸಿಕೊಳ್ಳುವಂತಾಯಿತು.

ಹೊಸ ಸಾಮ್ರಾಟರು ಎಂಟು ತಿಂಗಳು ಪಟ್ಟಾಭಿಷೇಕದ ನಿಮಿತ್ತವಾಗಿ ಉತ್ಸವದ ಕಾಲವೆಂದು ರಾಜಘೋಷಣೆಯನ್ನು ಹೊರಡಿಸಿದ್ದರು. ಆ ಎಂಟು ತಿಂಗಳೂ ದೇಶದ ಮೂಲೆಗಳಲ್ಲಿರುವ ಎಲ್ಲ ದೇವಾಲಯಗಳಲ್ಲಿ ಸತತವಾಗಿ ದೀಪ ಧೂಪ, ನೈವೇದ್ಯ, ವಿಶೇಷ ಅಲಂಕಾರ, ಪೂಜೆಗಳು ನಡೆಯಲು ಏರ್ಪಾಡಾಯಿತು. ಪ್ರತಿಯೊಂದು ಹಳ್ಳಿ ಪಟ್ಟಣಗಳಲ್ಲಿ ಜನ ಸಂತೋಷದಿಂದ ಕಾಲ ಕಳೆಯಲು ಅನೇಕ ಬಗೆಯ ಮನರಂಜನೆಗಳು ಎಡಬಿಡದೆ ನಡೆದುವು.

ರಾಜಧಾನಿಯಲ್ಲಂತೂ ಈ ಎಂಟು ತಿಂಗಳು ಸಂತೋಷ ಸಂಭ್ರಮಗಳ ಪರ್ವಕಾಲ. ನಗರದ ಪ್ರಮುಖ ದೇವಾಲಯಗಳಾದ ವಿರೂಪಾಕ್ಷ ದೇವಾಲಯ, ವಿಜಯವಿಠಲ ಸ್ವಾಮಿ ದೇವಾಲಯ, ಗೋಪಾಲಕೃಷ್ಣ ದೇವಾಲಯ, ಹಜಾರರಾಮಸ್ವಾಮಿದೇವಾಲಯ, ಹೇಮಕೂಟಾದ್ರಿಯ ನೂರಾರು ಬಸದಿ, ದೇವಾಲಯಗಳಲ್ಲಿ ಪ್ರತಿದಿನ ವೈಭವವಾದ ಪೂಜೆ, ಅಲಂಕಾರಗಳೂ, ಮಧ್ಯಾಹ್ನದ ವೇಳೆಯಲ್ಲಿ ದಾನಧರ್ಮಸಂತರ್ಪಣೆಗಳೂ, ಭೂರಿಭೋಜನಗಳೂ, ಭಾಗವತರಾಟ, ಸಂಗೀತ, ಹರಿಕತೆಗಳೂ ನಡೆಯುತ್ತಿದ್ದುವು.

ರಾಜಧಾನಿಯಲ್ಲಿ ಮನೆಮನೆಗಳಲ್ಲಿ ನಿತ್ಯದೀಪೋತ್ಸವ. ಪ್ರತಿಯೊಬ್ಬರ ಮನೆಯ ಮುಂದೆ ಹಾಕಿದ ಚಪ್ಪರ ಎಂಟು ದಿನಗಳ ಕಾಲ ಕೀಳಲಿಲ್ಲ. ಎಲ್ಲೆಲ್ಲೂ

ಅನ್ನಛತ್ರ, ಅರವಂಟಿಕೆಗಳು. ಬಡಬಗ್ಗರು ದಾನಧರ್ಮಗಳಿಂದ ಸಿರಿವಂತರಾದರು.

ಅರಮನೆಯಲ್ಲಿ ಪ್ರತಿದಿನದ ಒಡ್ಡೋಲಗದಲ್ಲಿ ಸುಪ್ರಸಿದ್ಧ ಕಲಾವಿದರಿಂದ ನೃತ್ಯ ನಾಟಕ, ಸಂಗೀತ, ಸಾಹಿತ್ಯ, ಚರ್ಚೆ, ಪಂಡಿತಗೋಷ್ಠಿಗಳು ನಡೆದುವು. ಮಲ್ಲಯುದ್ಧ ಪ್ರದರ್ಶನ, ಕುದುರೆ ಸವಾರಿ, ಕತ್ತಿವರಸೆ, ಬಿಲ್ಗಾರಿಕೆಯ ಪ್ರದರ್ಶನ,ಯಕ್ಷಿಣಿ, ಮಾಟ, ಇಂದ್ರಜಾಲ, ಮಹೇಂದ್ರಜಾಲ ಮೊದಲಾದ ಪಂಡಿತ ಪಾಮರರಂಜಕವಾದ ಪ್ರದರ್ಶನಗಳೂ ಇತರ ಮನರಂಜನೆಗಳೂ ಯಥೇಚ್ಛವಾಗಿ ನಡೆದುವು.

ಪ್ರತಿದಿನವೂ ಸೈನಿಕರ ಕವಾಯತು, ಸಿಡಿಮದ್ದುಗಳ ಸಿಡಿತ, ಬಣ್ಣಬಣ್ಣದ ಹೂ ಬಾಣಗಳ ಪ್ರದರ್ಶನ ;ಕುದುರೆ, ಒಂಟೆ ಆನೆಗಳ ಚಮತ್ಕಾರ, ಕತ್ತಿ, ಕೋವಿ, ಭಲ್ಲೆಗಳ ಸಾಹಸ ಪ್ರದರ್ಶನಗಳು ಪ್ರೇಕ್ಷಕರನ್ನು ತಣಿಸಿದುವು. ಒಂದು ಮಾತಿನಲ್ಲಿ ಹೇಳುವುದಾದರೆ ಒಮ್ಮೆಲೇ ಎಂಟು ನವರಾತ್ರಿಗಳು ಒಟ್ಟೈಸಿ ಬಂದಂತೆ ಆಗಿತ್ತು. ರಾಜಧಾನಿಯ ವೈಭವ ಹಿಂದೆಂದೂ ಕಾಣದ ರೀತಿಯಲ್ಲಿ ತನ್ನ ಪರಾಕಾಷ್ಠೆಯನ್ನು ಮುಟ್ಟಿತು.

ಜನತೆ ಹೊಸ ಸಾಮ್ರಾಟನನ್ನು ಸಂತೋಷದಿಂದಲೇ ಸ್ವಾಗತಿಸಿದ್ದಿತು. ಹೊಸ ಸಾಮ್ರಾಟನು ಅವರ ಎಲ್ಲ ಆಸೆ ಆಕಾಂಕ್ಷೆಗಳ ಪ್ರತಿಧ್ವನಿಯಂತೆ ಭಾಸವಾಗಿದ್ದ. ಇದುವರೆಗೆ ಸಂತತವಾಗಿ ನಡೆದಿದ್ದ ಯುದ್ಧ, ರಕ್ತಪಾತ, ಕೊಲೆಸುಲಿಗೆಗಳ ಮಾರಣಹೋಮದ ಪ್ರಕರಣಕ್ಕೆ ಕೊನೆಯುಂಟಾಯಿತೆಂದೂ ಇನ್ನು ಮುಂದೆ ಹೊಸ ಬಾಳಿನ ಹೊಸ ಆಶೋತ್ತರಗಳ, ಶಾಂತಿ ನೆಮ್ಮದಿಗಳ ಪ್ರಕರಣಕ್ಕೆ ಆರಂಭವಾಯಿತೆಂದೂ ಅವರು ತಿಳಿದರು. ಆಳ್ವಿಕೆಯ ಆರಂಭದಲ್ಲಿಯೇ ಎಂಟು ತಿಂಗಳ ವೈಭವವನ್ನು ದಯಪಾಲಿಸಿದ ಸಾಮ್ರಾಟ ಅವರ ಭಾಗಕ್ಕೆ ಶಾಂತಿಸುಭಿಕ್ಷಗಳ ದೇವದೂತನೇ ಆಗಿದ್ದ.

ಇಷ್ಟಾದರೂ ದೇಶದಲ್ಲಿ ಅಲ್ಲಿ ಇಲ್ಲಿ, ಹೊಸ ಸಾಮ್ರಾಟನು ಪಟ್ಟಕ್ಕೆ ಬಂದುದನ್ನು ಸಹಿಸದೆ, ಅವನ ಬಗ್ಗೆ ಅಸೂಯೆಯನ್ನು ತಳೆದ ಜನಕ್ಕೇನೂ ಕಡಮೆಯಾಗಲಿಲ್ಲ. ಅವರು ತಿಮ್ಮರಸನ ಅಭಿಮಾನಿಗಳು, ಇಲ್ಲವೆ ತಿರುಮಲಾದೇವಿಯ ಪಕ್ಷಪಾತಿಗಳು. ಅಂಥವರು ಅಲ್ಪಸಂಖ್ಯೆಯಲ್ಲಿಯೇ ಇದ್ದರೆನ್ನಬೇಕು. ಅವರಲ್ಲಿ ಪ್ರಮುಖರಾದ ತಿಮ್ಮರಸ, ಗೋವಿಂದರಾಜ

ತಿರುಮಲಾದೇವಿ ಮತ್ತು ಅಳಿಯ ರಾಮಭೂಪಾಲರು ತಮ್ಮ ಅತೃಪ್ತಿಯನ್ನು ಬೇರೆ ರೀತಿಯಲ್ಲಿ ತೋರಿಸಲಾರದೆ, ಈ ಉತ್ಸವದಲ್ಲಿ ನಿರ್ಲಿಪ್ತರಾಗಿದ್ದರು.

ಹೊಸ ಸಾಮ್ರಾಟನು ಪಟ್ಟಕ್ಕೆ ಬಂದ ದಿನವೇ ಗೋವಿಂದರಾಜ ತಿಮ್ಮರಸನನ್ನು ಪ್ರಶ್ನಿಸಿದ್ದ.

" ಧರ್ಮಾವತಾರರಾಗಿದ್ದ ಮಹಾಪ್ರಭುಗಳೇ ಹೀಗೆ ಅಧರ್ಮಿಗಳಾಗಿ ವರ್ತಿಸಿದ ಮೇಲೆ ಇನ್ನು ರಾಜ್ಯದಲ್ಲಿ ನ್ಯಾಯ, ಧರ್ಮ, ಸತ್ಯಗಳಿಗೆ ಬೆಲೆ ಏನು? ಅಪ್ಪಾಜಿ? "

"ಧರ್ಮಾಧರ್ಮಗಳನ್ನು ನಿರ್ಣಯಿಸುವ ಪ್ರಭುವೇ ಹೀಗೆ ಮೋಹಾಂಧರಾಗಿ ದಾರಿ ತಪ್ಪಿದ ಮೇಲೆ ಇನ್ನು ಅವುಗಳಿಗೆ ತಿಲಾಂಜಲಿಯನ್ನು ಕೊಟ್ಟಂತೆಯೇ ಸರಿ. ಧರ್ಮವನ್ನು ಅಧರ್ಮವೂ ಸತ್ಯವನ್ನು ಅಸತ್ಯವೂ, ನ್ಯಾಯವನ್ನು ಅನ್ಯಾಯವೂ ಅತಿಕ್ರಮಿಸಿ, ಅವುಗಳ ಸ್ಥಾನದಲ್ಲಿ ತಾವೇ ವಿಜೃಂಭಿಸಿದರೆ ಸಾಮ್ರಾಜ್ಯದ ಪತನಕ್ಕೆ ಹೆಚ್ಚು ಕಾಲ ಬೇಕಿಲ್ಲ" ಎಂದು ವಿಷಾದವಾಗಿ ತಿಮ್ಮರಸನು ಹೇಳಿದ್ದ.

" ಇವುಗಳನ್ನು ನೋಡಿಕೊಂಡೂ ನಾವೇಕೆ ಹೇಡಿಗಳಂತೆ ಕೈಕಟ್ಟಿ ಸುಮ್ಮನೆ ಕುಳಿತಿರಬೇಕು ? ಈ ಬಗೆಯ ಅನ್ಯಾಯವನ್ನು ಅಧರ್ಮವನ್ನು ನಾವು ಎದುರಿಸಬಾರದೇಕೆ ? ಧರ್ಮಕ್ಕಾಗಿ ನಡಸುವ ಹೋರಾಟವೆಂದಿಗೂ ವ್ಯರ್ಥವಲ್ಲ ; ಇದರಲ್ಲಿ ನಮ್ಮ ದೇಹ ಬಿದ್ದು ಹೋದರೂ ಸರಿ, ನಾವು ಅಧರ್ಮದ ವಿರುದ್ಧ ಹೋರಾಡಲೇಬೇಕು."

" ಧರ್ಮಕ್ಕೆಂದಿಗೂ ಸೋಲಿಲ್ಲ ಮಗು. ಅಧರ್ಮಕ್ಕೆ ಜಯವಾದಂತೆ ತಾತ್ಕಾಲಿಕವಾಗಿ ಕಂಡರೂ ಅಂತ್ಯಜಯ ಧರ್ಮಕ್ಕೇ ಹೊರತು ಅಧರ್ಮಕ್ಕಲ್ಲ. ನಾವು ಸುಮ್ಮನೆ ದುಡುಕಿ ಪ್ರಯೋಜನವಿಲ್ಲ."

" ನಾವು ತ್ರಿಕರಣ ಪೂರ್ವಕವಾಗಿ ಅಧರ್ಮವೆಂದು ನಂಬಿಯೂ, ಅಧಿಕಾರದಲ್ಲಿ ಇದ್ದರೆ ನಾವೂ ಅಧರ್ಮ ಪ್ರವರ್ತಕರಾಗುವುದಿಲ್ಲವೆ ? ಅಧರ್ಮ ನೆಲೆಗೊಳ್ಳಲು ನಾವೂ ಬೆಂಬಲ ಕೊಟ್ಟಂತೆ ಆಗುವುದಿಲ್ಲವೆ ? "

" ನಮ್ಮದು—ಅಧಿಕಾರದಲ್ಲಿ ಇರುವವರದು—ಇಬ್ಬಗೆಯ ವ್ಯಕ್ತಿತ್ವ ಮಗು. ವ್ಯಕ್ತಿಶಃ ಅಭಿಪ್ರಾಯಗಳೇನೇ ಇರಲಿ. ಅಧಿಕಾರ ಸ್ವೀಕರಿಸಿದ

ನಂತರ, ರಾಜ ಮಾರ್ಗಕ್ಕೆ ಒಳಗಾದ ಮೇಲೆ, ನಾವು ರಾಜನಿಷ್ಠೆಯಿಂದ ಇರಬೇಕಾದ್ದು ನಮ್ಮ ಧರ್ಮ. ಪ್ರಭುಗಳಿಗೆ ಯಾರೇ ಇರಲಿ, ಸಾಮ್ರಾಜ್ಯದ ಸೇವೆ ಸಲ್ಲಿಸಲು ನನಗೆ ಮಾಡಿದಂತೆ ಆಜ್ಞೆ ಮಾಡಲು ಅಧಿಕಾರವಿದೆ. ಆದರೆ ವ್ಯಕ್ತಿಶಃ ಅಭಿಪ್ರಾಯ ಭೇದವಿರುವ ವಕ್ತಿಗಳು ಅಧಿಕಾರದಲ್ಲಿದ್ದರೆ ಅಂತಹವರಿಂದ ಉತ್ಕೃಷ್ಟ ಸೇವೆ ಸಲ್ಲಿಸಲು ಸಾಧ್ಯವೇ ಎನ್ನುವುದು ಆಲೋಚಿಸತಕ್ಕ ವಿಷಯ...."

"ಕಾಯಾ ವಾಚಾ ಮನಸಾ ಮಾಡುವ ಸೇವೆ ಎಲ್ಲಿ? ಮತ್ತೊಬ್ಬರ ಜುಲುಮೆಯಿಂದ ಮಾಡುವ ಸೇವೆ ಎಲ್ಲಿ? ಇದು ನೀರು ಕುಡಿಯದ ಕುದುರೆಗೆ ಬಲವಂತವಾಗಿ ನೀರು ಕುಡಿಸುವ ಸಾಹಸ!"

"ಇದೇ ನಮ್ಮ ಧರ್ಮಸಂಕಟ ಮಗು!"

—ಎಂದು ಅಪ್ಪಾಜಿ ನಿಟ್ಟುಸಿರು ಬಿಟ್ಟು ಹೇಳಿದ್ದರು.

ಈ ಬಗೆಯ ಧರ್ಮಸಂಕಟ ತಿಮ್ಮರಸ, ಗೋವಿಂದರಾಜರಿಗೆ ಮಾತ್ರವಲ್ಲ, ವಿಚಾರವಾದಿಗಳಿಗೆಲ್ಲ ಒದಗಿತ್ತು. ಧರ್ಮಶಾಸ್ತ್ರದಂತೆ ಕೃಷ್ಣದೇವರಾಯನ ಕೃತ್ಯಕ್ಕೆ ಯಾವ ಬೆಂಬಲವಿರಲಿಲ್ಲ. ರಾಯನು ಉದ್ಧಟತನದಿಂದ ನಡಸಿದನೆಂದೇ ಹೇಳಬೇಕು. ಆದರೆ ಸಾಮ್ರಾಟರ ಈ ಬಗೆಯ ಉದ್ಧಟತನವನ್ನು ವಿರೋಧಿಸುವ ಎದೆಗಾರಿಕೆ ಯಾರಿಗೆ ಇದೆ? ಎಲ್ಲರೂ ತಮ್ಮ ಅಸಮಾಧಾನವನ್ನು ಹೊರಗೆ ವ್ಯಕ್ತಪಡಿಸಿದರೆ, ವೃಥಾಕಾರಣವಾಗಿ ಸಾಮ್ರಾಟರ ಆಗ್ರಹಕ್ಕೆ ಪಾತ್ರವಾಗಬೇಕಾಗುವುದೆಂದು ಹೆದರಿ ಸುಮ್ಮನಾದರು. ಹೀಗಿದ್ದರೂ ಅಳಿಯ ರಾಮರಾಯನಂತಹವರು, ಪ್ರತ್ಯಕ್ಷವಾಗಿ ಪ್ರಭುಗಳನ್ನು ಟೀಕಿಸದಿದ್ದರೂ, ಪ್ರಭುಗಳ ವರ್ತನೆಯಿಂದ ಅಸಮಾಧಾನ ಹೊಂದಿರುವುದನ್ನು ಪರೋಕ್ಷವಾಗಿ ತೋರಿಸಿದ್ದರು.

ಕೃಷ್ಣದೇವರಾಯನು ಈ ಎಂಟು ತಿಂಗಳ ಕಾಲ ರಾಜಧಾನಿಯಲ್ಲೇ ಇರಲು ಎಷ್ಟೋ ಬಲವಂತ ಮಾಡಿದ್ದ. ಆದರೆ ಅದೂ ಇದೂ ಕಾರಣಗಳನ್ನು ಮುಂದೊಡ್ಡಿ ರಾಮರಾಯನು ರಾಜಧಾನಿಯಿಂದ ಹೊರಟು ಹೋಗಿದ್ದ. ರಾಜಧಾನಿಯಲ್ಲಿ ಇದ್ದಾಗಲೂ ಹೊರಗಿನಿಂದ ಬಂದಿದ್ದ ಇತರ ಅತಿಥಿಗಳಂತೆಯೇ ರಾಮರಾಯನು ನಡೆದುಕೊಂಡು, ಪ್ರಭುಗಳಿಗೆ ಮನಸ್ಸಿಗೆ ನಾಟುವ ರೀತಿಯಲ್ಲಿ ತನ್ನ ಅಸಮಾಧಾನವನ್ನು ತೋರ್ಪಡಿಸಿದ್ದ. ಇದ

ರಿಂದ ರಾಯನಿಗೆ ಕೆಡಕೆನಿಸಿತಾದರೂ, ತನ್ನ ಕೃತ್ಯವನ್ನು ವಿರೋಧಿಸುವ ಇಂತಹವರ ಸಂಖ್ಯೆ ಅಲ್ಪವಾಗಿದ್ದುದರಿಂದ ರಾಯನು ಇದನ್ನು ಅಷ್ಟಾಗಿ ಮನಸ್ಸಿಗೆ ಹಚ್ಚಿಕೊಳ್ಳಲಿಲ್ಲ.

ಇಂತಿರುವಲ್ಲಿ—

ಚಂದ್ರಬಿಂಬದ ಬೆಳುದಿಂಗಳ ಜೊನ್ನರಾತ್ರಿ ಧರೆಯನ್ನೆಲ್ಲ ಹಾಲಿನಲ್ಲಿ ತೊಯ್ದು ಎಲ್ಲೆಡೆಯಲ್ಲೂ ಶಾಂತಿ, ತೃಪ್ತಿ, ಆಹ್ಲಾದಗಳನ್ನು ತುಂಬಿ, ಮಧುಮಹೋತ್ಸವವನ್ನು ನಡಸಿರುವಲ್ಲಿ—ಇದ್ದಕ್ಕಿದ್ದಂತೆ, ಆಗಸದ ತುಂಬ ಕಾರ್ಮೋಡ ಕವಿದು, ಹಠಾತ್ತನೆ ತಿಂಗಳ ಬೆಳಕು ಬಾಡಿ ಕಾರ್ಮುಗಿಲ ಅಂಧಕಾರದಲ್ಲಿ ಮುಳುಗಿ ಜಗತ್ತನ್ನು ಮಸಿಯ ಕಡಲಿನಲ್ಲಿ ಮುಳುಗಿಸಿದಂತೆ ಆ ಸುದ್ದಿ—ರಾಜಕುಮಾರನು ಹಠಾತ್ತನೆ ಅಸ್ವಸ್ಥತೆಯಿಂದ ಮಲಗಿರುವ ಸುದ್ದಿ—ಎಲ್ಲರನ್ನೂ ಚಿಂತೆ ಕಳವಳಗಳ ಕಡಲಿಗೆ ನೂಕಿತು.

ತನ್ನ ಬಾಲಲೀಲೆಗಳಿಂದ ತಂದೆತಾಯಿಗಳನ್ನು ರಂಜಿಸುತ್ತಾ, ತನ್ನ ಆಳ್ವಿಕೆಯಿಂದ ಪ್ರಜಾಕೋಟಿಗೆ ಸಂತೋಷವನ್ನು ಉಂಟುಮಾಡಿದ್ದ, ರಾಜಕುಮಾರನು ಹಠಾತ್ತನೆ ಹಾಸಿಗೆ ಹಿಡಿದು ಮಲಗಿದುದು ಎಲ್ಲರಿಗೂ ಕಳವಳವನ್ನು ಉಂಟುಮಾಡಿತು.

ರಾಜಕುಮಾರನಿಗೆ ಇನ್ನೂ ಆರು ವರ್ಷಕೂಡ ತುಂಬಿರಲಿಲ್ಲ. ಆದರೆ ಈ ವಯಸ್ಸಿಗಾಗಲೇ ಅವನು ತಾನು ಸಾಮಾನ್ಯ ಬಾಲಕನಲ್ಲ—ಸಿಂಹದ ಹೊಟ್ಟೆಯಲ್ಲಿ ಹುಟ್ಟಿರುವ ಸಿಂಹದ ಮರಿ ಎನ್ನುವ ವಿಷಯವನ್ನು ಜಗತ್ತಿಗೆ ತೋರಿಸಿ ಕೊಟ್ಟಿದ್ದ. ಅವನ ಮುಖದಲ್ಲಿ ರಾಜಕಳೆ ಹೊರಸೂಸುತ್ತಿತ್ತು. ಅವನ ಗಂಭೀರವಾದ ನಡೆನುಡಿ, ಚಕ್ರೇಶ್ವರನಿಗೆ ಒಪ್ಪುವ ಶ್ರೀಮದ್ಗಾಂಭೀರ್ಯ ಎಂತಹವರನ್ನೂ ಗೌರವಿಸುವಂತೆ ಮಾಡುತ್ತಿತ್ತು. ಮುಖದಲ್ಲಿ ಎತ್ತಿ ಕಾಣುವ ಪ್ರಕಾಶವಾದ ಕಣ್ಣುಗಳೂ ದೃಢವಾದ, ಆದರೆ ಕೋಮಲವಾದ ಆ ತುಟಿಗಳೂ ಚಕ್ರವರ್ತಿಗೆ ಒಪ್ಪುವಂತೆ ಇದ್ದುವು. ತಲೆಯ ಗುಂಗುರು ಕೂದಲ ಮಧ್ಯೆ ವಿಶಾಲವಾದ ಲಲಾಟದಲ್ಲಿ ಮೆರೆಯುತ್ತಿದ್ದ ತಿಲಕದಿಂದ ಹುಡುಗನು ತಪಸ್ವಿಯಂತೆ ಕಾಣುತ್ತಿದ್ದ. ಅವನ ಉಡುಪು ಸರಳವೂ ಶುಭ್ರವೂ ಆಗಿದ್ದು, ಅವನಲ್ಲಿ ರಾಜಠೀವಿಯು ಮೈಯೊಡೆದು ಕಾಣುತ್ತಿತ್ತು. ನೋಡಿದವರಿಗೆ ಅವನ ವಿಷಯದಲ್ಲಿ ಸಲಿಗೆಗಿಂತಲೂ, ಗೌರವ ಉಂಟಾಗು

ತ್ತಿತ್ತು. ಹೀಗೆ ಎಲ್ಲರ ಪ್ರೀತಿ ಗೌರವಗಳಿಗೆ ಪಾತ್ರನಾಗಿದ್ದ ಆ ಅಭಿಮಾನದ ಪುತ್ಥಳಿ ಹಠಾತ್ತನೆ ಹಾಸಿಗೆ ಹಿಡಿದು ಮಲಗಿದ್ದುದು ಎಲ್ಲರ ಸಂತೋಷದ ಹಾಲಿನಲ್ಲಿ ಹುಳಿ ಹಿಂಡಿದಂತೆ ಆಗಿತ್ತು. ರಾಜಕುಮಾರನು ಚೆನ್ನಾಗಿಯೇ ಆಟಪಾಟಗಳಲ್ಲಿ ತೊಡಗಿದ್ದವನು ಒಮ್ಮೆಲೇ ಹಾಸಿಗೆಯನ್ನು ಹಿಡಿದು ಮಲಗುವನೆಂದು ಯಾರೂ ತಿಳಿದಿರಲಿಲ್ಲ. ಪಟ್ಟಾಭಿಷೇಕ ಮಹೋತ್ಸವದ ಕಾರಣದಿಂದ, ಕುಮಾರನ ಮೈಗೆ ಆಯಾಸವಾಗಿರಬೇಕು, ಎಂದುಕೊಂಡರು. ಆದರೆ ರಾಜಕುಮಾರನ ಸ್ಥಿತಿ ದಿನದಿನಕ್ಕೆ ಕೆಡುತ್ತಲೇ ಹೋಯಿತು. ಕುಮಾರನು ಜ್ವರದಿಂದ ಕಂಗೆಟ್ಟು ಮಲಗಿದ್ದ. ರಾಜವೈದ್ಯರು ಶಕ್ತಿಮೀರಿ ಕುಮಾರನ ಕಾಹಿಲೆಯನ್ನು ವಾಸಿಮಾಡಲು ಪ್ರಯತ್ನಿಸುತ್ತಿದ್ದರು. ಕೃಷ್ಣದೇವರಾಯ ಮತ್ತು ಚೆನ್ನಾದೇವಿ ಮಗನ ಹಾಸಿಗೆಯಿಂದ ಬಿಟ್ಟು ಕದಲಲಿಲ್ಲ. ಕೊಂಡಮರಸಯ್ಯ, ವಿಜಯಭದ್ರ, ತಿಮ್ಮರಸ ಎಲ್ಲರೂ ಕುಮಾರನ ಬಳಿಯಿಂದ ಹೊರಡಲಿಲ್ಲ. ಎಲ್ಲರಿಗೂ ಏನಾಗುವುದೋ ಎನ್ನುವ ಭಯ, ಕಳವಳ. ಎಲ್ಲರೂ ಕುಮಾರನ ಆರೋಗ್ಯಕ್ಕಾಗಿ ಭಗವಂತನಲ್ಲಿ ಮೊರೆಯಿಡುವವರೇ.

ಕುಮಾರನ ಆರೋಗ್ಯಕ್ಕಾಗಿ ರಾಜಧಾನಿಯ ಎಲ್ಲ ದೇವಾಲಯಗಳಲ್ಲಿ ವಿಶೇಷ ಪೂಜೆಗಳೂ ಹವನಹೋಮಗಳೂ ನಡೆದುವು. ಮೃತ್ಯುಂಜಯ ಜಪ, ನವಗ್ರಹಜಪ, ರುದ್ರಾಭಿಷೇಕಗಳೂ ಎಡೆಬಿಡದೆ ನಡೆದುವು. ಕೃಷ್ಣದೇವರಾಯನಂತೂ ತನ್ನ ಮಗನನ್ನು ಉಳಿಸಿಕೊಡದ ಹೊರತು ದೇವಾಲಯದ ಪ್ರಾಂಗಣದಿಂದ ಹೋಗುವುದಿಲ್ಲವೆಂದು ಹಠಹಿಡಿದು, ಪಂಪಾಪತಿ ವಿರೂಪಾಕ್ಷದೇವನ ಗರ್ಭಗುಡಿಯಲ್ಲಿ ಪ್ರಾರ್ಥಿಸುತ್ತಾ ಕುಳಿತವನು ಮೂರು ದಿನಗಳಾದರೂ ಅರಮನೆಗೆ ಹಿಂದಿರುಗಲಿಲ್ಲ. ವಿರೂಪಾಕ್ಷನಿಗೆ ಕೃಷ್ಣದೇವರಾಯನ ಪ್ರಾರ್ಥನೆ ಸೇರಿತೆಂದು ಕಾಣುತ್ತದೆ. ನಾಲ್ಕನೆಯ ದಿನದ ಹೊತ್ತಿಗೆ ಕುಮಾರನಿಗೆ ಜ್ವರ ಕೊಂಚ ಕಡಿಮೆಯಾಯಿತು. ರಾಜವೈದ್ಯರು ಇನ್ನು ಭಯವಿಲ್ಲ, ಕುಮಾರನು ಸಾವಿನ ದವಡೆಯಿಂದ ಪಾರಾದನು, ಎಂಬ ಭರವಸೆಯನ್ನು ಹೊಂದಿದರು. ಈ ಶುಭವಾರ್ತೆಯನ್ನು ಕೇಳಿ ರಾಯನು ಕುಮಾರನ ತೂಕದ ಚಿನ್ನವನ್ನು ತುಲಾಭಾರ ಮಾಡಿಸಿ ಬ್ರಾಹ್ಮಣರಿಗೆ ದಾನಮಾಡಲು ನಿರ್ಧರಿಸಿದನು.

ಮುಸುಗಿದ್ದ ಕಾವಳದ ತೆರೆ ಹರಿದು ಹೊಂಬೆಳಕಿನ ಅರುಣೋದಯ ವಾಯಿತು.

ರಾಜಕುಮಾರನ ಜ್ವರ ಸಂಪೂರ್ಣವಾಗಿ ನಿಂತುಹೋಯಿತು. ಆದರೂ ಮೈಯಲ್ಲಿ ಜ್ವರದಿಂದಾಗಿ ತುಂಬ ಅಶಕ್ತಿ ನೆಲೆಸಿತ್ತು. ಈಗ ಅನುಪಾನ ಗಳಲ್ಲಿ ತುಂಬ ಎಚ್ಚರಿಕೆ ವಹಿಸಬೇಕಾಗಿತ್ತು. ಕುಮಾರನಿಗೆ ಇನ್ನೂ ತಿಂದ ಆಹಾರ ಜೀರ್ಣಿಸಿಕೊಳ್ಳುವ ಶಕ್ತಿ ಇಲ್ಲದುದರಿಂದ ಹಾಲೇ ಆಹಾರವಾಗಿತ್ತು. ಕುಮಾರನು ಕ್ರಮಕ್ರಮವಾಗಿ ಚೇತರಿಸಿಕೊಳ್ಳುತ್ತಿರುವ ಚಿಹ್ನೆ ತೋರಿದನು. ಈಗ ಮುಖದಲ್ಲಿ ಗೆಲುವು ಉಂಟಾಗಿತ್ತು, ಇದನ್ನು ನೋಡಿದವರೆಲ್ಲರ ಮುಖ ಗಳೂ ಗೆಲುವಾದುವು. ಆದರೆ ವಿಧಿ ವಿಲಾಸವೇ ಬೇರೆಯಾಗಿತ್ತು.

ಅಂದು ಬೆಳಗಿನ ಜಾವ ರಾಜಕುಮಾರನು ನಿದ್ರೆಯಿಂದ ತಟಕ್ಕನೆ ಎಚ್ಚೆತ್ತಿದ್ದ. ಅವನಿಗೆ ಆ ವೇಳೆಯಲ್ಲಿ ಔಷದ ಕೊಡಬೇಕಾಗಿತ್ತು. ಮಹಾ ರಾಣಿಯೇ ಮಗನಿಗೆ ಔಷಧಿ ಕುಡಿಸಿದಳು. ಅನಂತರ ಕುಮಾರನು ಮಲಗಿ ಕೊಂಡನು. ಆದರೆ ಬಹಳ ಕಾಲ ನಿದ್ರೆ ಬರಲಿಲ್ಲ. ಏಕೋ ಬಾಯಾರಿಕೆ ಯಾಯಿತು. ನೀರಿಗಾಗಿ ಬೇಡಿದ. ನೀರು ಕುಡಿಯಲು ಕೊಡಲು ಇಚ್ಛಿಸದೆ ಮಹಾರಾಣಿ ಬಳಿಯಲ್ಲಿದ್ದ, ದಾಸಿಗೆ ಹಾಲು ತಂದು ಕೊಡಲು ಹೇಳಿದಳು. ಆದರಂತೆ ದಾಸಿ ಹಾಲನ್ನು ತಂದು ಕುಡಿಸಿದ್ದಳು. ಹಾಲನ್ನು ಕುಡಿದು ತೃಪ್ತನಾಗಿ, ಕುಮಾರನು ಮಲಗಿಕೊಂಡ. ಬೆಳಗಾಗುವ ವೇಳೆಗೆ, ಅವನು ಕುಡಿದಿದ್ದ ಹಾಲನ್ನೆಲ್ಲ ವಾಂತಿಮಾಡಿಕೊಂಡಿದ್ದ. ಅವನ ದೇಹವೆಲ್ಲ ಬಣ್ಣ ಗೆಟ್ಟು ನೀಲಿಯಾಗಿತ್ತು. ಅವನು ಸದ್ದಿಲದೆ ಮಲಗಿರುವುದನ್ನು ನೋಡಿ ಮಹಾರಾಣಿ ಓಡಿಬಂದು ಮಗನನ್ನು ದಿಟ್ಟಿಸಿ ನೋಡಿದಾಗ ಅವಳ ಎದೆ ಯೊಡೆಯಿತು. ಮುಟ್ಟಿ ನೋಡಿದಳು. ಮಗನ ಪ್ರಾಣಪಕ್ಷಿ ಹಾರಿಹೋಗಿ ಬಹಳ ಹೊತ್ತಾಗಿತ್ತು!

ಚೆನ್ನಾದೇವಿಗೆ ಒಮ್ಮೆಲೇ ಸಹಸ್ರ ಚೇಳು ಕಡಿದಂತೆ ಆಗಿ, "ಅಯ್ಯೋ ಕಂದಾ! ಏನು ಮಾಡಿಬಿಟ್ಟೆಯೋ" ಎಂದು ಚೀರಿ ಹಾಗೆಯೇ ನೆಲಕ್ಕೆ ಕುಸಿದು ಬಿದ್ದಳು. ದುಃಖವನ್ನು ತಡೆದುಕೊಳ್ಳಲಾಗದೆ, ಅವಳಿಗೆ ಜ್ಞಾನತಪ್ಪಿ ಹೋಗಿತ್ತು. ಈ ಸುದ್ದಿಯನ್ನು ಕೇಳಿ ರಾಜವೈದ್ಯರು ಓಡಿಬಂದು ಮಗು ವಿನ ದೇಹವನ್ನು ಪರೀಕ್ಷಿಸಿದರು. ಅವರಿಗೆ ಮಗುವಿನ ದೇಹದಲ್ಲಿ ಇನ್ನೂ

ಪ್ರಾಣ ಉಳಿದಿರಬೇಕೆಂಬ ಭ್ರಮೆ. ಆದರೆ ಈ ವೇಳೆಗೆ ಮಗುವಿನ ದೇಹ ಕಟ್ಟಿಗೆಯಂತೆ ಆಗಿತ್ತು. ಅವರು ತಲೆಯನ್ನು ನೆಲಕ್ಕೆ ಕೊಡವಿ ಹಾಗೆಯೇ ಕುಸಿದು ಬಿದ್ದರು.

ಕೃಷ್ಣದೇವರಾಯನು ಓಡಿಬಂದು ಮಗನ ಹಾಸಿಗೆಯ ಬಳಿ ನಿಂತು, ಮಗುವನ್ನು ಒಂದೇ ಸಮನೆ ನೋಡಿದ. ಅವನಿಗೆ ಮಗನ ನಿಶ್ಚಲ ಮುಖವನ್ನು ನೋಡುತ್ತ, ಕುಮಾರನಿನ್ನೂ ಬದುಕಿರುವನೆಂದೇ ಅನಿಸಿ, ಅವನ ದೇಹವನ್ನು ನೇವರಿಸಿದ. ಮಗನ ತಲೆಯ ಕೂದಲಿನಲ್ಲಿ ಕೈಯಾಡಿಸಿದ. ಆದರೆ ಮಗನು ಕಣ್ಣು ತೆರೆಯಲಿಲ್ಲ. "ಮಗು, ಮಗು" ಎಂದು ಭ್ರಮೆಗೊಂಡು ಕೂಗಿದ.

ಈಗ ಕೃಷ್ಣದೇವರಾಯನು ಅಳಲಿಲ್ಲ. ಮಗನ ಮರಣಕ್ಕಾಗಿ ರೋದಿಸಲಿಲ್ಲ. ಸುಮ್ಮನೆ ಮಗನ ಮುಖವನ್ನು ದಿಟ್ಟಿಸಿ ನೋಡುತ್ತಾ ವಿಗ್ರಹದಂತೆ ನಿಂತಿದ್ದ. ಹಿಂದೆಂದೂ ಆ ಮುಖವನ್ನು ನೋಡದವನಂತೆ ಅದನ್ನು ದಿಟ್ಟಿಸಿ ನೋಡುತ್ತಾ ನಿಂತಿದ್ದ. ಅವನ ಹೃದಯದಲ್ಲಿ ದುಃಖದ ದಾವಾನಲ ಭಗಭಗನೆ ಹೊತ್ತಿಕೊಂಡು ಹೊಗೆಯಾಡುತ್ತಿದ್ದರೂ, ಅಗ್ನಿಯನ್ನು ನುಂಗಿ ಕುಳಿತ ಜಮದಗ್ನಿಯಂತೆ ಶಾಂತನಾಗಿದ್ದ. ಹಾಲಾಹಲವನ್ನು ಕುಡಿದು ಕುಳಿತ ಪರಶಿವನಂತೆ ಮೌನವಾಗಿದ್ದ. ಬಡಬಾಗ್ನಿಯನ್ನು ಹೊತ್ತ ಸಾಗರನಂತೆ ಗಂಭೀರನಾಗಿದ್ದ. ಕೋಲ್ಮಿಂಚನ್ನು ಧರಿಸಿದ ಮೋಡದಂತೆ ತಣ್ಣಗಿದ್ದ. ಅಗ್ನಿಪರ್ವತಗಳನ್ನು ಅಡಗಿಸಿ ಕುಳಿತ ಧಾರಿಣಿಯಂತೆ ನಿಶ್ಚಲನಾಗಿದ್ದ. ಆದರೆ ಹೀಗೆ ಎಷ್ಟು ಹೊತ್ತು ಕುಳಿತಾನು? ಅವನ ಹೃದಯದಲ್ಲಿ ಬೀಸುತ್ತಿದ್ದ ಪ್ರಚಂಡ ಬಿರುಗಾಳಿ ಅವನ ಚೇತನವನ್ನು ಹಿಡಿದಲುಗಿಸಿತು. ದುಃಖದ ಕಡಲಿನ ಪ್ರಚಂಡ ಆಘಾತಕ್ಕೆ ಅವನ ಸಂಯಮದ ಕಟ್ಟೆ ನಿಲ್ಲದಾಯಿತು.

ಮನಸ್ಸಿನ ವೃತ್ತಿ ಕದಡಿತು ; ನಿಶ್ಚಯ ಹೊಯ್ದಾಡಿತು.

ರಾಯನು ದುಃಖವನ್ನು ತಡೆಯಲಾರದೆ "ಹಾ ! ಕುಮಾರಾ !" ಎಂದೆನ್ನುತ್ತ ಚೀರಿ, ಬಸವಳಿದು ನೆಲಕ್ಕೆ ಉರುಳಿದನು–ಬಲವಾದ ಭೀಮಾಕಾರದ ವೃಕ್ಷ ವಜ್ರಾಘಾತದಿಂದ ನೆಲಕ್ಕೆ ಉರುಳಿ ಬೀಳುವಂತೆ. ಅವನಿಗೆ ಪ್ರಜ್ಞೆ ತಪ್ಪಿತು.

# ೧೫

ಕೃಷ್ಣದೇವರಾಯನ ದುಃಖ ಮೇರೆ ಮೀರಿತ್ತು. ನಿನ್ನೆ ಗೆಲುವಾಗಿದ್ದು ಗುಣಮುಖನಾಗಿದ್ದ ಮಗನು ಇಂದು ಇರಲಿಲ್ಲ. ಯಾರ ಸುಖಕ್ಕಾಗಿ ಯಾರ ಮಹದಾಶೆಯನ್ನು ಈಡೇರಿಸಲು, ತಾನು ತಿಮ್ಮರಸನ ವಿರೋಧವನ್ನೂ ಲೆಕ್ಕಿಸದೆ, ತಿರುಮಲಾದೇವಿಯ ಆಗ್ರಹವನ್ನೂ ಗಣನೆಗೆ ತಾರದೆ ತಾನು ಆಳುತ್ತಿದ್ದ ಸಿಂಹಾಸನವನ್ನು ತೆರವುಮಾಡಿ, ಅಲ್ಲಿ ಪಟ್ಟಾಭಿಷೇಕಮಾಡಿ ನಲಿದನೋ ಆ ಕುಮಾರ, ಪ್ರೀತಿಯ ಕುಮಾರನು ಇಂದು ಇರಲಿಲ್ಲ! ಯಾರ ಪಟ್ಟಾಭಿಷೇಕಕ್ಕಾಗಿ ರಾಜಬೊಕ್ಕಸವನ್ನೆಲ್ಲ ಬರಿದು ಮಾಡಿದನೋ ಆ ಕುಮಾರ ಇಂದು ತೀರಿಕೊಂಡಿದ್ದ. ತನ್ನ ಎಲ್ಲ ಹೊಂಗನಸುಗಳನ್ನು ಮಣ್ಣುಗೂಡಿಸಿ, ತನ್ನನ್ನೇ ನಂಬಿದ್ದ ಪ್ರಜಾಕೋಟಿಯ ಆಸೆ ಆಕಾಂಕ್ಷೆಗಳನ್ನು ನಿರರ್ಥಕಗೊಳಿಸಿ, ಅಕಾಲಮೃತ್ಯುವಿಗೆ ಈಡಾಗಿದ್ದ. ಮೃತ್ಯು! ಎಂತಹ ಭೀಕರವಾದ ಮೃತ್ಯು!

ಅದು ಸಹಜ ಸಾವಲ್ಲ; ಯಾರೋ ದುರಾತ್ಮರು ಮಾಡಿರುವ ಭೀಕರ ಕೊಲೆ! ಕುಮಾರನ ಅಭ್ಯುದಯವನ್ನು ಕಂಡು ಸಹಿಸದೆ ಮಾಡಿರುವ ಹೊಲಗೆಲಸ! ಏನೂ ಅರಿಯದ, ಯಾರಿಗೂ ಒಂದು ಕೇಡೂ ಬಗೆಯದ ಆ ಕುಮಾರನ ಮೇಲೆ ಯಾರೋ ವಿದ್ರೋಹಿಗಳು ಸೇಡು ತೀರಿಸಿಕೊಂಡಿದ್ದಾರೆ!

ವಿದ್ರೋಹಿಗಳ ಸೇಡು? ಇದನ್ನು ಯೋಚಿಸುತ್ತಿದ್ದಂತೆ ರಾಯನ ಹೃದಯ ಸಿಟ್ಟಿನಿಂದ ಹೊಗೆಯಾಡಿತು. ಕಣ್ಣುಗಳು ಬೆಂಕಿಯನ್ನೇ ಚೆಲ್ಲಿದುವು. ಹುಬ್ಬು ಗಂಟಿಕ್ಕಿ, ಮುಖ ಕೆಂಪಾಯಿತು. ಯಾರೋ ವಿದ್ರೋಹಿಗಳು ಮಾಡಿರುವ ಕಗ್ಗೊಲೆ! ಆ ಘಾತುಕರು ಯಾರೇ ಇರಲಿ, ಮೊದಲು ಹಿಡಿತರಿಸಿ ಅವರನ್ನು ಕ್ರೂರವಾಗಿ ಶಿಕ್ಷಿಸಬೇಕು.! ತಮ್ಮ ಅಕೃತ್ಯಕ್ಕೆ ಪಶ್ಚಾತ್ತಾಪಪಡುವಂತೆ, ಚಿತ್ರಹಿಂಸೆ ಕೊಟ್ಟು ಸೇಡು ತೀರಿಸಿಕೊಳ್ಳಬೇಕು. ಆಗಲೇ ಕುಮಾರನ ಆತ್ಮಕ್ಕೆ ಶಾಂತಿ, ಎಂದುಕೊಂಡು ಕೂಡಲೇ ಕುಮಾರನ ಹತ್ಯಾಕಾರಿಗಳ ಶೋಧನೆ ಮಾಡತೊಡಗಿದ.

ಕುಮಾರನ ಸಾವು ಸಹಜವಾದ ಮೃತ್ಯುವಲ್ಲವೆಂದು ಎಂತಹವರಿಗೂ ತಿಳಿಯುತ್ತಿತ್ತು. ಜ್ವರದಿಂದ ಗುಣಮುಖನಾಗುತ್ತಿದ್ದ ಕುಮಾರ ಇದ್ದಕ್ಕಿದ್ದಂತೆಯೇ ತೀರಿಕೊಳ್ಳಬೇಕಾದರೆ ಏನು ಕಾರಣ? ರಾಜವೈದ್ಯರು ಬಂದು ಕುಮಾರನ ದೇಹವನ್ನುನೋಡುತ್ತಲೇ ಕುಮಾರನಿಗೆ ಯಾರೋ ವಿಷ ಪ್ರಾಶನ ಮಾಡಿಸಿದ್ದಾರೆ, ಎಂಬುದನ್ನು ಊಹಿಸಿ ತಿಳಿದರು. ಯಾಕೆಂದರೆ ಕುಮಾರನ ಸುಕುಮಾರದೇಹ ಈಗ ನೀಲಿಯ ಬಣ್ಣಕ್ಕೆ ತಿರುಗಿತ್ತು. ಮೊದಲು ಹೊಂಬಣ್ಣದ, ಚಿನ್ನದ ಪುತ್ಥಳಿಯಂತೆ ಇದ್ದ ಕುಮಾರ ಈಗ ಶ್ಯಾಮಲ ವರ್ಣ ತಳೆದಿದ್ದ. ಅವನು ವಾಂತಿ ಮಾಡಿಕೊಂಡಿದ್ದ ಹಾಲನ್ನು ಪರೀಕ್ಷಿಸಿದಾಗ, ಅದರಲ್ಲಿ ವಿಷ ಸೇರಿರುವುದು ಖಚಿತವಾಯಿತು. ಹಾಲನ್ನು ಕೊಟ್ಟಿದ್ದ ಬಟ್ಟಲನ್ನು ಪರೀಕ್ಷಿಸಿದಾಗ, ಕುಮಾರನು ವಿಷ ಪ್ರಾಶನದಿಂದಲೇ ತೀರಿಕೊಂಡಿರುವನೆಂಬುದಕ್ಕೆ ಯಾವ ಸಂದೇಹವೂ ಉಳಿಯಲಿಲ್ಲ. ಯಾರೋ ದುರಾತ್ಮರು ಹಾಲಿನಲ್ಲಿ ಕಾರ್ಕೋಟಕ ವಿಷವನ್ನು ಬೆರೆಸಿ, ಕುಮಾರನಿಗೆ ಕುಡಿಸಿ ಕೊಂದಿದ್ದಾರೆ ಎಂಬುದು ಸಿದ್ಧವಾಯಿತು. ಕುಮಾರನಿಗೆ ಹಾಲಿನಲ್ಲಿ ವಿಷವನ್ನು ಕೊಟ್ಟವರು ಯಾರು ? ಬೆಳಗಿನ ಜಾವದಲ್ಲಿ ಹಾಲನ್ನು ಕುಡಿಸಿದ ಆ ದಾಸಿ ಚನ್ನೆಯೇ ಇರಬೇಕು! ಅವಳನ್ನು ಹಿಡಿತರಿಸಿದರೆ ಎಲ್ಲ ಸಂಗತಿ ಹೊರಪಡುತ್ತದೆ.

ಕೂಡಲೇ ಚನ್ನೆಯನ್ನು ಹುಡುಕಲು ದೂತರನ್ನು ಅಟ್ಟಲಾಯಿತು.

ಚನ್ನೆ ಬೆಳಗಿನ ಜಾವದಲ್ಲಿ ಕುಮಾರನಿಗೆ ಹಾಲು ಕುಡಿಸಿದ ಮೇಲೆ ಅಂತಃಪುರದಲ್ಲಿ ಎಲ್ಲಿಯೂ ಕಾಣಿಸಲಿಲ್ಲ. ಅವಳು ಮನೆಗೆ ಹೋಗಿರಬಹುದೆಂದು ಅವಳ ಮನೆಯನ್ನು ಶೋಧಿಸಿ ಬಂದರು. ಅಲ್ಲೂ ಅವಳು ಪತ್ತೆಯಾಗಲಿಲ್ಲ. ಅಂತಃಪುರದಲ್ಲಿ ಎಲ್ಲಿಯಾದರೂ ಅಡಗಿರಬಹುದೆಂದು ಅಂತಃಪುರದ ಒಂದು ಕೋಣೆಯನ್ನೂ ಬಿಡದೆ ಹುಡುಕಿದರು. ಎಲ್ಲೂ ಅವಳು ದೊರೆಯಲ್ಲಿಲ್ಲ. ಬೆಳಗಿನ ಜಾವದಲ್ಲಿ ಇದ್ದ ಚನ್ನೆ ಈಗ ಇಲ್ಲವಾದ ಸಂಗತಿ ಎಲ್ಲರಿಗೂ ವಿಸ್ಮಯವನ್ನುಂಟುಮಾಡಿತು. ಅವಳ ಶೋಧನೆಯಲ್ಲಿಯೇ ತೊಡಗಿರುವಾಗ ಯಾರೋ ಸುದ್ದಿ ತಂದರು—ಅಂತಃಪುರದ ಕೊಳದಲ್ಲಿ ಸ್ತ್ರೀಯೊಬ್ಬಳ ದೇಹ ತೇಲುತ್ತಿದೆ ಎಂದು. ಅವಳನ್ನು ಹೊರಗೆತ್ತಿ ನೋಡಲಾಗಿ, ಅವಳು ಬೇರಾರೂ ಆಗಿರದೆ, ಕಾಣೆಯಾಗಿದ್ದ ಚನ್ನೆಯೇ

ಆಗಿದ್ದಳು. ಅವಳು ಯಾವುದೋ ವಿಷಗಳಿಗೆಯಲ್ಲಿ ಕುಮಾರನಿಗೆ ವಿಷವಿಟ್ಟು ಅನಂತರ ತನ್ನ ಅಕೃತ್ಯಕ್ಕೆ ಪಶ್ಚಾತ್ತಾಪಪಟ್ಟುಕೊಂಡು, ತಾನು ಬದುಕಿದ್ದರೆ ತುಂಬ ತೊಂದರೆ ಅನುಭವಿಸಬೇಕಾಗುವುದೆಂದು ಹೆದರಿ, ಅಂತಃಪುರದ ಕೊಳದಲ್ಲಿ ಬಿದ್ದು ಆತ್ಮಹತ್ಯೆ ಮಾಡಿಕೊಂಡಿರಬೇಕು.

ಚನ್ನೆಯ ಶೋಧನೆಯಾದರೂ ಕುಮಾರನ ಹತ್ಯಾಕಾರಿಯ ಶೋಧನೆಯಾಗಲಿಲ್ಲ.

ಚನ್ನೆಯ ಶವವನ್ನು ಪರೀಕ್ಷಿಸಿದಾಗ, ಅವಳು ತುಂಬ ಹೆದರಿ ಆತ್ಮಹತ್ಯೆ ಮಾಡಿಕೊಂಡಿದ್ದಾಳೆಂಬುದು ವ್ಯಕ್ತಪಟ್ಟಿತು. ಅಲ್ಲದೆ ವಿಷವನ್ನು ಅವಳೇ ಹಾಕಿರುವಳೆಂಬುದಕ್ಕೆ ಸಾಕ್ಷಿಯಾಗಿ, ಅವಳ ಬೆರಳುಗಳು ಒಂದೆರಡು ಕಡೆ ನೀಲಿಯ ಬಣ್ಣವಾಗಿತ್ತು. ಅದು ಕಾರ್ಕೋಟಕ ವಿಷದಿಂದ ಉಂಟಾಗಿದ್ದ ಚಿಹ್ನೆ.

ಚನ್ನೆ ರಾಜಕುಮಾರನಿಗೆ ವಿಷ ಹಾಕಿ ಕೊಂದಿದ್ದಾಳೆ. ಇದು ಎಲ್ಲರಿಗೂ ಖಚಿತವಾಯಿತು. ಆದರೆ....?

ಚನ್ನೆ ಒಬ್ಬ ಸಾಮಾನ್ಯ ದಾಸಿ. ಅವಳಿಗೆ ಕುಮಾರನ ಮೇಲೆ ದ್ವೇಷವಿರಲು ಕಾರಣವೇ ಇಲ್ಲ. ಯಾರಿಗೂ ಒಂದು ಕೇಡೂ ಬಗೆಯದ ಕುಮಾರನು ಚನ್ನೆಗೆ ಯಾವ ಕೇಡೂ ಬಗೆದಿರಲಿಲ್ಲ. ಹೀಗಿದ್ದರೂ ಅವನಿಗೆ ವಿಷವನ್ನು ಹಾಕಿ ಕೊಂದಿರಬೇಕಾದರೆ ಈ ಕೊಲೆಯ ಹಿಂದೆ ಯಾರದೋ ಪ್ರಚೋದನೆ ಇರಬೇಕು; ಈ ಕೊಲೆಯ ಹಿಂದೆ ಯಾವುದೋ ಭಯಂಕರ ಪಿತೂರಿ ಇರಲೇ ಬೇಕು. ಇಲ್ಲವಾದರೆ ಸಾಮಾನ್ಯ ದಾಸಿಗೆ ಕುಮಾರ ಸಾಮ್ರಾಟನನ್ನು ಕೊಲೆಗೈಯ್ಯುವ ಧೈರ್ಯವಾದರೂ ಹೇಗೆ ಬರುತ್ತಿತ್ತು ?

ಕುಮಾರನ ಕೊಲೆಯ ಹಿಂದೆ ಭಯಂಕರ ಪಿತೂರಿ? ಈ ಕೊಲೆ, ಪ್ರಮುಖ ವ್ಯಕ್ತಿಗಳು ಹಿಂದೆ ನಿಂತು ಮಾಡಿಸಿರುವ ಭಯಂಕರ ಪಿತೂರಿ, ಎಂಬುದರ ಬಗ್ಗೆ ರಾಯನಿಗೆ ಸಂಶಯ ಬರಲಿಲ್ಲ. ಈ ಕೊಲೆ ಉದ್ದೇಶಪೂರ್ವಕವಾಗಿಯೇ ನಡೆದಿದೆ. ಚನ್ನೆಯ ಹಿಂದೆ ಯಾರೋ ನಿಂತು ಉದ್ದಿಶ್ಯ ಸಾಧನೆಗಾಗಿ ಮಾಡಿಸಿರುವ ಕಗ್ಗೊಲೆ! ಇಲ್ಲದೆ ಇದ್ದರೆ ಕೇವಲ ಹಸುಗೂಸಿಗೆ ಸಾಮಾನ್ಯ ದಾಸಿಯೊಬ್ಬಳು ವಿಷವಿಟ್ಟು ಕೊಲೆ ಮಾಡಬೇಕೆಂದರೆ—ಸಾಮಾನ್ಯವೆ? ಇದರಲ್ಲಿ ಯಾವುದೋ ಒಳಸಂಚು ಅಡಗಿರಲೇ ಬೇಕು! ಮೊದಲು

ಈ ಒಳಸಂಚನ್ನು ಬಯಲುಮಾಡಿ ಕೊಲೆಯಲ್ಲಿ ಭಾಗವಹಿಸಿದ ಎಲ್ಲ ಹತ್ಯಾಕಾರಿಗಳನ್ನೂ ಹಿಡಿತರಿಸಿ ಅವರನ್ನು ಉಗ್ರವಾಗಿ ಶಿಕ್ಷಿಸಬೇಕು, ಎಂದು ರಾಯನು ನಿಶ್ಚಯಿಸಿದ.

ಕುಮಾರನು ಪಟ್ಟಕ್ಕೆ ಬಂದ ತರುಣದಲ್ಲಿಯೇ ಈ ಕೃತ್ಯ ನಡೆದಿರುವುದರಿಂದ, ಕುಮಾರನು ಪಟ್ಟಾಭಿಷಿಕ್ತನಾಗುವುದನ್ನು ನೋಡಿ ಸಹಿಸದ ವ್ಯಕ್ತಿಗಳು ಮಾಡಿರುವ ಕೆಲಸ ಈ ಕೊಲೆ. ಯಾರಿಗೂ ಯಾವ ಬಗೆಯ ಕೆಡಕನ್ನೂ ಮಾಡದಿರುವ ಈ ಕುಮಾರನ ಮೇಲೆ ದ್ವೇಷ ಸಾಧಿಸಬೇಕಾದರೆ, ಅವನು ಸಾಮ್ರಾಟ ಪದವಿಗೇರಿರುವುದನ್ನು ಸಹಿಸದ ಜನವೇ ಮಾಡಿರುವ ಕೆಲಸ ಇದು. ಕುಮಾರನು ಪಟ್ಟಾಭಿಷಕ್ತನಾಗುವುದನ್ನು ಸಹಿಸದ ವ್ಯಕ್ತಿಗಳ ಪೈಕಿ ಪ್ರಮುಖರಾದವರು, ತಿರುಮಲಾದೇವಿ, ಅಳಿಯ ರಾಮರಾಯ, ಮತ್ತು ಗೋವಿಂದರಾಜ. ಇವರುಗಳಲ್ಲಿ ಯಾರೋ ಮಾಡಿರುವ ಕೃತ್ಯ; ಇದು ಖಂಡಿತ.

........ಈ ಅಕೃತ್ಯವನ್ನು ತಿರುಮಲಾದೇವಿ ಮಾಡಿಸಿರಬಹುದೇ? ರಾಯನು ಗಾಢವಾಗಿ ಆಲೋಚನೆ ಮಾಡಿದ. ಏಕೋ ಅವನ ಅಂತರಾತ್ಮ ಈ ಕೊಲೆಯ ಆರೋಪವನ್ನು ತಿರುಮಲಾದೇವಿಗೆ ಸುತ್ತಲು ಹಿಮ್ಮೆಟ್ಟಿತು. ತಿರುಮಲಾದೇವಿಯು ಪಟ್ಟಮಹಿಷಿ. ಅವಳ ಹೊಟ್ಟೆಯ ಮಗನಿಗೆ ಸಲ್ಲಬೇಕಾಗಿದ್ದ ಸಿಂಹಾಸನ ಚಿನ್ನಾದೇವಿಯ ಪುತ್ರನಿಗೆ ದೊರೆಯಿತು. ಇದರಿಂದ ರೋಷಗೊಂಡು ಅವಳು ಈ ಕೊಲೆಗೆ ಪ್ರೇರೇಪಿಸಿರಬಹುದೆ? ಒಮ್ಮೆ, ಇರಬಹುದೆನಿಸಿತು....ಮತ್ತೊಮ್ಮೆ ಇರಲಾರದೆನಿಸಿತು. ರಾಯನಿಗೆ ತಿರುಮಲಾದೇವಿಯ ಗುಣ, ಸ್ವಭಾವ ಚೆನ್ನಾಗಿ ತಿಳಿದಿದ್ದಿತು.

ತಿರುಮಲಾದೇವಿಯಿಂದ ಆಗಿರುವ ಕೃತ್ಯ ಇದೆಂದು ಒಪ್ಪಲು ಅವನ ಮನಸ್ಸು ಹಿಮ್ಮೆಟ್ಟಿತು. ಏಕೆಂದರೆ, ಆ ದಿನ ಕೃಷ್ಣದೇವರಾಯನು ತಿರುಮಲಾದೇವಿಯೊಡನೆ ಈ ಪಟ್ಟಾಭಿಷೇಕದ ವಿಷಯದಲ್ಲಿ ಮಾತನಾಡಿದಾಗ, ತಿರುಮಲಾದೇವಿಯ ಪ್ರತಿಕ್ರಿಯೆಯನ್ನು ರಾಯನು ಚೆನ್ನಾಗಿ ಬಲ್ಲ. ತಿರುಮಲಾದೇವಿ ಹೇಳಿದ್ದಳು: "ನನ್ನ ಪುತ್ರನಿಗೆ ಸಿಂಹಾಸನ ದೊರೆಯಲೆಂದು ಈ ಮಾತನ್ನು ಹೇಳುತ್ತಿಲ್ಲ. ಆ ಮಗುವಿನ ಹಣೆಯಲ್ಲಿ ಸಾಮ್ರಾಟ ಪದವಿ ಬರೆದಿದೆಯೋ ಇಲ್ಲವೋ ಕಂಡಿರುವವರು ಯಾರು?...." ಎಂದು ಹೇಳಿದ್ದಳು.

ತನ್ನ ಮಗನಿಗೇ ಸಿಂಹಾಸನ ದೊರೆಯಬೇಕೆಂದು ಅವಳ ಹಠವಿದ್ದಿದ್ದರೆ ಅವಳು ತನ್ನನ್ನು ಆ ಬಗ್ಗೆ ಟೀಕಿಸುತ್ತಿದ್ದಳು, ಬಲಾತ್ಕಾರ ಮಾಡುತ್ತಿದ್ದಳು. ಆದರೆ ತಿರುಮಲಾದೇವಿ ತನ್ನ ಮಗನ ಹಕ್ಕುದಾರಿಕೆಯ ಮಾತಿಗಿಂತಲೂ, ಸಾಮ್ರಾಜ್ಯದ ಹಿತಸಾಧನೆಯ ದೃಷ್ಟಿಯಲ್ಲಿ ಮಾತನಾಡಿದ್ದಳು. ಅವಳಿಗೆ ತನ್ನ ಮಗನಿಗೇ ಸಿಂಹಾಸನ ದೊರೆಯಬೇಕೆಂಬ ಆಸೆ ಇದ್ದಿರಬಹುದಾದರೂ–ಇನ್ನು ಒಂದು ವರ್ಷ ಕೂಡ ತುಂಬದ ಆ ಮಗು ಮುಂದೆ ಬೆಳೆದು ದೊಡ್ಡವನಾದ ಮೇಲೆ ಆ ಮಾತು. ಅವನೂ ಹಿಂದೆ ತೀರಿಕೊಂಡಿದ್ದ ಇತರ ಮಕ್ಕಳಂತೆ ಅಕಾಲ ಮೃತ್ಯುವಿಗೆ ಒಳಗಾಗವೆ ಉಳಿದಾಗಿನ ಮಾತು–ಎಂದು ತೊಟ್ಟಿಲಿನ ಆ ಮಗು ಸಿಂಹಾಸನವನ್ನೇರುವ ಬಗ್ಗೆ ಅವಳಿಗೆ ಆತುರವಿರಲಿಲ್ಲ. "ಅವನ ಹಣೆಯಲ್ಲಿ ಸಿಂಹಾಸನ ಬರೆದಿದೆಯೋ ಇಲ್ಲವೋ ಯಾರು ಬಲ್ಲರು?" ಎನ್ನುವ ಮಾತಿನಲ್ಲಿ ಅವನು ಸಾಯದೆ ಬದುಕಿ, ಬೆಳೆದು ದೊಡ್ಡವನಾದರೆ ಸಾಕೆಂಬ ಮಾತೃ ಸಹಜಪ್ರೀತಿ ಇತ್ತೇ ಹೊರತು, ಅವನೇ ಸಾಮ್ರಾಟನಾಗಬೇಕೆಂಬ ಆಸೆ ಇರಲಿಲ್ಲ. ಅವಳೊಡನೆ ಕಳೆದ ಇಪ್ಪತ್ತು ವರ್ಷದ ದಾಂಪತ್ಯ ಜೀವನದಲ್ಲಿ ತಿರುಮಲಾದೇವಿಯ ಯೋಗ್ಯತೆ ಎಂತಹುದೆಂಬುದನ್ನು ರಾಯನು ಬಲ್ಲ. ಅವಳಿಗೆ ಮೊದಲಿನಿಂದಲೂ, ಅಧಿಕಾರ, ಅಂತಸ್ತುಗಳ ಬಗ್ಗೆ ಅಷ್ಟಾಗಿ ಆಸಕ್ತಿ ಇರಲಿಲ್ಲ. ಅವಳಿಗೆ ಜೀವನದಲ್ಲಿ ಒಂದು ಬಗೆಯ ವೈರಾಗ್ಯಭಾವವಿತ್ತು. ಅವಳು ಎಂದೂ ಇನ್ನೊಬ್ಬರಿಗೆ ಕೇಡು ಬಗೆಯುವವಳಲ್ಲ. ಅವಳಲ್ಲಿ ಸ್ವಾರ್ಥವೂ ಹೆಚ್ಚಾಗಿರಲಿಲ್ಲ. ಅವಳು ಒಮ್ಮೆಯಾದರೂ ಕೃಷ್ಣದೇವರಾಯನ ಮನಸ್ಸಿಗೆ ನೋವಾಗುವಂತೆ ಮಾತನಾಡಿರಲಿಲ್ಲ. ತನ್ನ ಇತರ ಸವತಿಯರನ್ನು ಮೂದಲಿಸಿರಲಿಲ್ಲ. ತನ್ನ ಸವತಿಯ ಮಗನಿಗೆ ಪಟ್ಟಾಭಿಷೇಕವಾಗುವುದನ್ನು ಕೇಳಿಯೂ ಅವಳು ಸವತಿಯನ್ನು ಅಸೂಯೆಯಿಂದ ತೆಗಳಿರಲಿಲ್ಲ; ತನಗೆ ದ್ರೋಹ ಬಗೆದನೆಂದು ರಾಯನನ್ನು ಆಕ್ಷೇಪಿಸಿರಲಿಲ್ಲ. ಇಂತಹ ತಿರುಮಲಾದೇವಿ, ಎಂದಿಗೂ ಕುಮಾರನ ಕೊಲೆಗೆ ಪ್ರೇರೇಪಿಸಿರಲಾರಳು. ಸ್ವಯಂ ತಾಯಿಯಾದ ಅವಳು ಮಗುವಿನ ಕೊಲೆಗೆ ಮನಸ್ಸು ಮಾಡಿರಲಾರಳು....ಅಂತಲೇ ರಾಯನಿಗೆ ತಿರುಮಲಾದೇವಿಯನ್ನು ಈ ಕೊಲೆಯ ಹೊಣೆಗಾರಳನ್ನಾಗಿ ಮಾಡಲು ಮನಸ್ಸು ಒಡಂಬಡಲಿಲ್ಲ.

ಇನ್ನು ಅಳಿಯ ರಾಮರಾಯ? ಅವನಿಗೆ ಕುಮಾರನ ಮೇಲೆ

ವೈಯುಕ್ತಿಕ ದ್ವೇಷವಿರಲಿಲ್ಲ. ಆದರೂ ತನ್ನ ಹೆಂಡತಿಯ ತಮ್ಮನಿಗೆ ರಾಜ್ಯವು ತಪ್ಪಿತಲ್ಲ ಎನ್ನುವ ಅಸೂಯೆಯಿಂದ ಈ ಕೊಲೆಗೆ ಪ್ರೇರಕ ಶಕ್ತಿಯಾಗಿರಬಾರದೇಕೆ? ಯಾಕೋ ಅವನನ್ನು ಕೊಲೆಪಾತಕಿ ಎಂದು ತೀರ್ಮಾನಿಸಲು ರಾಯನ ಮನಸ್ಸು ಒಪ್ಪಲಿಲ್ಲ. ಯಾಕೆಂದರೆ ಅವನು ರಾಜಧಾನಿಯನ್ನು ಬಿಟ್ಟು ಹೊರಟು ಎಂಟು ತಿಂಗಳಾಗಿತ್ತು. ಅವನು ರಾಜಧಾನಿಯಿಂದ ನೂರಾರು ಮೈಲಿ ದೂರವಿದ್ದು ಕುಮಾರನ ಕೊಲೆಗೆ ಪ್ರೇರೇಪಿಸಿರಲಾರನೆಂದೇ ರಾಯನ ಎಣಿಕೆ. ಅಲ್ಲದೆ ಕೊಲೆಯಂತಹ ಹೇಡಿ ಕೆಲಸಗಳಿಗೆ ಅವನೆಂದೂ ಕೈಹಾಕಲಾರ. ಅವನು ವೀರಪುಂಗವ. ಇಂತಹ ಕೀಳು ಕೆಲಸಕ್ಕೆ ಅವನೆಂದೂ ಮನಸ್ಸು ಕೊಡ್ಡಲಾರ.

ಅಳಿಯ ರಾಮರಾಯನನ್ನು ಉಳಿದರೆ ಕುಮಾರನು ಪಟ್ಟಾಭಿಷಕ್ತನಾಗುವುದನ್ನು ವಿರೋಧಿಸಿದವರು ತಿಮ್ಮರಸ ಮತ್ತು ಗೋವಿಂದರಾಜ....

ತಿಮ್ಮರಸನಿಂದ ಕುಮಾರನ ಕೊಲೆಯು ನಡೆದಿರಬೇಕೆಂದು ಊಹಿಸಲು ರಾಯನಿಂದ ಖಂಡಿತವಾಗಿ ಸಾಧ್ಯವಾಗಲಿಲ್ಲ, ತಿಮ್ಮರಸನಿಗೆ ಕುಮಾರನು ಪಟ್ಟಕ್ಕೆ ಬರುವುದು ಇಷ್ಟವಿರಲಿಲ್ಲ. ಅವನ ಭಾವನೆಯಲ್ಲಿ ಇದು ಅಧರ್ಮವಾಗಿತ್ತು. ಆದರೂ ತನಗೆ ಅಪ್ಪಾಜಿಯಂತೆ ಇದ್ದ, ಕುಮಾರನಿಗೆ ತಾತನಂತೆ ಇದ್ದ ತಿಮ್ಮರಸನು, ಸುಮಾರು ಐವತ್ತು ವರ್ಷಗಳ ತನಕ ತನ್ನ ಸೇವೆಯಲ್ಲಿ, ಸಾಮ್ರಾಜ್ಯದ ಸೇವೆಯಲ್ಲಿ ದೇಹವನ್ನು ಸವೆಸಿದವನು ಈಗ ಕೇವಲ ಅಭಿಪ್ರಾಯ ಭೇದವಿದ್ದ ಮಾತ್ರಕ್ಕೆ–ಹಾಲುಗಲ್ಲದ ಹಸುಳೆಯ ಕೊಲೆಯ ಹೊಲಗೆಲಸಕ್ಕೆ, ಸಾಮ್ರಾಟನ ಕೊಲೆಯ ವಿದ್ರೋಹಕ್ಕೆ ಮನಸ್ಸು ಕೊಡುತ್ತಾನೆಯೆ?

ಇದನ್ನು ಆಲೋಚಿಸಲೂ ಒಪ್ಪದ ಮನಸ್ಸು, ತಿಮ್ಮರಸನ ಮೇಲೆ ಆರೋಪ ಹೊರಿಸಲು ಒಪ್ಪದಾಯಿತು. ಅವನಿಂದ ಖಂಡಿತವಾಗಿಯೂ ಈ ಕೊಲೆ ನಡೆದಿರಲಾರದು ಎಂದು ಅವನ ಮನಸ್ಸು ಸಾರಿ ಹೇಳುತ್ತಿತ್ತು! ಆದರೂ ರಾಯನಿಗೆ ಅನುಮಾನ, ಸಂದೇಹ ಇದ್ದೇ ಇತ್ತು.

ಇನ್ನು ಗೋವಿಂದರಾಜನ ವಿಷಯ!

ಅವನಿಗೂ ರಾಯನಿಗೂ ಅಂತಹ ನಿಕಟ ಸಂಪರ್ಕವಿರಲಿಲ್ಲ. ರಾಯನ ದಿಗ್ವಿಜಯಗಳಲ್ಲಿ ಅವನು ತಂದೆಯೊಡನೆ ಮಹಾಪಾತ್ರ ವಹಿಸಿದ್ದ, ನಿಜ.

ಅನೇಕ ವಿಜಯಗಳನ್ನು ಗಳಿಸಿಕೊಟ್ಟವನೇ ಅವನು. ಗೋವೆಯ ಯುದ್ಧದಲ್ಲಿ ಅಸದ್ ಖಾನನನ್ನು ಸೋಲಿಸಿ, ಅವನ ತಲೆಯನ್ನು ರಾಯನಿಗೆ ಕಾಣಿಕೆಯಾಗಿ ಅರ್ಪಿಸಿದ್ದ ವೀರ. ಅವನ ಧೈರ್ಯ ಸಾಹಸಗಳನ್ನು ಮೆಚ್ಚಿಕೊಂಡೇ ರಾಯನು ಅವನಿಗೆ ನಗರ ರಕ್ಷಣೆಯಂತಹ ಜವಾಬ್ದಾರಿಯಾದ ಕೆಲಸಕ್ಕೆ ನೇಮಿಸಿದುದು, ಅವನನ್ನು ದುರ್ಗಾಧಿಪತಿಯನ್ನಾಗಿ ಮಾಡಿದ ಮೇಲೆ ಗೋವಿಂದರಾಜನ ವಿಷಯ ರಾಯನಿಗೆ ಹೆಚ್ಚು ತಿಳಿದಿರಲಿಲ್ಲ. ಆದರೂ ಒಮ್ಮೊಮ್ಮೆ ವಿಜಯಭದ್ರನ ಬಾಯಲ್ಲಿಯೋ, ಕೊಂಡಮರಸಯ್ಯನ ಬಾಯಲ್ಲಿಯೋ ಗೋವಿಂದರಾಜನ ಬಗ್ಗೆ ಕೆಲವು ಮಾತು ಕೇಳಿದ್ದ. ಇದರಿಂದ ರಾಯನಿಗೆ ಉಂಟಾದ ಅಭಿಪ್ರಾಯ ದುರ್ಗಾಧಿಪತಿಯಾದ ಮೇಲೆ ಗೋವಿಂದ ರಾಜನು ತುಂಬ ಉದ್ಧಟನಾಗಿದ್ದಾನೆ—ಸೊಕ್ಕಿ ಮೆರೆಯುತ್ತಿದ್ದಾನೆ. ಅವನ ಬಗ್ಗೆ ರಾಯನಿಗೆ ಒಂದು ಬಗೆಯ ಪೂರ್ವಾಭಿಪ್ರಾಯ ಬಂದು, ಮನಸ್ಸು ಕೆಟ್ಟುಹೋಗಲು ಏನೆಲ್ಲ ಬೇಕೋ ಅಷ್ಟನ್ನೂ ವಿಜಯಭದ್ರ ಸಮಯ ಸಾಧಿಸಿ, ಪ್ರಭುಗಳ ಕಿವಿಗೆ ತುಂಬುತ್ತಿದ್ದ. ವಿಜಯಭದ್ರನು ಎಂತಹವನೆಂಬುದನ್ನು ಬಲ್ಲ ರಾಯನು ಅವನ ಮಾತುಗಳನ್ನು ಅಷ್ಟಾಗಿ ಗಣನೆಗೆ ತಂದುಕೊಳ್ಳುತ್ತಿರಲಿಲ್ಲ. ಆದರೂ ರಾಯನಲ್ಲಿ ಗೋವಿಂದರಾಜನ ಬಗ್ಗೆ ಒಂದು ಬಗೆಯ ಪೂರ್ವಾಭಿಪ್ರಾಯ ತನಗೆ ತಿಳಿಯದಂತೆ ಮೂಡಿತ್ತು. ಹೀಗಾಗಲು ಕಾರಣ ಕುಮಾರನ ಪಟ್ಟಾಭಿಷೇಕದ ಪೂರ್ವದಲ್ಲಿ, ತಿಮ್ಮರಸ ಮತ್ತು ಗೋವಿಂದರಾಜನ ನಡುವೆ ಉಂಟಾದ ಎಲ್ಲ ಮಾತುಕತೆ ಅಕಸ್ಮಾತ್ ಗೂಢ ಚಾರರ ಕಿವಿಗೆ ಬಿದ್ದು, ಅದರ ವರದಿ ರಾಯನಿಗೂ ಬಂದು ಮುಟ್ಟಿದ್ದುದು. ಅಂದಿನಿಂದಲೇ ರಾಯನಿಗೆ ಗೋವಿಂದರಾಜನ ವಿಷಯದಲ್ಲಿ ಅವಿಶ್ವಾಸ ಉಂಟಾಯಿತು. ಅದಕ್ಕೆ ತಕ್ಕಂತೆ ವಿಜಯಭದ್ರ ತನ್ನ ಹಗೆತನವನ್ನು ಸಾಧಿಸಲು, ಗೋವಿಂದರಾಜನ ವಿಷಯದಲ್ಲಿ ರಾಯನ ಮನಸ್ಸು ಕೆಡುವಂತೆ ಮಾಡಲು ಏನು ಬೇಕೋ ಅದನ್ನು ಹೇಳುತ್ತಲೇ ಬಂದಿದ್ದ. ಈ ಎಲ್ಲ ಕಾರಣಗಳಿಂದ ರಾಯನ ಮನಸ್ಸು ಗೋವಿಂದರಾಜನ ವಿಷಯದಲ್ಲಿ ಅನುಮಾನ ಪಡುವಂತಾಯಿತು. ಕುಮಾರನ ಕೊಲೆಯಲ್ಲಿ ಅವನ ಪಾತ್ರವಿದೆಯೋ ಏನೋ ಎಂದು ಶಂಕಿಸುವಂತೆ ಆಯಿತು.

ಆ ದಿನ ಗೋವಿಂದರಾಜ ತಿಮ್ಮರಸನಿಗೆ ಹೇಳಿದ್ದ ಮಾತು ರಾಯನ

ಸಂಶಯವನ್ನು ದೃಢಪಡಿಸಿತ್ತು.

"ಇವುಗಳನ್ನು—ಕುಮಾರನ ಪಟ್ಟಾಭಿಷೇಕ—ನೋಡಿಕೊಂಡೂ ನಾವೇಕೆ ಹೇಡಿಗಳಂತೆ ಕೈಕಟ್ಟಿ ಸುಮ್ಮನೆ ಕುಳಿತಿರಬೇಕು? ಈ ಬಗೆಯ ಅನ್ಯಾಯವನ್ನು, ಅಧರ್ಮವನ್ನು ನಾವು ಎದುರಿಸಬಾರದೇಕೆ? ಧರ್ಮಕ್ಕಾಗಿ ನಡಸುವ ಹೋರಾಟವೆಂದಿಗೂ ವ್ಯರ್ಥವಲ್ಲ. ಇದರಲ್ಲಿ ನಮ್ಮ ದೇಹ ಬಿದ್ದು ಹೋದರೂ ಸರಿ, ನಾವು ಅಧರ್ಮದ ವಿರುದ್ಧ ಹೋರಾಡಲೇ ಬೇಕು."

ಈ ಮಾತುಗಳೆಲ್ಲವೂ ರಾಯನಿಗೆ ಹಾಗೆಯೇ ವರದಿಯಾಗಿದ್ದುವು. ರಾಯನು ಆಗ ಈ ಮಾತುಗಳಿಗೆ ವಿಶೇಷ ಅರ್ಥ ಕಲ್ಪಿಸಿರಲಿಲ್ಲ. ಕೇವಲ ವಿರೋಧ ಅಭಿಪ್ರಾಯ ಉಳ್ಳವನೆಂದು ಮಾತ್ರ ತಿಳಿದು ನಿರ್ಲಕ್ಷಿಸಿಬಿಟ್ಟಿದ್ದನು. ಆದರೆ ಈಗ ಗೋವಿಂದರಾಜನ ಮಾತುಗಳಿಗೆ ಬೇರೆ ಅರ್ಥವೇ ಬಂದಿತ್ತು.

"ಧರ್ಮಕ್ಕಾಗಿ ನಡಸುವ ಹೋರಾಟವೆಂದಿಗೂ ವ್ಯರ್ಥವಲ್ಲ. ಇದರಲ್ಲಿ ನಮ್ಮ ದೇಹ ಬಿದ್ದು ಹೋದರೂ ಸರಿ, ನಾವು ಅಧರ್ಮದ ವಿರುದ್ಧ ಹೋರಾಡಲೇ ಬೇಕು!" ಎಂಬ ಮಾತಿಗೆ ರಾಯನು ತನ್ನದೇ ಆದ ಅರ್ಥ ವಿವರಣೆಯನ್ನು ಕೊಟ್ಟುಕೊಂಡನು.

ಕುಮಾರನ ಪಟ್ಟಾಭಿಷೇಕ ಅಧರ್ಮ ಕೃತ್ಯ. ಇದನ್ನು ವಿರೋಧಿಸಬೇಕು. ಇದರಲ್ಲಿ ನಾವು ಮಡಿದರೂ ಸರಿ! ಅನ್ಯಾಯವನ್ನು ಎದುರಿಸಲೇ ಬೇಕು....ಅಂದರೆ ತಮ್ಮ ಪ್ರಾಣ ಹೋದರೂ ಚಿಂತಿಸದೆ, ಅನ್ಯಾಯದಿಂದ ಸಿಂಹಾಸನವನ್ನೇರಿದ ಕುಮಾರನ ಜೀವಕ್ಕೆ ಹಾನಿಯನ್ನುಂಟು ಮಾಡಲು ನಿಶ್ಚಯಿಸಿರಬೇಕು ಗೋವಿಂದರಾಜ. ಇದನ್ನು ಸಮಯ ಸಾಧಿಸಿ ಕಾರ್ಯಗತ ಮಾಡಿರಬೇಕು....ಅಂತಲೇ ಕುಮಾರನ ಕಗ್ಗೊಲೆ.

ಇದಕ್ಕೆ ತಕ್ಕಂತೆ ಅವನ ಮೇಲಿನ ಆರೋಪವು ಸಿದ್ಧಗೊಳ್ಳಲು ಮತ್ತೊಂದು ಸಾಕ್ಷಿ ಸಾಮಗ್ರಿ ದೊರೆತಿತ್ತು. ದಾಸಿ ಚನ್ನೆಯ ಶೋಧನೆಯಲ್ಲಿ ತೊಡಗಿದ್ದ ಗೂಢಚಾರರು ಅವಳ ಬಗ್ಗೆ ಅನೇಕ ಸಂಗತಿಗಳನ್ನು ಪತ್ತೆ ಮಾಡಿದ್ದರು. ಅವುಗಳಲ್ಲಿ ಚನ್ನೆ ಚಿನ್ನಾದೇವಿಯ ಅಂತಃಪುರಕ್ಕೆ ಬಂದು ಕೇವಲ ಐದಾರು ತಿಂಗಳಾದುವೆಂದೂ, ಇಲ್ಲಿಗೆ ಬರುವುದಕ್ಕೆ ಮುಂಚೆ ಅವಳು ಗೋವಿಂದರಾಜನ ಸೇವೆಯಲ್ಲಿ ಇದ್ದಳೆಂದೂ ಹೊರಪಟ್ಟಿತ್ತು.

ಇದರಿಂದ ರಾಯನು ಊಹಿಸಿದುದೇನೆಂದರೆ, ಗೋವಿಂದರಾಜನೇ

ದಾಸಿ ಚನ್ನೆಯಿಂದ, ಕುಮಾರನನ್ನು ಕೊಲೆ ಮಾಡಿಸಿದ್ದಾನೆ. ಅವನ ಬೆಂಬಲ ವಿಲ್ಲದೆ, ಪ್ರೇರೇಪಣೆ ಇಲ್ಲದೆ ಸಾಮಾನ್ಯ ದಾಸಿಯಾದ ಚನ್ನೆಗೆ ಕುಮಾರನನ್ನು ವಿಷವಿಟ್ಟು ಕೊಲ್ಲಲು ಧೈರ್ಯವಾದರೂ ಹೇಗೆ ಬರಬೇಕು?

ಮಗನು ಮಡಿದ ದುಃಖದಲ್ಲಿ ರಾಯನ ಬುದ್ಧಿಗೆ ಗ್ರಹಣ ಹಿಡಿದಂತೆ ಆಗಿತ್ತು. ವಿಚಾರ ಶಕ್ತಿ ಕುಗ್ಗಿತ್ತು. ಭಾವೋನ್ಮಾದದಲ್ಲಿ, ಮಗನ ಹತ್ಯಾಕಾರಿಗಳ ಮೇಲೆ ಸೇಡು ತೀರಿಸಿಕೊಳ್ಳುವ ಆತುರದಲ್ಲಿ ರಾಯನು ವಿಜಯಭದ್ರನಿಗೆ, ತಿಮ್ಮರಸ ಹಾಗೂ ಗೋವಿಂದರಾಜನನ್ನು ಕೂಡಲೇ ಬಂಧಿಸಿ ತರಲು ಆಜ್ಞೆ ಮಾಡಿದನು. ರಾಜಾಜ್ಞೆಯಂತೆ ವಿಜಯಭದ್ರನು ತಿಮ್ಮರಸನ ಮನೆಗೆ ಅವರನ್ನು ಬಂಧಿಸಿ ಕರೆತರಲು ಹೊರಟನು.

ವಿಜಯಭದ್ರನು ತಿಮ್ಮರಸನ ನಿವಾಸಕ್ಕೆ ಬಂದಾಗ ತಿಮ್ಮರಸನು ಬೆಳಗಿನ ನಿತ್ಯಕರ್ಮಗಳನ್ನು ತೀರಿಸಿಕೊಂಡು, ದೇವತಾರ್ಚನೆಯಲ್ಲಿ ಇದ್ದನು. ವಿಜಯಭದ್ರನು ತನ್ನ ಸಹಾಯಕ್ಕೆಂದು ಪೋರ್ಚುಗೀಸ್ ಸೈನಿಕರನ್ನು ಕರೆದು ತಂದಿದ್ದ. ಅವರು ತಮ್ಮ ಬಂದೂಕುಗಳಿಂದ ತಿಮ್ಮರಸನ ಮನೆಯನ್ನು ಸುತ್ತುಗಟ್ಟಿ ತಮ್ಮ ಒಡೆಯನ ಅಪ್ಪಣೆಗಾಗಿ ಕಾಯುತ್ತಿದ್ದರು.

ವಿಜಯಭದ್ರನು ತಿಮ್ಮರಸನ ಮನೆಗೆ ಬಂದವನೇ ಪಹರೆಯವನ ಮೂಲಕ ಸಭ್ಯರೀತಿಯಲ್ಲಿ ತಿಮ್ಮರಸನಿಗೆ ಸುದ್ದಿಕೊಡುವ ಶಿಷ್ಟ ಸಂಪ್ರದಾಯಕ್ಕೆ ಹೋಗದೆ ಬಲಾತ್ಕಾರದಿಂದ ಮನೆಯನ್ನು ನುಗ್ಗಿ ಅತಿಕ್ರಮ ಪ್ರವೇಶ ಮಾಡಿದನು. ಅವನ ಪ್ರವೇಶವನ್ನು ವಿರೋಧಿಸಿದ, ತಿಮ್ಮರಸನ ಪಹರೆಯಾಳುಗಳಿಗೂ, ವಿಜಯಭದ್ರನಿಗೂ ಹೋರಾಟ ನಡೆಯುವ ಸೂಚನೆಯರಿತು, ಪೂಜಾಗೃಹದಲ್ಲಿ ಇದ್ದ ತಿಮ್ಮರಸನೇ ಎದ್ದು ಬಂದ. ವಿಷಯ ತಿಳಿದು, ತನಗೆ ಕೆಲವು ನಿಮಿಷಗಳು ಅವಧಿಯನ್ನು ಕೊಟ್ಟರೆ ಅಷ್ಟರಲ್ಲಿ ತನ್ನ ದೇವತಾರ್ಚನೆಯನ್ನು ಮುಗಿಸಿಕೊಂಡು ಬರುವುದಾಗಿ ತಿಳಿಸಿದ. ಆದರೆ ವಿಜಯಭದ್ರನು ಅರಸರ ಆಜ್ಞೆಯನ್ನು ತಿಳಿಸಿ, ಕೂಡಲೇ ಅವರನ್ನು ಬಂಧಿಸಿ ಕರೆದುಕೊಂಡು ಹೋಗಬೇಕಾಗಿದೆ ಎಂದೂ ಹೇಳಿದ. ಅವರನ್ನು ಬಂಧಿಸಲು ತನ್ನ ಕಡೆಯ ಸೈನಿಕರಿಗೆ ಆಜ್ಞೆಯಿತ್ತನು. ತನ್ನ ದೇವತಾರ್ಚನೆಗೆ ಕೆಲವು ನಿಮಿಷಗಳೂ ಕಾಲಾವಕಾಶ ಕೊಡದ ವಿಜಯಭದ್ರನನ್ನು ಅಡಿಯಿಂದ ಮುಡಿಯು ತನಕ ಕೆರಳಿದ ಕಣ್ಣುಗಳಿಂದ ನೋಡಿ, ಬಂಧಿಸಲು ಬರುತ್ತಿದ್ದ ಸೈನಿಕರು

ಕಡೆಗೆ ತಿರುಗಿ, "ನೀವು ನನ್ನನ್ನು ಬಂಧಿಸುವ ಕಾರಣವಿಲ್ಲ, ನಾನೇ ಹೊರಟು ಬರುತ್ತೇನೆ" ಎಂದು ಗಂಭೀರವಾಣಿಯಲ್ಲಿ ಹೇಳಿ, ತಿಮ್ಮರಸ ಅವರೊಡನೆ ಹೊರಡಲು ಸಿದ್ಧನಾದನು.

ಇದೇ ವೇಳೆಗೆ ಯಾವುದೋ ಕಾರ್ಯಗೌರವದಿಂದ ಅಲ್ಲಿಗೆ ಗೋವಿಂದ ರಾಜನೂ ಬಂದುದನ್ನು ನೋಡಿ, ವಿಜಯಭದ್ರನು ಒಂದೇ ಏಟಿಗೆ ಎರಡು ಹಕ್ಕಿಗಳು ಸಿಕ್ಕಿದುವೆಂದು ಹಿಗ್ಗಿ ಅವನನ್ನೂ ಬಂಧಿಸಲು ಮುಂದಾದನು.

ತನ್ನನ್ನು ಮುಟ್ಟಲು ಬರುತ್ತಿದ್ದ ವಿಜಯಭದ್ರನನ್ನು ದೂರ ತಳ್ಳಿ "ನಾಯಿ, ದೂರ ಸರಿ" ಎಂದು ಗರ್ಜಿಸಿದ ಗೋವಿಂದರಾಜ.

"ಯಾರು ನಾಯಿ ಎಂಬುದನ್ನು ಇನ್ನೊಂದು ನಿಮಿಷದಲ್ಲಿ ತೋರಿಸುತ್ತೇನೆ." ಎಂದು ಹೇಳಿ ಸೈನಿಕರಿಗೆ ಅವನನ್ನು ಬಂಧಿಸಲು ಆಜ್ಞೆ ಮಾಡಿದನು.

"ನನ್ನನ್ನು ಬಂಧಿಸಲು ನಿಮಗೇನು ಅಧಿಕಾರ?" ಕೆರಳಿ ಕೇಳಿದ ಗೋವಿಂದರಾಜ.

ಕೂಡಲೇ ವಿಜಯಭದ್ರನು ರಾಜಾಜ್ಞೆಯನ್ನು ತೋರಿಸಿದ.

"ನಮ್ಮನ್ನು ಯಾವ ಕಾರಣಕ್ಕೆ ಬಂಧಿಸುತ್ತಿದ್ದೀರಿ?"

"ನಿಮ್ಮ ಮೇಲೆ ರಾಜದ್ರೋಹದ ಆಪಾದನೆ ಇದೆ."

"ನಾನು ಪ್ರತಿಭಟಿಸುತ್ತೇನೆ."

"ನಾವು ಬಲಾತ್ಕಾರದಿಂದ ಬಂಧಿಸಬೇಕಾಗುತ್ತದೆ."

ಅಷ್ಟರಲ್ಲಿ ಅಲ್ಲಿಗೆ ತಿಮ್ಮರಸನು ಬರುವುದನ್ನು ನೋಡಿ "ಅಪ್ಪಾಜಿ, ನಮ್ಮ ಮೇಲೆ ಮಿಥ್ಯಾರೋಪ ಹೊರಿಸಿ, ಬಂಧಿಸುತ್ತಿದ್ದಾರೆ. ನಾವು ಇದನ್ನು ಪ್ರತಿಭಟಿಸಬೇಕು" ಎಂದು ಕೂಗಿ ಹೇಳಿದ.

"ಸಲ್ಲದು ಮಗು, ರಾಜಾಜ್ಞೆಯನ್ನು ನಾವು ಉಲ್ಲಂಘಿಸಬಾರದು. ಅವರು ತಮ್ಮ ಕರ್ತವ್ಯವನ್ನು ಮಾಡುತ್ತಿದ್ದಾರೆ—ನಾವು ಅದಕ್ಕೆ ಶಿರಬಾಗಿ ನಡೆಯೋಣ. ಮಹಾರಾಜರ ಸಮ್ಮುಖದಲ್ಲಿ ಬೇಕಾದರೆ ನಮ್ಮ ನಿರಪರಾಧಿತ್ವದ ಬಗೆಗೆ ಹೇಳಿಕೊಳ್ಳೋಣ. ಇವರ ಮುಂದೆ ರಂಪಮಾಡಿ ಪ್ರಯೋಜನವಿಲ್ಲ" ಎಂದು ಹೇಳಿದ ಮೇಲೆ, ಗೋವಿಂದರಾಜನು ಪಳಗಿಸದ ಗೂಳಿಯಂತೆ ಇದ್ದವನು ಈಗ ಗಾಡಿಯ ಎತ್ತಿನಂತೆ ಮೆತ್ತಗಾದ.

ವಿಜಯಭದ್ರ ತಂದೆಮಕ್ಕಳನ್ನು ಬಂಧಿಸಿ, ಅವರನ್ನು ಕರೆದುಕೊಂಡು

ಹೋಗಿ ಕೃಷ್ಣದೇವರಾಯನ ಸಮ್ಮುಖದಲ್ಲಿ ನಿಲ್ಲಿಸಿದ.

" ಅಪ್ಪಾಜಿ ನಿಮ್ಮನ್ನು ಈ ಸ್ಥಿತಿಯಲ್ಲಿ ನೋಡಲು ನನಗೆ ತುಂಬ ವಿಷಾದವಾಗುತ್ತದೆ. ಆದರೆ ನಿರ್ವಾಹವಿಲ್ಲ. ನಿಮ್ಮ ಮೇಲೆ ಈಗ ರಾಜದ್ರೋಹದ ಆಪಾದನೆ ಹೊರಿಸಲ್ಪಟ್ಟಿದೆ. ಅದಕ್ಕಾಗಿ ನಿಮ್ಮಿಬ್ಬರನ್ನು ಬಂಧಿಸಿ ಕರೆತರಲಾಯಿತು " ಎಂದು ರಾಯನು ವಿಷಾದಪೂರ್ಣ ಧ್ವನಿಯಲ್ಲಿ ಹೇಳಿದ.

" ಇದು ನಮ್ಮ ದೌರ್ಭಾಗ್ಯ ಪ್ರಭು."

" ಈಗ ನಿಮ್ಮ ಮೇಲೆ ಹೊರಿಸಲ್ಪಟ್ಟಿರುವ ಆರೋಪಣೆಗಳಿಗೆ ಏನೆನ್ನುತ್ತೀರಿ ? "

" ಯಾವ ಆರೋಪಣೆ ಪ್ರಭು ? "

" ರಾಜದ್ರೋಹದ ಆರೋಪಣೆ."

" ಅಂದರೆ....? "

" ರಾಜಕುಮಾರನನ್ನು ವಿಷವಿಟ್ಟು ಕೊಂದಿರುವ ಹತ್ಯಾಕಾರಿಗಳು ನೀವೆಂದು...."

ಈ ಮಾತು ಕೇಳುತ್ತಲೇ ತಿಮ್ಮರಸನು ' ಶಿವಶಿವಾ ' ಎಂದು ಬೆರಳನ್ನು ಕಿವಿಯ ಮೇಲೆ ಇಟ್ಟುಕೊಂಡು, ಹಾಗೆಯೇ ನೆಲಕ್ಕೆ ಕುಸಿದು ಬಿದ್ದನು. ಕೆಲವು ಕಾಲ ಅವನಿಂದ ಯಾವ ಸ್ವರವೂ ಹೊರಡಲಿಲ್ಲ. ಅವನ ಕಣ್ಣುಗಳಲ್ಲಿ ಮಾತ್ರ ದಾರಾವಾಹಿಯಾದ ಕಣೀರು ಹರಿಯಿತು. ಅನಂತರ ಚೇತರಿಸಿಕೊಂಡು ಹೇಳಿದ:

" ಪ್ರಭು....ಪ್ರಭು....ಏನು ನಿಮ್ಮ ಮಾತು ? ರಾಜಕುಮಾರರು ತೀರಿಕೊಂಡರೆ....ಎಂದು ತೀರಿಕೊಂಡರು? ಏನಾಗಿ ತೀರಿಕೊಂಡರು? ನಿನ್ನೆ ಎಲ್ಲಾ ಅವರು ಆರೋಗ್ಯವಾಗಿದ್ದರಲ್ಲ ಪ್ರಭು ? ಯಾವಾಗ ತೀರಿಕೊಂಡರು ? " ಎಂದು ಬಡಬಡಿಸಿದ.

ಇದನ್ನು ನೋಡಿ ವಿಜಯಭದ್ರನು ಇದೆಲ್ಲವೂ ಕಪಟನಾಟಕವೆಂದೂ ತಮ್ಮ ಕಣ್ಣಿಗೆ ಮಣ್ಣೆರಚಲು ಮಾಡುವ ಸಾಹಸವೆಂದೂ ತಿಳಿದ.

" ಸಾಕುಮಾಡಿ ನಿಮ್ಮ ಕಪಟನಾಟಕ! ರಾಜಕುಮಾರನಿಗೆ ವಿಷ ಹಾಕಿ ಕೊಂದ ನಿಮಗೆ ಅವರ ಮರಣದ ಸಂಗತಿ ತಿಳಿದಿಲ್ಲ, ಅಲ್ಲವೆ? ಪಾಪ. ಕುಮಾರನಿಗಾಗಿ ಸುರಿಸುವ ನಿಮ್ಮ ಮೊಸಳೆಯ ಕಣ್ಣೀರನ್ನು ಸಾಕುಮಾಡಿ.

ನಾವಾರೂ ನಿಮ್ಮ ಕಪಟನಾಟಕಕ್ಕೆ ಬೆರಗಾಗುವುದಿಲ್ಲ" ಎಂದು ಹೇಳಿದ ವಿಜಯಭದ್ರ.

"ಪ್ರಭುಗಳ ಸಮ್ಮುಖದಲ್ಲಿ ಮಾತನಾಡುವಾಗ, ಮಾತಿನ ಮೇಲೆ ಗಮನ ವಿಟ್ಟು ಮಾತನಾಡಿ. ಮಾತು ಬರುವುದೆಂದು ನಾಲಗೆಯನ್ನು ಉದ್ದ ಮಾಡಬೇಡಿ. ನಮ್ಮ ಮೇಲಿನ ಆರೋಪಣೆಗಳಿದ್ದರೆ ಅವನ್ನು ಪರಾಮರ್ಶಿ ಸಲು ಮಹಾಪ್ರಭುಗಳೇ ನಿಂತಿದ್ದಾರೆ. ನಡುವೆ ತಾವು ತಲೆಹಾಕಬಾರದು" ಎಂದು ತಿಮ್ಮರಸ ಮುಖವನ್ನು ಗಂಟಿಕ್ಕಿ ಹೇಳಿ, ಅನಂತರ ಕೃಷ್ಣದೇವ ರಾಯನ ಕಡೆ ತಿರುಗಿ ಹೇಳಿದ.

"ಪ್ರಭು, ಕುಮಾರರು ಸತ್ಯವಾಗಿಯೂ ತೀರಿಕೊಂಡಿರುವರೇ? ನಮ್ಮ ನ್ನೆಲ್ಲ ಅನಾಥರನ್ನಾಗಿ ಮಾಡಿ ತೀರಿಕೊಂಡಿರುವರೆ? ಅಯ್ಯೋ, ನಮ್ಮ ದೌರ್ಭಾಗ್ಯವೇ....ಪ್ರಭುಗಳನ್ನು ಉಳಿಸಿಕೊಳ್ಳುವ ಪುಣ್ಯ ನಮಗಿಲ್ಲವಾ ಯಿತೇ" ಎಂದು ಕಣ್ಣೀರು ತಂದ.

ಇದನ್ನು ನೋಡಿ ಕೃಷ್ಣದೇವರಾಯನೇ ಹೇಳಿದ—

"ಅಪ್ಪಾಜಿ, ನೀವು ಮನಃಪೂರ್ವಕವಾಗಿ ಹೀಗೆ ಹೇಳುತ್ತಿದ್ದೀರೋ ಅಥವಾ ತೋರಿಕೆಗಾಗಿ ಹೀಗೆ ದುಃಖಿಸುತ್ತಿದ್ದೀರೋ ತಿಳಿಯದಾಗಿದೆ. ನೀವೆಂ ದಿಗೂ ಸುಳ್ಳಾಡಿದುದನ್ನು ನಾನು ಕಾಣೆ. ಅಂತಲೇ ನಿಮಗೆ ಕುಮಾರನು ತೀರಿಕೊಂಡಿರುವ ಸಂಗತಿ ಬಹುಶಃ ತಿಳಿದಿರಲಾರದೆಂದು ಭಾವಿಸುತ್ತೇನೆ. ಯಾರೋ ಘಾತುಕರು, ದ್ರೋಹಿಗಳು, ಕುಮಾರನಿಗೆ ವಿಷ ಹಾಕಿ, ಕೊಲೆ ಮಾಡಿದ್ದಾರೆ."

"ಆ ಪಾಪಿಗಳನ್ನು ರಸಾತಲದಲ್ಲಿದ್ದರೂ ಹಿಡಿತರಿಸಿ, ಶೂಲಕ್ಕೇರಿಸ ಬೇಕು ಪ್ರಭು."

"ಆ ಪಾಪಿಗಳಿಗಾಗಿ ನಾವು ರಸಾತಲವನ್ನು ಹುಡುಕಬೇಕಾಗಿಲ್ಲ. ಅವರು ನಮ್ಮ ಕಣ್ಣೆದುರಿಗೇ ಇದ್ದಾರೆ" ಎಂದು ನಡುವೆ ಬಾಯಿ ಹಾಕಿದ ವಿಜಯಭದ್ರ.

ತಿಮ್ಮರಸನು ವಿಜಯಭದ್ರನ್ನು ದುರುದುರನೆ ನೋಡುತ್ತ ಹೇಳಿದ:
"ಅವರು ತಾವು ಮಾತನಾಡುತ್ತಿರುವುದರ ಅರ್ಥವೇನೆಂದು ಅರಿಯದೆ ಮಾತ ನಾಡುತ್ತಿದ್ದಾರೆ ಪ್ರಭು! ಈ ಕೊಲೆಪಾತಕದ ಆರೋಪಣೆ ನಮ್ಮ ಮೇಲೆ?

ನಮಗೆ ಇಲ್ಲಿಯ ವರೆಗೆ, ಇಲ್ಲಿಗೆ ಬರುವ ವರೆಗೆ, ಕುಮಾರನ ಸಾವಿನ ಸುದ್ದಿ ತಿಳಿದಿರಲಿಲ್ಲ ಪ್ರಭು! ಹೀಗಿದ್ದೂ ನಮ್ಮ ಮೇಲೆ ಈ ಮಿಥ್ಯಾರೋಪಣೆ ಹೇಗೆ ಬಂತೆಂಬುದು ನಮಗೆ ತಿಳಿಯದಾಗಿದೆ."

"ಕುಮಾರನಿಗೆ ನೀವೇ ಕೈಯಾರ ವಿಷ ಹಾಕಿಲ್ಲ ನಿಜ. ಆದರೂ ಕೊಲೆಯಲ್ಲಿ ನಿಮ್ಮ ಪಾತ್ರವಿರುವುದೆಂದೇ ನಮ್ಮ ಭಾವನೆ. ಇದಕ್ಕೇನೆನ್ನುವಿರಿ?"

"ಈ ಶಿಶುಹತ್ಯೆ ನಮ್ಮಿಂದ ಆಗಿದ್ದರೆ, ನಿಂತ ನೆಲ ಕುಸಿದು ನುಂಗಲಿ, ಭಾನು ಬಿರಿದು ಬಡಿಯಲಿ. ಕಳೆದ ಐವತ್ತು ವರ್ಷಗಳಿಂದಲೂ ಪ್ರಭುಗಳ ಸೇವೆಯನ್ನು ಏಕನಿಷ್ಠನಾಗಿ ಮಾಡಿರುವ ನನಗೆ, ಪ್ರಭುಗಳ ಉಪ್ಪಿನಿಂದ ಮೈ ಬೆಳೆಸಿರುವ ನನಗೆ, ತ್ರಿಕಾಲದಲ್ಲಿ ಸಾಮ್ರಾಜ್ಯದ ಚಿಂತನೆಯಲ್ಲಿ ತೊಡಗಿರುವ ನನಗೆ ಈ ಕೊಲೆಯ ಆಪಾದನೆಯೆ? ಶಿವ ಶಿವಾ...."ಎಂದು ಕಿವಿಯ ಮೇಲೆ ಕೈಯನ್ನು ಇಟ್ಟುಕೊಂಡನು.

"ನಿಮ್ಮ ನಿಷ್ಠೆಯ ಬಗ್ಗೆ ನಮಗೆ ಇದುವರೆಗೆ ಸಂಶಯವಿರಲಿಲ್ಲ."

"ಈಗ ಸಂಶಯವೆ ಪ್ರಭು?"

"ಹೌದು ಅಪ್ಪಾಜಿ, ಆ ದಿನ ನಾವು ಕುಮಾರನ ಪಟ್ಟಾಭಿಷೇಕದ ಮಾತನ್ನು ನಿಮ್ಮೊಡನೆ ಎತ್ತಿದಾಗ ಮೊದಲು ವಿರೋಧಿಸಿದವರೇ ನೀವು. ನನ್ನ ಕೃತ್ಯವನ್ನು ಅಧರ್ಮವೆಂದು ಸಾರಿದಿರಿ. ಅನಂತರ ಪಟ್ಟಾಭಿಷೇಕ ನಡೆಯುವ ಮುನ್ನ ನನ್ನ ಬಳಿಗೆ ಬಂದು ತಮ್ಮನ್ನು ಅಮಾತ್ಯಪದವಿಯಿಂದ ಬಿಡುಗಡೆ ಮಾಡಲು ಬಯಸಿದಿರಿ. ಇದಕ್ಕೆ ನೀವು ಕೊಟ್ಟ ಕಾರಣ: ನಿಮ್ಮ ವೃದ್ಧಾಪ್ಯವಲ್ಲ, ಹೊಸದಾಗಿ ಪಟ್ಟಕ್ಕೆ ಬರುವ ಬಾಲರಾಜನಿಗೆ ನೀವು ತ್ರಿಕರಣ ಪೂರ್ವಕವಾಗಿ ಸೇವೆ ಸಲ್ಲಿಸಲು ಸಾಧ್ಯವಿಲ್ಲವೆಂದು. ಆದರೆ ನಿಮ್ಮಲ್ಲಿ ನನಗೆ ವಿಶ್ವಾಸವಿತ್ತು. ನಿಮಗೆ ಅಭಿಪ್ರಾಯ ಭೇದವಿದ್ದ ಮಾತ್ರಕ್ಕೆ ಕುಮಾರನ ಕೊಲೆಗೆ ಪ್ರೇರೇಪಿಸುವಂತಹ ದುರ್ಬುದ್ಧಿ ನಿಮಗೆ ಉಂಟಾದೀತೆಂದಾಗಲಿ, ನೀವು ಇಷ್ಟು ಕೀಳಾಗಿ ವರ್ತಿಸುವಿರೆಂದಾಗಲೀ ತಿಳಿಯದೆ ಹೋಯಿತು. ಅಂತಲೇ ಇಚ್ಛೆಯ ವಿರುದ್ಧ ನಿಮ್ಮನ್ನು ಅಮಾತ್ಯ ಪದವಿಯಲ್ಲಿ ನಿಲ್ಲುವಂತೆ ನಾನೇ ಬಲವಂತಪಡಿಸಿದೆ. ಆದರೆ ನೀವು ಅಮಾತ್ಯರಾಗಿದ್ದುಕೊಂಡೂ—ರಾಜಯೋಗದಲ್ಲಿ ಇದ್ದುಕೊಂಡೂ ಇಂತಹ ಹೇಯ ಕೃತ್ಯಕ್ಕೆ ಪ್ರೇರಕ ಶಕ್ತಿಯಾಗುವಿರೆಂದು ನಾನು ತಿಳಿದಿರಲಿಲ್ಲ."

ಪ್ರಭುಗಳ ಬಾಯಿಂದ ಈ ಮಾತುಗಳನ್ನು ಕೇಳಿ ತಿಮ್ಮರಸನ ಮುಖ ವಿವರ್ಣವಾಯಿತು. ಸ್ವಯಂ ಕೃಷ್ಣದೇವರಾಯನೇ ತಮ್ಮ ನಿಷ್ಠೆಯನ್ನು ಶಂಕಿಸಿ, ಕೊಲೆಯ ಆರೋಪವನ್ನು ಹೊರಿಸುವಂತಾಯಿತೇ? ಅರ್ಧಾಯುಸ್ಸನ್ನು ಪ್ರಭುಗಳ ಸೇವೆಯಲ್ಲಿ ಕಳೆದ ಮೇಲೆ ಕಡೆಗೆ ತನಗೆ ಬಂದ ಬಿರುದು ರಾಜದ್ರೋಹಿ! ಕೊಲೆಪಾತಕಿ! ಇದನ್ನು ನೆನೆಯಲು ತಿಮ್ಮರಸನಿಗೆ ಹೆದರಿಕೆಯಾಯಿತು. ಆದರೆ ಇದನ್ನು ನೆನೆಯುವುದು ಹಾಗಿರಲಿ ಈಗ ಹತ್ಯಾಕಾರಿಗಳೆಂಬ ಮಿಥ್ಯ ಆರೋಪವನ್ನು ಒಪ್ಪಿಕೊಳ್ಳಬೇಕಾಗಿತ್ತು.

ಎಂಥ ಹೀನ ಅದೃಷ್ಟ ತನ್ನದು ಎಂದು ತನ್ನ ದುರ್ವಿಧಿಯನ್ನು ಹಳಿದುಕೊಂಡು, ಗರ ಬಡಿದವನಂತೆ ನಿಂತು ಕೊಂಡ ತಿಮ್ಮರಸ.

"ಅಪ್ಪಾಜಿ ಎಂದು ಕರೆದು ನಿಮ್ಮನ್ನು ಪ್ರೀತಿಸಿದೆ, ಪ್ರಧಾನ ಅಮಾತ್ಯರನ್ನಾಗಿ ಮಾಡಿ ಗೌರವಿಸಿದೆ, ಸಾಮ್ರಾಜ್ಯದ ಏಕನಿಷ್ಠ ಸೇವಕರೆಂದೂ, ಹಿತಚಿಂತಕರೆಂದೂ ಬಗೆದೆ. ಆದರೆ ನನ್ನ ಎಲ್ಲ ಪ್ರೀತಿ,ಗೌರವ, ನಂಬಿಕೆಗಳು ವ್ಯರ್ಥವಾಗುವುದೆಂದು ನಾನು ತಿಳಿದಿರಲಿಲ್ಲ. ನಿಮ್ಮಿಂದ ನಾನೆಂದೂ ನಿರೀಕ್ಷಿಸದಿದ್ದ ವಿಶ್ವಾಸ ದ್ರೋಹವೇ ಪ್ರತಿಫಲವಾಗಿ ದೊರೆಯುವುದೆಂದು ನಾನು ತಿಳಿದಿರಲಿಲ್ಲ. ಇದು ನನ್ನ ದೌರ್ಭಾಗ್ಯವೇ ಸರಿ."

ಕೃಷ್ಣದೇವರಾಯನ ಮುಖದ ಮೇಲೆ ಚಿಂತೆಯ ಸುಳಿ ಕಾಣಿಸಿತು.

ಈ ಮಾತುಗಳೆಲ್ಲವನ್ನೂ ತಿಮ್ಮರಸನು ಕನಸಿನಲ್ಲಿರುವವನಂತೆ ಆಲಿಸುತ್ತ ನಿಂತಿದ್ದ.

" ಈಗ ಕಳೆದು ಹೋದುದನ್ನು ಚಿಂತಿಸಿ ಫಲವಿಲ್ಲ. ನಿಮ್ಮ ಮೇಲೆ ಹೊರಿಸಲ್ಪಟ್ಟಿರುವ ಆಪಾದನೆಗಳಿಗೆ ಏನು ಉತ್ತರ ? "

" ನಾವು ನಿರಪರಾಧಿಗಳು ಪ್ರಭು."

" ನೀವು ನಿರಪರಾಧಿಗಳೇ ?"

" ಹೌದು ಪ್ರಭು."

" ಹಾಗಾದರೆ ನಿಮಗೂ ಕುಮಾರನ ಕೊಲೆಗೂ ಯಾವ ಸಂಬಂಧವೂ ಇಲ್ಲವೆ ? "

" ಪಂಪಾಪತಿಯಾಣೆಗೂ ಇಲ್ಲ ಪ್ರಭು."

" ಹಾಗಾದರೆ ಕುಮಾರನ ಹತ್ಯಾಕಾರಿಗಳು ಯಾರು ?"

" ನಮಗೆ ತಿಳಿಯದು ಪ್ರಭು."

" ಹೋಗಲಿ, ಕುಮಾರನಿಗೆ ವಿಷವಿಟ್ಟು ಆತ್ಮಹತ್ಯೆ ಮಾಡಿಕೊಂಡಿರುವ ಈ ದಾಸಿ ಚನ್ನೆಯ ಬಗ್ಗೆ ನೀವು ಏನು ಹೇಳುತ್ತೀರಿ? ಇವಳು ಗೋವಿಂದರಾಜರ ಮನೆಯಲ್ಲಿ ಊಳಿಗಕ್ಕೆ ಇರಲಿಲ್ಲವೆ ? "

—ಎಂದು ಅಲ್ಲೇ ಬಿದ್ದಿದ್ದ ಚನ್ನೆಯ ಶವವನ್ನು ತೋರಿಸಿದ. ಅದನ್ನು ನೋಡಿ ಇದುವರೆಗೂ ಯಾವ ಬಗೆಯ ವಿಕಾರಕ್ಕೂ ಒಳಗಾಗದಿದ್ದ ಗೋವಿಂದ ರಾಜನ ಮುಖ ಬಣ್ಣಗೆಟ್ಟಿತು. ಅದನ್ನು ನಿರೀಕ್ಷಿಸುತ್ತಿದ್ದ ಕೃಷ್ಣದೇವ ರಾಯನು ಗೋವಿಂದರಾಜನನ್ನು ಪ್ರಶ್ನಿಸಿದ.

" ಈಕೆಯು ನಿಮ್ಮ ಪರಿಚಾರಿಕೆಯಲ್ಲಿ ಇದ್ದುದು ನಿಜವೇ ? ಇದನ್ನಾದರೂ ಒಪ್ಪಿಕೊಳ್ಳುತ್ತೀರೋ ಇಲ್ಲವೋ ?"

ಗೋವಿಂದರಾಜ ಮತ್ತೊಮ್ಮೆ ಆ ಶವವನ್ನು ನೋಡಿದ. ಆ ಮುಖವನ್ನು ಅವನು ಚೆನ್ನಾಗಿ ನೋಡಿದ್ದ ನೆನಪಿತ್ತು. ಅವಳೇ ಸುಮಾರು ಏಳೆಂಟು ತಿಂಗಳ ಹಿಂದೆ, ತಾನಾಗಿಯೇ ಕೆಲಸದಿಂದ ಬಿಡುಗಡೆಯನ್ನು ಪಡೆದಿದ್ದ ದಾಸಿ ಚನ್ನೆಯೆಂಬುದು ಖಚಿತವಾಯಿತು. ಆಗ ತನ್ನ ಮನೆಯಿಂದ ಹೊರಟು ಹೋಗಿದ್ದ ಚನ್ನೆ ಅಂತಃಪುರದಲ್ಲಿ ಇರುವಳೆಂಬುದು ಇದುವರೆಗೆ ಅವನಿಗೆ ತಿಳಿದಿರಲಿಲ್ಲ. ಈಗಲೇ ಅವಳು ಅಲ್ಲಿ ಇದ್ದುದು ತಿಳಿದುದು. ಕುಮಾರನಿಗೆ ವಿಷವಿಟ್ಟು ತಾನು ಆತ್ಮಹತ್ಯಮಾಡಿಕೊಂಡಿರುವಳೆಂಬ ವಿಷಯ ತಿಳಿದುದೂ ಈಗಲೇ. ಹೀಗಿದ್ದೂ, ಕೃಷ್ಣದೇವರಾಯನ ಪ್ರಶ್ನೆಗೆ ತಾನು ಏನೆಂದು ಉತ್ತರ ಕೊಡಬೇಕು ?

" ಅವಳು ಹಿಂದೆ ಬಹು ಹಿಂದೆ ನಮ್ಮ ಮನೆಯಲ್ಲಿ ಪರಿಚಾರಿಕೆಯಾಗಿದ್ದಳು. ಇದು ನಿಜ ಪ್ರಭು. ಆದರೆ ಅವಳು ಅನೇಕ ತಿಂಗಳ ಹಿಂದೆಯೇ ನಮ್ಮ ಮನೆಯಿಂದ ಬಿಡುಗಡೆ ಹೊಂದಿ ಹೊರಟು ಹೋದಳು."

" ನಿಮ್ಮಿಂದ ಕೆಲಸದಿಂದ ಬಿಡುಗಡೆ ಹೊಂದಿದ ಮೇಲೆ ಅವಳು ಎಲ್ಲಿ ಕೆಲಸಕ್ಕೆ ಸೇರಿಕೊಂಡಳು ? "

" ಅದು ನಮಗೆ ತಿಳಿಯದು ಪ್ರಭು. ಅನಂತರ ಅವಳನ್ನು ನಾನು ನೋಡಲಿಲ್ಲ."

"ಹೋಗಲಿ. ಆ ದಿನ ನೀವು ತಿಮ್ಮರಸರೊಂದಿಗೆ ಏನು ಹೇಳಿದಿರಿ ?"

" ಯಾವ ದಿನ ಪ್ರಭು ? "

" ಕುಮಾರನ ಪಟ್ಟಾಭಿಷೇಕಕ್ಕೆ ಮೊದಲು?"

" ನನಗೆ ನೆನಪಿಲ್ಲ."

" ಆ ದಿನ ನೀವು ಈ ಬಗೆಯ ಅನ್ಯಾಯವನ್ನು–ಕುಮಾರನ ಪಟ್ಟಾಭಿಷೇಕ ಅಧರ್ಮವನ್ನು ನಾವೇಕೆ ಎದುರಿಸಬಾರದು ? ಧರ್ಮಕ್ಕಾಗಿ ನಡಸುವ ಹೋರಾಟವೆಂದಿಗೂ ವ್ಯರ್ಥವಲ್ಲ ! ಇದರಲ್ಲಿ ನಮ್ಮ ದೇಹ ಬಿದ್ದು ಹೋದರೂ ಸರಿ, ನಾವು ಅಧರ್ಮದ ವಿರುದ್ಧ ಹೋರಾಡಲೇ ಬೇಕು, ಎಂದು ಹೇಳಲಿಲ್ಲವೆ ? "

ಗೋವಿಂದರಾಜನಿಗೆ ತಟಕ್ಕನೆ ಆ ದಿನ ತಿಮ್ಮರಸನೊಂದಿಗೆ ನಡಸಿದ ಚರ್ಚೆಯ ನೆನಪಾಯಿತು.

" ನನಗೆ ಅಂದಿನ ನಿಮ್ಮ ಮಾತುಕತೆಗಳೆಲ್ಲವೂ ವರದಿಯಾಗಿದೆ. ನೀವು ನಮ್ಮ ಕೃತ್ಯವನ್ನು ಪ್ರತಿಭಟಿಸಿದಿರಿ. ಅಧರ್ಮವೆಂದೂ ಅಸತ್ಯವೆಂದೂ ತಿಳಿದಿರಿ. ಹೀಗೆ ಬಗೆದ ನಿಮ್ಮಿಂದ ಯಾವ ವಿದ್ರೋಹ ನಡೆಯಲಾರದೆಂದೂ ನಾನು ಸುಮ್ಮನಿದ್ದೆ. ಆದರೆ ನೀವು ಯಾರಿಗೂ ಕೇಡುಬಗೆಯದಿದ್ದ ಕುಮಾರನ ಮೇಲೆ ದ್ವೇಷ ಕಾರಿ, ಅವನ ಸುಕುಮಾರ ಜೀವನಕ್ಕೆ ವಿಷವಿಟ್ಟು ಕೊಲ್ಲುವ ಘಾತುಕತನ ನಿಮ್ಮದಾದೀತೆಂದು ನಾನು ತಿಳಿದಿರಲಿಲ್ಲ. ನಿಮ್ಮನ್ನು ಆ ದಿನವೇ ಶಿಕ್ಷಿಸದೆ ಬಿಟ್ಟದ್ದು ನನ್ನ ತಪ್ಪಾಯಿತು.

" ತಮಗೆ ನಮ್ಮ ವಿಷಯದಲ್ಲಿ ತಪ್ಪುಗ್ರಹಿಕೆಯಾಗಿದೆ ಪ್ರಭು. ನಿಮಗೆ ಕುಮಾರರು ಪಟ್ಟಾಭಿಷೇಕವಾಗುವ ವಿಷಯದಲ್ಲಿ ಅಭಿಪ್ರಾಯ ಭೇದವಿದ್ದಮಾತ್ರಕ್ಕೆ ಕುಮಾರನ ಮೇಲೆ ಕೈ ಮಾಡುವಂತಹ ನರಾಧಮರು ನಾವಲ್ಲ ! ನಾವು ಈ ಹೀನ ಕೃತ್ಯಕ್ಕೆ ಯಾವುದೇ ರೀತಿಯಲ್ಲಿ ಪ್ರೇರಕರಾಗಿದ್ದರೂ ನಮ್ಮನ್ನು ಚರ್ಮ ಸುಲಿಸಿ, ಚಿತ್ರಹಿಂಸೆ ಕೊಟ್ಟು ಕೊಲ್ಲಿಸಲಿ. ನಾವು ಬೇಡವೆನ್ನುವುದಿಲ್ಲ. ವೃಥಾಮಿಥ್ಯಾರೋಪ ಹೊರಿಸದೆ, ರಾಜಸಭೆಯಲ್ಲಿ ಬಹಿರಂಗವಾಗಿ ವಿಚಾರಣೆಗೆ ಗುರಿಪಡಿಸಿ, ನಮ್ಮ ದ್ರೋಹವನ್ನು ಸಿದ್ಧಪಡಿಸಿ ಕೊಟ್ಟು ಪ್ರಭುಗಳು ಬೇಕಾದಂತೆ ಶಿಕ್ಷಿಸಬಹುದು " ಎಂದ ಗೋವಿಂದರಾಜ.

" ಹಾಗಾದರೆ ಒಳ್ಳೆಯ ಮಾತಿನಿಂದ ನೀವು ಕುಮಾರನ ಕೊಲೆಯ

ಆರೋಪವನ್ನು ಒಪ್ಪಿಕೊಳ್ಳುವುದಿಲ್ಲವೆಂದಾಯಿತು. ನಮ್ಮ ಆರೋಪವನ್ನು ಸಿದ್ಧಪಡಿಸಿ, ಬಹಿರಂಗವಾಗಿ ವಿಚಾರಣೆಮಾಡಿ ಅನಂತರ ಶಿಕ್ಷೆ ವಿಧಿಸ ಬೇಕೊ ? ಆಗಲಿ, ಅದರಂತೆಯೇ ಆಗಲಿ, ! ನೀವು ಕೊಲೆಪಾತಕಿಗಳಾಗಿದ್ದರೆ ಏನುಮಾಡಿದರೂ ಶಿಕ್ಷೆಯಿಂದ ತಪ್ಪಿಸಿಕೊಳ್ಳಲಾರಿರಿ. ಬಹಿರಂಗ ವಿಚಾರಣೆ ನಡೆದು ನಿಮ್ಮ ಹೀನ ಅಕೃತ್ಯ ಲೋಕಕ್ಕೆ ತಿಳಿಯಲಿ, ಅನಂತರ ಶಿಕ್ಷೆಯ ಮಾತು. ಕುಮಾರನನ್ನು ವಿಷವಿಟ್ಟು ಕೊಂದ ಹತ್ಯಾಕಾರಿ ಯಾರೇ ಆಗಿರಲಿ, ಅವನು ಕುಮಾರನ ಕೊಲೆಗೆ ಪಶ್ಚಾತ್ತಾಪ ಪಡಲೇಬೇಕು. ಅವನ ಮೇಲೆ ಸೇಡು ತೀರಿಸಿದಾಗಲೇ ಕುಮಾರನ ಆತ್ಮಕ್ಕೆ ಶಾಂತಿ. ನಿಮ್ಮ ಕೋರಿಕೆಯಂತೆಯೇ ಬಹಿರಂಗ ವಿಚಾರಣೆ ನಡೆಯಲಿ. ಅಲ್ಲಿಯ ತನಕ ನಿಮ್ಮನ್ನು ಬಂಧಿಸಿ, ಸ್ಥನಬದ್ಧತೆಯಲ್ಲಿ ಇಡಲಾಗುತ್ತದೆ.” ಎಂದು ಹೇಳಿ ಕಣ್‌ಸನ್ನೆಯಿಂದ ವಿಜಯಭದ್ರನನ್ನು ಬರಮಾಡಿ ತಿಮ್ಮರಸ, ಗೋವಿಂದ ರಾಜರನ್ನು ಸೆರೆಮನೆಯಲ್ಲಿ ಇಡಲು ಆಜ್ಞೆಮಾಡಿದ. ರಾಜಾಜ್ಞೆಯನ್ನು ಶಿರಸಾವಹಿಸಿ ತಂದೆಮಕ್ಕಳಿಬ್ಬರೂ ವಿಜಯಭದ್ರನನ್ನು ಅನುಸರಿಸಿದರು.

# ೧೬

ತಿಮ್ಮರಸ ಗೋವಿಂದರಾಜರನ್ನು ಬಂಧಿಸಿ, ಸೆರೆಮನೆಯಲ್ಲಿ ಇಟ್ಟ ಮೇಲೂ ಕೃಷ್ಣದೇವರಾಯನ ಮನಸ್ಸು ಸಮಾಧಾನವಾಗಲಿಲ್ಲ. ತಂದೆ ಮಕ್ಕಳಿಬ್ಬರೂ ತಮ್ಮ ಮೇಲಿನ ಆರೋಪಗಳನ್ನು ಒಪ್ಪಿಕೊಂಡಿರಲಿಲ್ಲ. ಅವರು ತಮಗೆ ಕುಮಾರನ ಕೊಲೆಗೆ ಸಂಬಂಧಿಸಿದ ಯಾವ ಸಂಗತಿಯೂ ತಿಳಿಯದೆಂದು ಸಾರಿ ಹೇಳಿದ್ದರೂ ಅವರ ಮಾತಿನಲ್ಲಿ ರಾಯನಿಗೆ ನಂಬಿಕೆ ಹುಟ್ಟಲಿಲ್ಲ. ತಿಮ್ಮರಸನಿಗೆ ಕೊಲೆಯಲ್ಲಿ ಪ್ರತ್ಯಕ್ಷ ಪಾತ್ರವಿಲ್ಲದೆ ಇದ್ದರೂ ಗೋವಿಂದರಾಜನಿಗೂ ಕೊಲೆಗೂ ಯಾವುದೋ ಅವ್ಯಕ್ತವಾದ ಸಂಬಂಧವಿದೆ ಎಂದು ಕೃಷ್ಣದೇವರಾಯನ ಮನಸ್ಸಿಗೆ ಬಾರಿಬಾರಿಗೆ ಅನಿಸುತ್ತಿತ್ತು. ಅವನು ತಾನು ನಿರಪರಾಧಿ ಎಂದು ಹೇಳಿದರೂ ಅವನು ಸುಳ್ಳು ಹೇಳುತ್ತಿರುವನೆಂದೇ ರಾಯನ ನಂಬಿಕೆ. ಅವನನ್ನು ಥಳಿಸಿದರೆ ಅವನಿಂದ ಸತ್ಯಸಂಗತಿ ಹೊರಬೀಳುವುದೇನೋ, ಎಂದುಕೊಂಡ.

ಈ ಕೊಲೆಯ ಹಿಂದೆ ಅಡಗಿರುವ ವ್ಯಕ್ತಿಗಳು ಬಯಲಾಗದ ಹೊರತು, ಅವರ ದುರದ್ದೇಶ ಹೊರಪಡುವಂತೆ ಇರಲಿಲ್ಲ. ಕುಮಾರನಿಗೆ ವಿಷವನ್ನು ಹಾಕಿದ ಹೆಣ್ಣು ಸಾಮಾನ್ಯ ದಾಸಿಯಾದರೂ ಅವಳನ್ನು ಈ ಕೃತ್ಯಕ್ಕೆ ನಿಯಮಿಸಿ ಪ್ರೇರೇಪಿಸಿದ್ದ ವ್ಯಕ್ತಿ ಸಾಮಾನ್ಯ ವ್ಯಕ್ತಿಯಲ್ಲವೆಂಬುದು ಸಿದ್ಧಾಂತವಾಗಿತ್ತು. ಅವರು ಯಾರು? ಅವರ ಉದ್ದೇಶವೇನು? ಎಂದು ತಿಳಿಯುವ ಮೊದಲೇ ಆ ದಾಸಿ ಆತ್ಮಹತ್ಯೆ ಮಾಡಿಕೊಂಡಿದ್ದಳು. ಅವಳು ನಿಜವಾಗಿ ಆತ್ಮಹತ್ಯೆ ಮಾಡಿಕೊಂಡಿದ್ದಳೋ, ಅಥವಾ ಬೇರೆಯವರು ತಮ್ಮ ಗುಟ್ಟು ಬಯಲಾಗುವುದೆಂದು ಹೆದರಿ ಅವಳನ್ನು ಕೊಂದು, ಶವವನ್ನು ಕೊಳಕ್ಕೆ ಹಾಕಿರುವರೋ ಯಾವುದೂ ಹೇಳುವಂತೆ ಇರಲಿಲ್ಲ. ಏಕೆಂದರೆ ಕುಮಾರನನ್ನು ಕೊಂದ ಮರುಗಳಿಗೆಯಲ್ಲೇ ಅವಳ ಆತ್ಮಹತ್ಯೆಯ ಪ್ರಕರಣ ನಡೆದಿರಬೇಕಾದರೆ ಅವಳು ಪ್ರಾಣದ ಮೇಲೆ ಆಸೆಯನ್ನು ತೊರೆದಿದ್ದಳೆ? ಯಾವುದೂ ನಿರ್ಣಯಿಸುವಂತೆ ಇರಲಿಲ್ಲ. ಆ ದಾಸಿಯ ಕುಲ ಗೋತ್ರಗಳನ್ನು ತಿಳಿಯವುದರ ಜೊತೆಗೆ ಅವಳನ್ನು ಅಂತಃಪುರಕ್ಕೆ ಸೇರಿಸಿದವರು

ಯಾರು ? ಅವಳೊಡನೆ ಸಂಪರ್ಕವಿಟ್ಟುಕೊಂಡಿದ್ದವರು ಯಾರು ? ಅವಳ ಚಲನವಲನಗಳು ಹೇಗಿದ್ದುವು? ಈ ಸಂಗತಿಗಳನ್ನು ತಿಳಿಯುವುದು ಅವಶ್ಯಕ ವಾಗಿತ್ತು. ಅಲ್ಲದೆ ಅವಳಿಗೆ ಕಾರ್ಕೋಟಕ ವಿಷ ಹೇಗೆ ದೊರೆಯಿತು ? ಅದನ್ನು ಕೊಟ್ಟವರು ಯಾರು? ಇವುಗಳು ಪತ್ತೆಯಾಗುವುದೂ ಬೇಕಾಗಿತ್ತು. ಇವುಗಳು ಹೊರಪಡದ ಹೊರತು, ಗೋವಿಂದರಾಜನ ಮೇಲೆ ಆರೋಪ ನಿಲ್ಲು ವಂತೆ ಇರಲಿಲ್ಲ. ಬಹಿರಂಗ ವಿಚಾರಣೆಯಾಗಬೇಕಾದರೆ, ಎಲ್ಲ ಸಾಕ್ಷಿ, ಪರಾವೆಗಳು ಸಿದ್ಧವಾಗಿರಬೇಕು. ಕೃಷ್ಣದೇವರಾಯನು ಈ ಕೊಲೆಗೆ ಸಂಬಂಧಿಸಿದ ಪ್ರತಿಯೊಂದು ವಸ್ತು, ವ್ಯಕ್ತಿಗಳ ಶೋಧನೆಗಾಗಿ ಅಧಿಕ ಸಂಖ್ಯೆ ಯಲ್ಲಿ ಗೂಢಚಾರರನ್ನು ನಿಯಮಿಸಿದ. ಅವರು ಸಂಶಯಕ್ಕೆ ಅವಕಾಶ ಕೊಡುವ ಎಲ್ಲ ಸ್ಥಳಗಳನ್ನು ಅರಮನೆ, ಗುರುಮನೆ ಎಂದು ನೋಡದೆ ಕೊಲೆಪಾತಕರಿಗಾಗಿ ಶೋಧಿಸತೊಡಗಿದರು. ಈ ಸಂದರ್ಭದಲ್ಲಿ ದಾಸಿ ಚನ್ನೆಯನ್ನು ಕೆಲಸಕ್ಕೆ ಸೇರಿಸಿದ, ಅಂತಃಪುರದ ಪರಿಚಾರಕಿಯೊಬ್ಬಳು ಸಿಕ್ಕಿಬಿದ್ದಳು. ಅವಳ ಮೂಲಕ ತಿರುಮಲಾದೇವಿಯ ಅಂತಃಪುರದಲ್ಲಿದ್ದ ತಿಪ್ಪಾಜಿಯ ಹೆಸರು ಬಯಲಾಯಿತು. ತಿಪ್ಪಾಜಿಯನ್ನು ಬಂಧಿಸಲು ಗುಪ್ತಚಾರರು ತಿರುಮಲಾದೇವಿಯ ಅಂತಃಪುರವನ್ನು ಮುತ್ತಿದಾಗ, ಈ ವೇಳೆಗಾಗಲೇ ತಿಪ್ಪಾಜಿ ಗುಪ್ತಚಾರರ ಕಣ್ಣಿಗೆ ಮಣ್ಣೆರಚಿ ಅಲ್ಲಿಂದ ತಪ್ಪಿಸಿಕೊಂಡುಬಿಟ್ಟಿದ್ದಳು. ಅವಳು ಏನಾದಳು ಎಲ್ಲಿಗೆ ಹೋದಳೆಂಬುದು ಯಾರಿಗೂ ತಿಳಿದಿರಲಿಲ್ಲ. ಸ್ವಯಂ ತಿರುಮಲಾದೇವಿಗೂ ತಿಳಿದಿರಲಿಲ್ಲ. ಹೀಗಾಗಿ ತಿಪ್ಪಾಜಿಯ ಬಗ್ಗೆ ಎಲ್ಲರ ಸಂಶಯ ಕೇಂದ್ರೀಕೃತವಾಯಿತು. ಆದರೆ ಅವಳನ್ನು ಬಂಧಿಸಿ, ವಿಚಾರಣೆಗೆ ಗುರಿಪಡಿಸಲು ಅವಳ ನೆಲೆ ಯಾರಿಗೂ ಹತ್ತಲಿಲ್ಲ.

ಈ ಕೊಲೆಯಲ್ಲಿ ತಿಪ್ಪಾಜಿಯ ಹೆಸರು ಹೊರಬಿದ್ದ ಮೇಲೆ ಸ್ವಯಂ ಕೃಷ್ಣದೇವರಾಯನಿಗೆ ಈ ಬಗ್ಗೆ ಕುತೂಹಲ ಕೆರಳಿತು. ತಿಪ್ಪಾಜಿಯು ತನ್ನ ಮಗಳು ಕುಸುಮಾಜಿಯನ್ನು ಕಳೆದುಕೊಂಡ ಮೇಲೆ ತಿರುಮಲಾ ದೇವಿಯ ಅಂತಃಪುರವನ್ನು ಸೇರಿದುದೇಕೆ ? ಅಲ್ಲಿ ಅವಳಿಗೆ ಏನು ಕೆಲಸ ವಿತ್ತು ? ಎಂಬುದು ಕೃಷ್ಣದೇವರಾಯನ ಗಮನವನ್ನು ಸೆಳೆದಿತ್ತು. ಈ ಬಗ್ಗೆ ತಿರುಮಲಾದೇವಿಯು ಕೊಟ್ಟ ವಿವರಣೆ ಕೃಷ್ಣದೇವರಾಯನನ್ನು

ತೃಪ್ತಿಪಡಿಸದೆ ಹೋಗಿತ್ತು. ಈಗ ಕುಮಾರನ ಕೊಲೆಯಾದ ಮರು ದಿನವೇ ತಿಪ್ಪಾಜಿ ಅಂತಃಪುರದಿಂದ ಮಾಯವಾಗಿದ್ದಳು. ಅವಳ ಪಲಾಯನಕ್ಕೂ ಕುಮಾರನ ಕೊಲೆಗೂ ಏನೋ ಸಂಬಂಧವಿರಬೇಕೆಂದು ಕೃಷ್ಣದೇವರಾಯನು ಸಂದೇಹಪಟ್ಟ. ಅಲ್ಲದೆ ತಿಪ್ಪಾಜಿಯ ಆಕಸ್ಮಿಕ ನಿರ್ಗಮನದ ಬಗ್ಗೆ ತಿರುಮಲಾದೇವಿ ಏನೊಂದೂ ಹೇಳದವಳಾಗಿದ್ದಳು. ಅವಳಿಗೆ ತಿಪ್ಪಾಜಿಯ ಈಚಿನ ಚಲನವಲನಗಳು ತಿಳಿದಿರಲಿಲ್ಲ. ತಿಪ್ಪಾಜಿ ಈ ಕೆಲವು ದಿನಗಳಿಂದ ತುಂಬ ಯೋಚನೆಯಲ್ಲಿ ಇದ್ದಳಂತೆ. ಕುಮಾರನ ಕೊಲೆಯಾದ ಮರುದಿನ, ಯಾರಿಗೂ ಹೇಳದೆ ಕೇಳದೆ ಅವಳು ಎಲ್ಲಿಗೋ ಹೊರಟುಹೋದಳಂತೆ. ತಿರುಮಲಾದೇವಿಯನ್ನು ಹಲವು ಬಾರಿ ಪ್ರಶ್ನಿಸಿದರೂ ತಿಪ್ಪಾಜಿಯ ಬಗ್ಗೆ ಹೊರಪಟ್ಟುದು ಇದಿಷ್ಟೇ ಸಂಗತಿ. ಇದರಿಂದ ಯಾವ ಪ್ರಯೋಜನವಿರಲಿಲ್ಲ. ಅವಳನ್ನು ಪತ್ತೆಮಾಡಿದರೆ ಅವಳಿಂದ ಈ ಕೊಲೆಯ ಬಗೆ ಹೆಚ್ಚಿನ ಸಂಗತಿಗಳು ತಿಳಿಯಬಹುದೆಂದು ತರ್ಕಿಸಿದ. ಅವಳನ್ನು ಹಿಡಿದು ಕೊಟ್ಟವರಿಗೆ ಬಹುಮಾನವನ್ನು ಕೊಡುವುದಾಗಿ ಸಾರಲಾಯಿತು. ಅವಳನ್ನು ಪತ್ತೆಮಾಡಿ ತರಲು ನೂರಾರು ಜನ ಗೂಢಚಾರರು ನೇಮಿಸಲ್ಪಟ್ಟರು. ತಿರುಮಲಾದೇವಿಯ ಅಂತಃಪುರದಲ್ಲಿ ಸರ್ಪಕಾವಲು ಏರ್ಪಟ್ಟಿತು. ಮಹಾರಾಣಿ ತಿರುಮಲಾದೇವಿ ಇದ್ದಲ್ಲಿಯೇ ಬಂದಿಯಾದಳು.

ತಿಮ್ಮರಸ ಮತ್ತು ಗೋವಿಂದರಾಜರ ಮೇಲೆ ರಾಜದ್ರೋಹದ ಆರೋಪ ಹೊರಿಸಲ್ಪಟ್ಟಿದ್ದರೂ ಕೃಷ್ಣದೇವರಾಯನು ಅವರನ್ನು ರಾಜಕೀಯ ಖೈದಿಗಳಂತೆ ಗೌರವವಾಗಿ ನೋಡಿಕೊಳ್ಳಲು ಆಜ್ಞೆಮಾಡಿದ್ದ. ವಿಜಯಭದ್ರನು ಈ ತಂದೆಮಕ್ಕಳಿಬ್ಬರನ್ನು ಸೆರೆಮನೆಯಲ್ಲಿ ಅನ್ನ ನೀರು ಕೊಡದೆ ಚಿತ್ರಹಿಂಸೆ ಕೊಟ್ಟು ಅವರ ಮೇಲೆ ತನ್ನ ಸೇಡನ್ನು ತೀರಿಸಿಕೊಳ್ಳಬೇಕೆಂದಿದ್ದ. ಆದರೆ ರಾಯನ ಆಜ್ಞೆ ಅವನ ಎಲ್ಲ ಹಂಚಿಕೆಯನ್ನೂ ಬುಡ ಮೇಲು ಮಾಡಿತ್ತು. ಅವನು ನಿರ್ವಾಹವಿಲ್ಲದೆ ರಾಜಾಜ್ಞೆಯಂತೆ ನಡೆಯಬೇಕಾಗಿತ್ತು. ಸೆರೆಮನೆಯಲ್ಲಿ ಬಂದಿಗಳಿಗೆ ಎಲ್ಲ ಅನುಕೂಲಗಳನ್ನು ಕಲ್ಪಿಸಿಕೊಡಬೇಕಾಯಿತು.

ತಾತ್ಕಾಲಿಕವಾಗಿ ಈ ಬಂದಿಗಳನ್ನು ನೋಡಿಕೊಳ್ಳಲು ವಿಜಯಭದ್ರನೇ ಸೆರೆಮನೆಯ ಅಧಿಕಾರಿಯಾಗಿದ್ದ. ವಿಜಯಭದ್ರನು ಅಧಿಕಾರಿಯಾದರೆ,

ಸೆರೆಯಾಳುಗಳ ಹೆಚ್ಚಿನ ಸಂರಕ್ಷಣೆ ಉಂಟಾಗುವುದೆಂದು ರಾಯನ ಊಹಿಸಿದ್ದ. ಇದರಂತೆ ವಿಜಯಭದ್ರನೂ ಸೆರೆಯಾಳುಗಳ ಮೇಲೆ ಸಪ ಕಾವಲು ಹಾಕಿದ್ದ. ಪಹರೆಕಾವಲಿಗೆ ತನ್ನ ವಿಶ್ವಾಸಕ್ಕೆ ಪಾತ್ರರಾಗಿದ್ದ ಕೊರಮನಾಯಕ ಮತ್ತು ಭರಮನಾಯಕರನ್ನು ನೇಮಿಸಿದ್ದ. ಅವ ಹಗಲು ರಾತ್ರಿ ಎಡಬಿಡದೆ, ಪಹರೆಯವರ ಮೇಲ್ವಿಚಾರಣೆ ನಡಸುತ್ತಿದ್ದರು ಆದರೂ ದಿನಕ್ಕೊಂದು ಬಾರಿ ಬಂದು ಸೆರೆಯಾಳುಗಳನ್ನು ವಿಚಾರಿಸಿಕೊಂಡ ರಾಯನಿಗೆ ವರದಿ ಒಪ್ಪಿಸುತ್ತಿದ್ದ. ಅವರ ಮೇಲಿನ ಉಸ್ತುವಾರಿ ಅಷ ಬಿಗಿಯಾಗಿತ್ತು.

ಸೆರೆಮನೆಯಲ್ಲಿ ಎಲ್ಲ ಅನುಕೂಲತೆಗಳಿದ್ದರೂ ಗೋವಿಂದರಾಜನ ಮನಸ್ಸು ಮಾತ್ರ ಅಸ್ವಸ್ಥವಾಗಿತ್ತು. ಅವನಿಗೆ ನಿರಪರಾಧಿಗಳಾದ ತಮ್ಮನ ರಾಜದ್ರೋಹದ ಆಪಾದನೆಯ ಮೇಲೆ ಸೆರೆಯಲ್ಲಿಟ್ಟಿರುವುದು ಅಸಹನೀಯ ವಾಗಿತ್ತು. ತಮಗೂ ಕುಮಾರನ ಕೊಲೆಗೂ ಯಾವ ರೀತಿಯ ಸಂಬಂ ವಿಲ್ಲದಿದ್ದರೂ ತಮ್ಮನ್ನು ಸೆರೆಯಲ್ಲಿಟ್ಟು ಕೃಷ್ಣದೇವರಾಯನು ಬಹ ಅನ್ಯಾಯ ಮಾಡಿದ್ದಾನೆಂದು ರಾಯನ ಬಗ್ಗೆ ದ್ವೇಷ ಉಂಟಾಗಿತ್ತು ಬಹುಶಃ ತಮ್ಮ ವಿರೋಧಿಗಳಾದ ಕೊಂಡಮರಸಯ್ಯ ಮತ್ತು ವಿಜಂ ಭದ್ರರ ಮಾತುಗಳನ್ನು ಕೇಳಿಕೊಂಡು ತಮ್ಮ ಮೇಲೆ ಈ ಕೊಲೆಯ ಆರೋ ಹೊರೆಸಿರಬಹುದು. ಆದರೆ ಸಾಮ್ರಾಜ್ಯವನ್ನು ಏಕನಿಷ್ಠರಾಗಿ ಸೇವಿ ತ್ತಿದ್ದ ತಮ್ಮ ನಡತೆಯ ವಿಷಯದಲ್ಲಿ ರಾಯನು ಹೇಳಿಕೆಯ ಮಾತುಗಳಿ ಬೆಲೆ ಕೊಟ್ಟು ಶಂಕಿಸಿ, ಈಗ ಮಿಥ್ಯಾರೋಪ ಹೊರಿಸಿ ಸೆರೆಮನೆಯಲ್ಲಿ ಇ ವಂತಾದರೆ ರಾಯನಿಗೆ ತಮ್ಮ ನಿಷ್ಠೆಯ ವಿಷಯದಲ್ಲಿ ಸಂಶಯ ಬಂದಿರ ಬೇಕು. ತಾವು ಕುಮಾರರ ಪಟ್ಟಾಭಿಷೇಕವನ್ನು ವಿರೋಧಿಸಿದ ಮಾತ್ರ ತಮ್ಮನ್ನು ವಿರೋಧ ಪಕ್ಷಕ್ಕೆ ಸೇರಿಸಿ, ವಿಶ್ವಾಸ ಘಾತುಕ ಕೆಲಸ ಪ್ರೇರೇಪಿಸುವ ಹಗೆಗಳೆಂದೇ ತಿಳಿಯಬೇಕೇ ? ಕೃಷ್ಣದೇವರಾಯನ ವಿಚಾರ ಕಣ್ಣಿಗೇಕೆ ಪರೆ ಮುಸುಕಿತು ?

ಹಿಂದೆ ಕೃಷ್ಣದೇವರಾಯನೆಂದರೆ ಧರ್ಮಾವತಾರಿಯಾಗಿದ್ದ. ಅವ ರಾಜ್ಯದಲ್ಲಿ ಅಧರ್ಮಕ್ಕೆ, ಅನ್ಯಾಯಕ್ಕೆ ಎಡೆ ಇರಲಿಲ್ಲ. ಬಡವರು ಬಲ್ಲಿ ರೆಂದು ನೋಡದೆ ಎಲ್ಲರಿಗೂ ನಿಷ್ಪಕ್ಷಪಾತವಾದ ನ್ಯಾಯದಾನವಾ

ತ್ತಿತ್ತು. ಆದರೆ ಈಗ ರಾಯನು ತನ್ನ ಮಡದಿಯ ಮೋಹಪಂಜರದಲ್ಲಿ ಸಿಲುಕಿ, ಅವಳ ಮಗನಿಗೆ ಪಟ್ಟಕಟ್ಟಲು ಸಿಂಹಾಸನವನ್ನೇ ತ್ಯಾಗಮಾಡಿದ್ದ. ತಾನು ಮಾಡುತ್ತಿರುವ ಕೃತ್ಯ ಅಕೃತ್ಯ ಅಧರ್ಮವೆಂದು ರಾಯನ ಮನಸ್ಸಿಗೆ ಒಮ್ಮೆಯಾದರೂ ಬಂದಿರಲಿಲ್ಲ. ಈಗ ಕುಮಾರನ ಮರಣಾನಂತರ, ಅವನ ಕೊಲೆಯಲ್ಲಿ ತಮ್ಮ ಭಾಗವಿದೆ ಎಂದು, ಮಿಥ್ಯಾರೋಪಣೆ ಹೊರಿಸಿ, ತಮ್ಮನ್ನು ಶಿಕ್ಷಿಸಲು ರಾಯನು ಮುಂದಾಗಿದ್ದ ! ತಾವು ಅಭಿಪ್ರಾಯ ಭೇದ ವ್ಯಕ್ತಪಡಿಸಿದುದೇ ಇದಕ್ಕೆಲ್ಲ ಕಾರಣ. ಹಿಂದೆ, ಕೃಷ್ಣದೇವರಾಯನು ತಿಮ್ಮರಸನನ್ನು ಕೇಳದೆ, ಅವನ ಸಲಹೆಯನ್ನು ತೆಗೆದುಕೊಳ್ಳದೆ ಒಂದು ಸಣ್ಣ ಕೆಲಸವನ್ನೂ ಮಾಡುತ್ತಿರಲಿಲ್ಲ. ಈಗ ಅವನ ಹಿತೈಷಿಗಳೆಂದರೆ ಕೊಂಡಮರಸಯ್ಯ ಮತ್ತು ವಿಜಯಭದ್ರರು ! ಇವರ ಕಾರಾಗಾರ ದಿಂದಲೇ ತಾವು ನಿರಪರಾಧಿಗಳಾಗಿದ್ದರೂ ಸೆರೆಮನೆಯಲ್ಲಿ ಕೊಳೆಯುತ್ತಾ ಬಿದ್ದಿರಬೇಕಾಗಿರುವುದು. ತಮ್ಮ ಬಹಿರಂಗ ವಿಚಾರಣೆಯಾಗುವ ತನಕ ತಾವು ಹೀಗೆ ಕೊಳೆಯುತ್ತಿರಬೇಕು. ಅದೆಷ್ಟು ದಿನ ಹೀಗೆ ಕೊಳೆಯುತ್ತಾ ಬಿದ್ದಿರಬೇಕೋ ? ಎಂದು ತುಂಬ ರೋಸಿಹೋಗುತ್ತಿತ್ತು ಗೋವಿಂದ ರಾಜನ ಮನಸ್ಸು.

ಇಲ್ಲಿ ವಿಚಾರಣೆಯಿಲ್ಲದೆ ಕೊಳೆಯುತ್ತ ಬಿದ್ದಿರುವ ಬದಲು ತಾವು ಇಲ್ಲಿಂದ ತಪ್ಪಿಸಿಕೊಂಡು ಹೊರಗೆ ಬಂದು ಪ್ರಭುಗಳಿಗೆ ತಾವು ನಿರಪರಾಧಿ ಗಳೆಂದು ಏಕೆ ಮಂದಟ್ಟು ಮಾಡಿಕೊಡಬಾರದು ? ಎಂದು ಒಮ್ಮೊಮ್ಮೆ ಅನಿಸುತ್ತಿತ್ತು. ಆಗ ಸೆರೆಮನೆಯಿಂದ ತಪ್ಪಿಸಿಕೊಂಡು ಹೋಗುವ ಮನ ಸ್ಸಾಗುತ್ತಿತ್ತು. ಇಂಥ ಒಂದು ಹೊತ್ತಿನಲ್ಲಿ ಇದೇ ಮಾತನ್ನು ತಿಮ್ಮರಸನ ಮುಂದೆ ಹೇಳಿದಾಗ, ತಿಮ್ಮರಸನು ಕೊಟ್ಟ ಉತ್ತರದಿಂದ ಗೋವಿಂದ ರಾಜನಿಗೆ ತುಂಬ ಆಶಾಭಂಗವೇ ಆಗಿತ್ತು. ತಿಮ್ಮರಸನು ಹೇಳಿದ್ದ. "ನಾವು ರಾಜಋಣವನ್ನು ತಿನ್ನುತ್ತಿದ್ದೇವೆ. ರಾಜಾಜ್ಞೆಯನ್ನು ಉಲ್ಲಂಘಿಸಿ ನಡೆಯುವ ಹಕ್ಕಿಲ್ಲ ನಮಗೆ. ಮೊದಲು ರಾಜಶಾಸನಕ್ಕೆ ತಲೆಬಾಗಿ, ಅನಂತರ ವಿಚಾರಣೆಯಲ್ಲಿ ನಮ್ಮ ಹೇಳಿಕೆ ಏನಾದರೂ ಇದ್ದರೆ ಅದನ್ನು ಪ್ರಭುಗಳ ಸಮ್ಮುಖದಲ್ಲಿ ಮಂಡಿಸಬೇಕಾದುದು ನಮ್ಮ ಧರ್ಮ. ನಾವು ಈಗ ಸೆರೆಮನೆ ಯಿಂದ ತಪ್ಪಿಸಿಕೊಂಡು ಹೋದರೆ ಏನನ್ನೂ ಸಾಧಿಸಿದಂತೆ ಆಗುವುದಿಲ್ಲ.

ಇದರಿಂದ ಮತ್ತೊಂದು ಅಪರಾಧಮಾಡಿದಂತೆ ಆಗುತ್ತದೆಯೇ ಹೊರತು ಬೇರೆಯಲ್ಲ. ಸೆರೆಯಿಂದ ತಪ್ಪಿಸಿಕೊಂಡು ಹೋಗುವುದು. ಶಿಕ್ಷಾರ್ಹವಾದ ಅಪರಾಧವೇ. ಆದುದರಿಂದ ನಮ್ಮ ಮೇಲಿನ ಆರೋಪಣೆಗಳು ಸತ್ಯವೋ ಮಿಥ್ಯವೋ. ಇದನ್ನು ನಿರ್ಣಯಿಸಿ ತೀರ್ಪು ಕೊಡುವ ಅಧಿಕಾರವನ್ನು ಧರ್ಮ ದೇವತೆಗೆ ಒಪ್ಪಿಸಿ, ನಾವು ರಾಜಾಜ್ಞೆಯಂತೆ ಬಂಧನದಲ್ಲಿ ಇರುವುದೇ ನಮ್ಮ ಕರ್ತವ್ಯ.

ಈ ಎಲ್ಲ ಮಾತುಗಳನ್ನು ಕೇಳಿದ ಮೇಲೆ ತನಗೂ ತನ್ನ ತಂದೆಗೂ ರಾಜನಿಗೂ ಹಾಗೂ ಕರ್ತವ್ಯದ ಬಗ್ಗೆ ಅಭಿಪ್ರಾಯ ಭೇದವಿದೆ ಎಂದು ಅರಿತುಕೊಂಡು ತಿಮ್ಮರಸನೊಂದಿಗೆ ಹೆಚ್ಚಿನ ಮಾತುಕಥೆ ನಡಸದೆ ಸುಮ್ಮ ನಾದ ಗೋವಿಂದರಾಜ.

ಆದರೂ ಅವನಿಗೆ ಸೆರೆಮನೆಯಲ್ಲಿ ಇರುವುದಕ್ಕಿಂತಲೂ ಸೆರೆಮನೆ ಯಿಂದ ತಪ್ಪಿಸಿಕೊಂಡು ಹೋದರೆ ಹೆಚ್ಚಿನ ಕೆಲಸ ಸಾಧಿಸಬಹುದೆಂಬ ನಂಬಿಕೆ ಇದ್ದೇ ಇತ್ತು. ರಾಯನು ಅನ್ಯಾಯವಾಗಿ ಅಕಾರಣವಾಗಿ ತಮ್ಮನ್ನು ಸೆರೆಯಲ್ಲಿ ಇಟ್ಟಿರುವುದರ ಪ್ರತಿಭಟನೆಗಾಗಿ ತಾನು ಸೆರೆಯಿಂದ ತಪ್ಪಿಸಿಕೊಳ್ಳಲೇಬೇಕು. ಸೆರೆಯಿಂದ ಮುಕ್ತನಾದ ಮೇಲೆ ತಮ್ಮ ಮೇಲಿನ ಕೊಲೆಯ ಆರೋಪ ನಿರಾಧಾರವೆಂದು ಮನಗಾಣುವಂತೆ ಮಾಡ ಬೇಕು, ಎಂದು ಸಂಕಲ್ಪ ಮಾಡಿಕೊಂಡ.

ಇದನ್ನು ಕಾರ್ಯಗತ ಮಾಡಲು ಅನುಕೂಲ ಸಂದರ್ಭಕ್ಕಾಗಿ ಎದುರು ನೋಡುತ್ತಿದ್ದ.

ಸೆರೆಮನೆಯಿಂದ ತಪ್ಪಿಸಿಕೊಳ್ಳುವುದು ಸುಲಭದ ಕೆಲಸವಾಗಿರಲಿಲ್ಲ. ಸರೆಮನೆಯಲ್ಲಿ ಗೋವಿಂದರಾಜನ ಕೈಕಾಲುಗಳಿಗೆ ಸಂಕೋಲೆಗಳನ್ನು ಹಾಕಿರದಿದ್ದರೂ ಆ ಸೆರೆಮನೆ ಬಹಳ ಭದ್ರವಾಗಿತ್ತು. ಅಲ್ಲದೆ ತಮ್ಮ ಮೇಲೆ ಉಗ್ರವಾದ ಕಾವಲು ಇತ್ತು. ಕಾವಲು ಕಾಯುವ ಪಹರೆಯವರು ಮೂರುಮೂರು ತಾಸುಗಳಿಗೆ ಬದಲಾಗುತ್ತಿದ್ದರು. ಹಗಲೂರಾತ್ರಿ ಕೊರಮ ನಾಯಕ ಮತ್ತು ಭರಮನಾಯಕ ಇವರು ಎಚ್ಚರವಹಿಸಿ ಕಾಯುತ್ತಿದ್ದರು. ಊಟತಿಂಡಿಗಳಿಗೆ ಮಾತ್ರವೇ ಸೆರೆಮನೆಯ ಕೋಣೆಯ ಬಾಗಿಲು ತೆರೆ ಯುತ್ತಿದ್ದುದು. ಊಟವನ್ನು ದಾಸಿ ತಂದಿಟ್ಟು ಹೊರಟುಹೋದ ಮೇಲೆ

ಮತ್ತೆ ಅದು ತೆರೆಯಲ್ಪಡುತ್ತಿದ್ದುದು ರಾತ್ರಿ ಎಂಟುಗಂಟೆಗೇ. ಎರಡು ಬಾರಿ ವಿನಾ ಉಳಿದ ವೇಳೆಯಲ್ಲಿ ಸೆರೆಮನೆಯ ಬಾಗಿಲುಗಳಿಗೆ ಬೀಗಹಾಕಲ್ಪಟ್ಟು ಅದರ ಕೀಲಿಯ ಕೈ ವಿಜಯಭದ್ರನ ಬಳಿ ಇರುತ್ತಿತ್ತು. ಅದು ಅಪ್ಪಿ ತಪ್ಪಿ ಕೊರಮನಾಯಕ ಮತ್ತು ಭರಮನಾಯಕರ ಬಳಿ ಇರುತ್ತಿದ್ದುದೇ ಅಪರೂಪ. ಹೀಗಿರುವಲ್ಲಿ ಈ ಸೆರೆಮನೆಯಿಂದ ತಪ್ಪಿಸಿಕೊಂಡು ಹೋಗುವುದು ಅಸಾಧ್ಯವೆಂದೇ ಅನಿಸಿತು ಗೋವಿಂದರಾಜನಿಗೆ.

ಆದರೂ ಅವನು ಧೃತಿಗೆಡಲಿಲ್ಲ. ದಿನವಿಡೀ ಕುಳಿತು ಸೆರೆಮನೆಯಿಂದ ಪಾರಾಗುವ ದಾರಿಗಾಗಿ ಆಲೋಚಿಸುತ್ತಿದ್ದ. ಎಷ್ಟು ಆಲೋಚಿಸಿದರೂ ಇಲ್ಲಿಂದ ಪಾರಾಗುವ ದಾರಿ ಹೊಳೆಯಲಿಲ್ಲ. ಪಹರೆಯವರನ್ನು ಯಾವುದಾದರೂ ಪ್ರಲೋಭಕ್ಕೆ ಒಳಪಡಿಸಿ ಕೆಲಸ ಸಾಧಿಸಲು, ಪಹರೆಯವರು ಸೆರೆಯಾಳುಗಳೊಂದಿಗೆ ಮಾತನಾಡಬಾರದೆಂದು ಕಟ್ಟಪ್ಪಣೆಯಾಗಿತ್ತು. ಹೀಗಾಗಿ ಯಾರೂ ಸೆರೆಯಾಳುಗಳೊಂದಿಗೆ ಮಾತನಾಡುತ್ತಿರಲಿಲ್ಲ. ಇನ್ನು ಅವರನ್ನು ಪ್ರಲೋಭಕ್ಕೆ ಒಳಪಡಿಸಿ, ಅವರ ನೆರವಿನಿಂದ ಸೆರೆಯಿಂದ ತಪ್ಪಿಸಿಕೊಳ್ಳುವ ಮಾತಂತೂ ದೂರ ಉಳಿಯಿತು. ಆದರೂ ಪ್ರಯತ್ನ ಶೀಲತೆಯಲ್ಲಿ ನಂಬಿಕೆ ಇರಿಸಿ, ಪಹರೆಯವರೊಡನೆ ಗೆಳೆತನ ಬೆಳೆಸಲು ಪ್ರಯತ್ನಿಸ ತೊಡಗಿದ.

ಪಹರೆಯನ್ನು ಕಾಯುತ್ತಿದ್ದವರೆಲ್ಲ ವಿಜಯಭದ್ರನ ನಂಬುಗೆಯ ಸೇವಕರೇ ಆಗಿದ್ದರು. ಪ್ರತಿ ಮೂರುಗಂಟೆಗಳಿಗೂ ಪಹರೆಯು ಬದಲಾಯಿಸಲ್ಪಡುತ್ತಿತ್ತು, ಒಮ್ಮೆ ಇಬ್ಬಿಬ್ಬರಂತೆ. ಅವರ ಮೇಲೆ ಉಸ್ತುವಾರಿ ನೋಡಿಕೊಳ್ಳಲು ಹಗಲು ಕೊರಮನಾಯಕನಾದರೆ, ರಾತ್ರಿ ಭರಮನಾಯಕ. ಈ ಜೇಟಿನಾಯಿಗೆ ಕಣ್ಣು ತಪ್ಪಿಸಿ, ಪಹರೆಯವರ ಸಖ್ಯ ಸಂಪಾದಿಸುವುದು ದುಸ್ತರವೇ ಆಯಿತು. ಆದರೂ ಗೋವಿಂದರಾಜನು ನಿರಾಶೆ ಹೊಂದಲಿಲ್ಲ. ಪಹರೆಯವರಲ್ಲಿ ಯಾರೊಬ್ಬರಿಗಾದರೂ ತನ್ನ ಬಗ್ಗೆ ಬೇಡ, ತಿಮ್ಮರಸನ ಬಗ್ಗೆ ಪ್ರೀತಿಗೌರವಗಳು ಇರಲಿಕ್ಕೇ ಬೇಕು· ಅಂತಹ ವ್ಯಕ್ತಿಯ ನೆರವಿನಿಂದ ತಾನು ಕಾರ್ಯಸಾಧಿಸಬೇಕೆಂದು ಪಹರೆಯಲ್ಲಿ ನಿಲ್ಲುವ ಪ್ರತಿಯೊಬ್ಬರ ಸ್ವಭಾವಪರಿಚಯ ಮಾಡಿಕೊಳ್ಳಲು ತೊಡಗಿದ. ಎಲ್ಲರ ಪೈಕಿ ರಹಮತ್ ಖಾನ್ ಎನ್ನುವ ಪಹರೆಯವನ ಮೇಲೆ ಗೋವಿಂದ

ರಾಜನ ಗಮನ ಹರಿಯಿತು.

ರಹಮತ್‌ಖಾನನಿಗೆ ಸುಮಾರು ನಲವತ್ತೈದು ಐವತ್ತು ವರ್ಷ ವಯಸ್ಸಾಗಿತ್ತು. ಅವನು ಶ್ರದ್ಧಾವಂತ ಮಹಮ್ಮದೀಯನೆಂದು ಎತ್ತಿ ತೋರಿಸಲು ಅವನು ಬೆಳಸಿದ್ದ ದಾಡಿಯೇ ನಿದರ್ಶನ. ಅವನ ಮುಖದಲ್ಲಿ ಒಂದು ಬಗೆಯ ಸಾತ್ವಿಕ ತೇಜಸ್ಸು ಇತ್ತು. ಕಣ್ಣುಗಳು ಮಿಂಚುತ್ತಿದ್ದುವು. ಹಿಂದೂ ಸರದಾರರ ಕೈಕೆಳಗೆ, ಸೆರಮನೆಯ ಪಹರೆ ಕಾಯುವ ಕೆಲಸಕ್ಕೆ ಒಬ್ಬ ಮಹಮ್ಮದೀಯನು ನಿಯೋಜಿಸಲ್ಪಟ್ಟಿರಬೇಕಾದರೆ ಅವನ ಬಗ್ಗೆ ಮೇಲಧಿಕಾರಿಗಳಿಗೆ ಎಂತಹ ಸದ್ಭಾವನೆ ಇದ್ದಿರಬೇಕು ? ಎಷ್ಟು ನಂಬಿಕೆ ಇರಬೇಕು ?

ಅವನು ಮಹಮ್ಮದೀಯನಾದರೂ ಹಿಂದೂಗಳೊಡನೆ ಅವನು ನಡೆದುಕೊಳ್ಳುತ್ತಿದ್ದ ರೀತಿಯನ್ನು ಕಂಡು ಗೋವಿಂದರಾಜ ಮಾರುಹೋಗಿದ್ದ. ಅವನ ಬಾಯಲ್ಲಿ ಒಂದು ಗಟ್ಟಿಯಾದ ನಿಷ್ಠುರದ ಮಾತೂ ಬರುತ್ತಿರಲಿಲ್ಲ. ಉಳಿದ ಗೆಳೆಯರು ಅವನ ಗಡ್ಡವನ್ನು ನೋಡಿ ಹಾಸ್ಯಮಾಡಿದರೆ, ಅವನು ಸುಮ್ಮನೆ ನಕ್ಕುಬಿಡುತ್ತಿದ್ದನೇ ಹೊರತು ಅವರ ಮೇಲೆ ಸಿಟ್ಟುಮಾಡುತ್ತಿರಲಿಲ್ಲ. ತನ್ನ ಹಂಚಿಕೆಯನ್ನು ಕಾರ್ಯಗತ ಮಾಡಿಕೊಳ್ಳಲು ಇವನಿಂದ ನೆರವಾದೀತು, ಎಂದು ಗೋವಿಂದರಾಜ ಎಷ್ಟೋ ಬಾರಿ ಯೋಚಿಸುತ್ತಿದ್ದ.

ಹೀಗೆ ಯೋಚಿಸಲು ಕಾರಣವಿತ್ತು. ರಹಮತ್‌ಖಾನನ ಹಾವಭಾವಗಳಿಂದ ಅವನಿಗೆ ತಮ್ಮ ಬಗ್ಗೆ ಆದರ ಅಭಿಮಾನಗಳು ಇರುವುವೆಂದು ತಿಳಿದಿತ್ತು. ಅವನಿಗೆ ತಿಮ್ಮರಸನಲ್ಲಿ ಅಪಾರ ಗೌರವವಿತ್ತು. ರಹಮತ್‌ಖಾನನು ಹಿಂದೆ ಸೈನದಲ್ಲಿ ಇದ್ದಿರಲಿಲ್ಲವೆ ? ರಾಯಚೂರು ಮುತ್ತಿಗೆಯಲ್ಲಿ ಅವನೂ ಭಾಗವಹಿಸಿದ್ದ. ಆಗ ತಿಮ್ಮರಸನು ಸಕಲ ಸೈನ್ಯಗಳಿಗೆ ಮಹಾದಂಡನಾಯಕ. ಅವನ ನೇತೃತ್ವದಲ್ಲಿ ನಡೆದ ಮುತ್ತಿಗೆ ಯಶಸ್ವಿಯಾಗಿತ್ತು. ಆ ಯುದ್ಧದಲ್ಲೇ ರಹಮತ್‌ಖಾನನು ಗಾಯಗೊಂಡು ಮಲಗಿದುದು. ಆಗ ತಿಮ್ಮರಸನು ಅವನಿಗೆ ವೀರೋಚಿತವಾದ ಮರ್ಯಾದೆಮಾಡಿ, ವಿಶ್ರಾಂತಿಯನ್ನು ಅನುಭವಿಸಲು ಊರಿಗೆ ಕಳುಹಿಕೊಟ್ಟಿದ್ದ. ಗಾಯಗಳು ವಾಸಿಯಾದ ಮೇಲೆ, ಅವನ ಕಾಲು ಕುಂಟಾಗಿ ಉಳಿದುಬಿಟ್ಟಿದ್ದರಿಂದ, ಸೈನ್ಯಕ್ಕೆ ಮತ್ತೆ ಸೇರುವ ಹಾಗೆ ಇರಲಿಲ್ಲ. ಅವನು ಸೆರಮನೆಯ ಕಾವಲುಗಾರನಾಗಿ ಕೆಲಸಕ್ಕೆ ಸೇರಿದ್ದ. ಅವನು ತುಂಬ ನಂಬಿಕೆಯ ಕಾವಲುಗಾರನೆಂದು

ಹೆಸರು ಪಡೆದಿದ್ದುದರಿಂದ ವಿಜಯಭದ್ರನು ಅವನನ್ನು ತಿಮ್ಮರಸ, ಗೋವಿಂದ ರಾಜರನ್ನು ಕಾಯಲು ನೇಮಿಸಿದ್ದ.

ಒಂದು ದಿನ ಗೋವಿಂದರಾಜ ಯಾವುದೋ ವಿಷಯದಲ್ಲಿ ಮನಸ್ಸು ಕೊಟ್ಟು ಧ್ಯಾನಮಗ್ನನಾಗಿರುವಾಗ ರಹಮತ್‌ಖಾನನು ತನ್ನನ್ನೇ ಎವೆ ಇಕ್ಕದೆ ನೋಡುತ್ತಿರುವುದು ಕಾಣಿಸಿತು. ಅವನು ತನ್ನನ್ನು ನೋಡುವ ರೀತಿಯಲ್ಲಿ ತನ್ನೊಡನೆ ಅವನು ಏನನ್ನೋ ಮಾತನಾಡಲು ಬಯಸುತ್ತಿರುವ ನೆಂದು ತಿಳಿಯಿತು. ಗೋವಿಂದರಾಜನು ಸಮಯ ಸಾಧಿಸಿ ಸೆರೆಮನೆಯ ಬಾಗಿಲ ಬಳಿಗೆ ಬಂದಾಗ, ರಹಮತ್‌ಖಾನನು ಪಹರೆ ಕಾಯುತ್ತಿರುವವ ನಂತೆ ಸೋಗುಹಾಕಿ, ಬಾಗಿಲ ಬಳಿ ಬಂದು, ಮೆಲ್ಲಗೆ ಹೇಳಿದ,"ಮಹಾರಾಜ್, ನಿಮಗೆ ನಮ್ಮ ಬೀಬಿಯ ಪರಿಚಯವಿದೆಯೆ ?" ಈ ಪ್ರಶ್ನೆಯನ್ನು ಕೇಳಿ ಗೋವಿಂದರಾಜನು ತಬ್ಬಿಬ್ಬಾದ. 'ಬೀಬಿ!' ಎಲ್ಲೋ ಕೇಳಿದ್ದ ನೆನಪು. ಅವಳು ಯಾರು ಅವಳನ್ನು ತಾನು ಎಲ್ಲಿ ನೋಡಿದ್ದೇನೆ ಎಂಬುದು ಅವನಿಗೆ ತಿಳಿಯಲಿಲ್ಲ! ಸುಮ್ಮನೆ ಮಿಕಮಿಕನೆ ನೋಡುತ್ತಾ ನಿಂತ ಅವನನ್ನು ಕಂಡು ರಹಮತ್‌ಖಾನನೇ ಹೇಳಿದ: "ಬೀಬಿ ನನ್ನ ಮಗಳು !" ಎಂದು ನಕ್ಕ. ಈ ವೇಳೆಗೆ ಅತ್ತ ಕಡೆ ಬೇರೆ ಯಾರೋ ಬರುತ್ತಿದ್ದುದರಿಂದ ಸರ್ರನೆ ಮಾತನ್ನು ಅಷ್ಟಕ್ಕೇ ನಿಲ್ಲಿಸಿ ರಹಮತ್‌ಖಾನನು ಪಹರೆ ಕಾಯುತ್ತಾ ನಿಂತ.

ಈ ಅವಧಿಯಲ್ಲಿ ಗೋವಿಂದರಾಜನಿಗೆ ಬೀಬಿಯ ವಿಷಯದಲ್ಲಿ ಆಲೋಚನೆ ಮಾಡಲು ವೇಳೆ ದೊರೆತಿತ್ತು. ಬೀಬಿ ಈತನ ಮಗಳಂತೆ ; ಅವಳನ್ನು ತಾನು ಎಲ್ಲಿ ನೋಡಿದ್ದೇನೆ ? ರಹಮತ್‌ಖಾನ್ ತನ್ನ ಮುಂದೆ ಈ ಬೀಬಿಯ ಪರಿಚಯ ಹೇಳಬೇಕಾದರೆ ಅವಳಿಗೆ ತನ್ನ ಪರಿಚಯವಿರಲೇ ಬೇಕು. ತನ್ನ ವಿಷಯವಾಗಿ ಅವಳು ತಂದೆಗೆ ಏನನ್ನೋ ಹೇಳಿರಬೇಕು. ಬೀಬಿ ? ಯಾವ ಬೀಬಿ ? ಎಂದು ಆಲೋಚಿಸುತ್ತಿರುವಂತೆ, ತಟ್ಟನೆ ಅವನಿಗೆ ಕುಸುಮಾಜಿಯ ನೆನಪಾಯಿತು. ಕುಸುಮಾಜಿಯ ನೆನಪಿನೊಂದಿಗೆ,ಬೀಬಿಯ ನೆನಪೂ ಆಯಿತು. ಅಂದು ಕುಸುಮಾಜಿಯ ತಲೆಯನ್ನು ಕಾಯಲು ತನ್ನ ತಲೆಯನ್ನೇ ಬಲಿಗೊಟ್ಟ ಮಸ್ತಾನ್‌ಖಾನನ ಪತ್ನಿ ಬೀಬಿ ಎಂದು ತಟ್ಟನೆ ಜ್ಞಾಪಕಕ್ಕೆ ಬಂದಿತು. ಓ, ಆ ಆತ್ಮೀಯ ಬಂಧು ! ತನ್ನ ಆಶ್ರಿತರ ಪ್ರಾಣ ಉಳಿಸಲು ತನ್ನ ಸರ್ವಸ್ವವನ್ನೂ ಬಲಿಗೊಟ್ಟ ಹುತಾತ್ಮಳು ! ಆ

ಬೀಬಿ ! ಇವಳ ಪರಿಚಯ ತಾನು ಈ ಜನ್ಮದಲ್ಲಿ ಮರೆಯಲು ಸಾಧ್ಯವೇ ? ಅವಳ ಉಪಕಾರವನ್ನು ಈ ಜನ್ಮದಲ್ಲಿ ತೀರಿಸಲು ಸಾಧ್ಯವೇ ? ಹಾಗಾದರೆ ಆ ಬೀಬಿಯ ತಂದೆ ಈ ರಹಮತ್ ಖಾನ್ ?....

ಗೋವಿಂದರಾಜನಿಗೆ ಬೀಬಿಯನ್ನು ಒಂದೆರಡು ಬಾರಿ ನೋಡಿದ್ದ ನೆನಪಿತ್ತು. ಆದರೆ ತನ್ನ ಗಂಡ ತೀರಿಹೋದ ಮೇಲೆ ಅವಳು ತನ್ನ ತಂದೆಯ ಮನೆಯನ್ನು ಸೇರಿಬಿಟ್ಟ ಮೇಲೆ ಅವಳನ್ನು ಮತ್ತೆ ನೋಡಿರಲಿಲ್ಲ. ಹೀಗಾಗಿ ಬೀಬಿಯ ನೆನಪು ತಟ್ಟನೆ ಬರಲಿಲ್ಲ. ಈಗ ಬೀಬಿಯನ್ನು ನೆನೆದೊಡನೆಯೇ ಅವಳ ಬೆನ್ನಹಿಂದೆ, ಅವನಿಗೆ ಪ್ರಿಯವಾಗಿದ್ದ ಅನೇಕ ಮಧುರಸ್ಮೃತಿಗಳು ಸ್ಮರಣೆಗೆ ಬಂದುವು. ಅಂತಲೇ ಅನೇಕ ದುಃಖದ ಸಂಗತಿಗಳೂ ನೆನಪಾದುವು. ಕುಸುಮಾಜಿಯ ಪ್ರಯಾಣ, ಅವಳು ವಿಜಯಭದ್ರನ ಕೈಗೆ ಸಿಕ್ಕಿದುದು, ಅವಳು ಕಡೇ ತನಕ ತನ್ನ ಪ್ರೀತಿಯ ಪವಿತ್ರತೆಯನ್ನು ಕಾಪಾಡಿಕೊಂಡುದು, ಅದಕ್ಕಾಗಿಯೇ ಆತ್ಮಹತ್ಯೆಮಾಡಿಕೊಂಡುದು ಎಲ್ಲವೂ ನೆನಪಾಗಿ, ತನ್ನೀ ಪ್ರೇಮ ಪುತ್ಥಳಿಯ ನಾಶಕ್ಕೆ ಕಾರಣನಾಗಿದ್ದ ವಿಜಯಭದ್ರನ ಮೇಲೆ ದ್ವೇಷ ಹೆಪ್ಪುಗಟ್ಟಿ ಮೈಯೆಲ್ಲ ಉರಿಯಿತು. ಈಗ ಅದೇ ವಿಜಯಭದ್ರ ತಮ್ಮನ್ನು ಸೆರೆಯಲ್ಲಿ ಇಟ್ಟು ತನ್ನ ದ್ವೇಷವನ್ನು ಸಾಧಿಸಿಕೊಳ್ಳುತ್ತಿದ್ದಾನೆ! ತಾನು ವೀರನಾಗಿದ್ದರೂ ಈಗ ನಿಸ್ಸಹಾಯನಾಗಿ ಹೇಡಿಯಂತೆ ಕುಳಿತಿರುವ ಪ್ರಸಂಗ ಬಂದುದಕ್ಕಾಗಿ ತನ್ನ ದುರ್ವಿಧಿಯನ್ನು ಹಳಿದುಕೊಂಡ. ಈ ಸೆರೆಮನೆಯಿಂದ ತಾನು ತಪ್ಪಿಸಿಕೊಂಡು ಹೋಗಲು ಸಾಧ್ಯವಾದರೆ, ವಿಜಯಭದ್ರನ ಮೇಲೆ ಸೇಡು ತೀರಿಸಿಕೊಳ್ಳಬಹುದು. ಆದರೆ ಸೆರೆಯಿಂದ ತಪ್ಪಿಸಿಕೊಂಡು ಹೋಗುವ ಬಗೆ ?

ಆದರೂ ಅವನಿಗೆ ನಿರಾಶೆಯಾಗಲಿಲ್ಲ. ರಹಮತ್ ಖಾನನ ಮೂಲಕ ತನಗೆ ಬಿಡುಗಡೆ ದೊರೆಯಬಹುದೇನೋ ಎನ್ನುವ ಆಸೆಯಿಂದ ಅವನ ಸ್ನೇಹವನ್ನು ಹೆಚ್ಚು ಬೆಳೆಸುತ್ತ ಹೊರಟ.

ಕೆಲವು ದಿನಗಳ ತನಕ ರಹಮತ್ ಖಾನನೊಂದಿಗೆ ಯಾವ ಸಂಭಾಷಣೆ ಮಾಡಲೂ ಅನುವು ದೊರೆಯಲಿಲ್ಲ. ಒಂದು ದಿನ ತನ್ನ ಪಹರೆ ಮುಗಿಸಿಕೊಂಡು ಹೋಗುತ್ತಾ ರಹಮತ್ ಖಾನನು, ಸಮಯಸಾಧಿಸಿ ಹೇಳಿದ: “ನಮ್ಮ ಬೀಬಿ ನಿಮ್ಮ ವಿಷಯವನ್ನೆಲ್ಲ ತಿಳಿಸಿದ್ದಾಳೆ. ಖುದಾ ನಿಮಗೆ

ಒಳ್ಳೆಯದನ್ನು ಮಾಡಲಿ. ನಿಮಗೆ ನನ್ನಿಂದ ಏನಾದರೂ ಸಹಾಯ ಬೇಕಾದರೆ ಹೇಳಿ, ಮಾಡಿಕೊಡುತ್ತೇನೆ. ಯಾವುದಕ್ಕೂ ಸಂಕೋಚಪಟ್ಟುಕೊಳ್ಳಬೇಡಿ" ಎಂದು ಹೇಳಿ ಹೊರಟುಹೋದ.

ರಹಮತ್ ಖಾನನ ಮಾತುಗಳನ್ನು ಕೇಳಿ ಗೋವಿಂದರಾಜನು ತನ್ನ ಕಿವಿಗಳನ್ನು ನಂಬದೆ ಹೋದ. ತಾನು ಯಾರಿಂದ ಸಹಾಯ ಬಯಸಬೇಕೆಂದಿದ್ದನೋ ಆ ವ್ಯಕ್ತಿಯೆ ಸಹಾಯ ನೀಡಲು ಮುಂದುವರಿದಿರುವುದು. ಎಲ್ಲ ಈಶ್ವರೇಚ್ಛೆಯಿಂದಲೇ, ಎಂದು ತನ್ನ ದೈವವನ್ನು ಕೊಂಡಾಡಿದ. ಅವನು ಕೊಡಲೇ ಕಾರ್ಯ ಪ್ರವರ್ತನಾದ. ಅಲ್ಲಿ ಇಲ್ಲಿ ಹುಡುಕಿ, ಬರೆಯುವ ಸಾಮುಗ್ರಿಗಳನ್ನು ದೊರಕಿಸಿಕೊಂಡು, ಒಂದು ಸಣ್ಣ ಪತ್ರವನ್ನು ಬರೆದು ಯಾರೂ ಕಾಣದೇ ಇರುವಾಗ ರಹಮತ್ ಖಾನನಿಗೆ ಕೊಟ್ಟ.

ಆ ಪತ್ರವನ್ನು ರಹಮತ್ ಖಾನನು ಮನೆಗೆ ತೆಗೆದುಕೊಂಡು ಹೋಗಿ ಬಿಡಿಸಿ ಓದಿಸಿಕೊಂಡ. ಗೋವಿಂದರಾಜನು ಆ ಕಾಗದದಲ್ಲಿ ತನ್ನ ಎಲ್ಲ ಹಂಚಿಕೆಯನ್ನೂ ವಿಸ್ತಾರವಾಗಿ ಬರೆದಿದ್ದ. ಸೆರೆಮನೆಯಿಂದ ತಪ್ಪಿಸಿಕೊಂಡು ಹೋಗಲು ರಹಮತ್ ಖಾನನು ಸಹಾಯಮಾಡುವುದಾದರೆ, ಬೀಬಿಯ ವೈಧವ್ಯಕ್ಕೆ ಕಾರಣನಾದ, ಕೊರಮನಾಯಕ ಮತ್ತು ವಿಜಯಭದ್ರರ ಮೇಲೆ ಸೇಡು ತೀರಿಸಿಕೊಳ್ಳುವೆನೆಂದು ಆಶ್ವಾಸನವಿತ್ತಿದ್ದ.

ಈ ಕಾಗದ ಓದಿಕೊಂಡು ಮೈಬೆವರಿತ್ತು—ರಹಮತ್ ಖಾನನಿಗೆ. ಏನುಮಾಡಲೂ ತೋಚಲಿಲ್ಲ. ಅವನಿಗೆ ತನ್ನ ಅಳಿಯನನ್ನು ಕೊಲೆ ಮಾಡಿದವನು ಕೊರಮನಾಯಕನೆಂದು ತಿಳಿದು ಅವನ ಮೇಲೆ ದ್ವೇಷವಿತ್ತು. ಗೋವಿಂದರಾಜನಿಗೆ ಸಹಾಯಮಾಡುವುದರ ಮೂಲಕ ತನ್ನ ಅಳಿಯನನ್ನು ಕೊಂದ ಕೊರಮನಾಯಕನ ಮೇಲೆ ಸೇಡು ತೀರಿಸಿಕೊಳ್ಳಬಹುದೆಂದು ಅನಿಸಿತು. ಅವನು ಸ್ವಭಾವತಃ ಸಾತ್ವಿಕ ವ್ಯಕ್ತಿಯಾಗಿದ್ದರೂ ತನ್ನ ಮಗಳಿಗಾದ ಅನ್ಯಾಯ ಈ ಬಗೆಯ ಸ್ವಾಮಿ ದ್ರೋಹ ಚಟುವಟಿಕೆಗಳಿಗೆ ಅವನನ್ನು ಪ್ರೇರೇಪಿಸಿತ್ತು. ಅವನು ಹಿಂದುಮುಂದು ನೋಡದೆ, ತನ್ನ ಪ್ರಾಣಾಪಾಯವನ್ನೂ ಲೆಕ್ಕಿಸದೆ, ಗೋವಿಂದರಾಜನಿಗೆ ನೆರವಾಗಲು ನಿಶ್ಚಯಿಸಿದ.

ಅವನು ಈ ಬಗೆಯ ನಿರ್ಧಾರ ಹೊಂದಲು ಬೀಬಿಯೇ ಬಹುಮಟ್ಟಿಗೆ ಕಾರಣವೆನ್ನಬಹುದು. ಅವಳು ಗೋವಿಂದರಾಜನ ಪರ ಆಡಿದ್ದ ಪ್ರೋತ್ಸಾ

ಕದ ಮಾತುಗಳು ರಹಮತ್ ಖಾನನನ್ನು ಹುರಿದುಂಬಿಸಿದ್ದುವು. ಅವನು ಮಾರೋಲೆ ಬರೆದು ಅದರಲ್ಲಿ ಗೋವಿಂದರಾಜನ ಎಲ್ಲ ಹಂಚಿಕೆಗಳಿಗೆ ತನ್ನ ಸಹಕಾರ ನೀಡುವುದಾಗಿ ಆಶ್ವಾಸನವಿತ್ತಿದ್ದನು.

ಈ ಕಾಗದ ಓದಿಕೊಂಡು ಗೋವಿಂದರಾಜನು ಪುಳಕಿತನಾದನು. ಅವನಿಗೆ ತನ್ನ ಬಿಡುಗಡೆ ಗಗನಕುಸುಮವಾಗಿ ತೋರಲಿಲ್ಲ. ರಹಮತ್ ಖಾನನ ಸಹಕಾರ ದೊರೆತರೆ ತಾನು ಅಲ್ಲಿಂದ ತಪ್ಪಿಸಿಕೊಂಡು ಹೋಗಬಹುದೆಂಬ ಭರವಸೆಯುಂಟಾಯಿತು. ಅವನು ಸಮಯವನ್ನು ವ್ಯರ್ಥ ಮಾಡದೆ, ಅಲ್ಲಿಂದ ತಪ್ಪಿಸಿಕೊಂಡು ಹೋಗುವ ಉಪಾಯವನ್ನು ಸಿದ್ಧಗೊಳಿಸುವುದರಲ್ಲಿ ತೊಡಗಿದ್ದನು.

ಇದರ ಬಗ್ಗೆ ರಹಮತ್ ಖಾನ್ ಮತ್ತು ಗೋವಿಂದರಾಜರ ನಡುವೆ ವಿಚಾರ ವಿನಿಮಯ ನಡೆದ ಮೇಲೆ ಒಂದು ಹಂಚಿಕೆ ರೂಪಗೊಂಡಿತು.

ಇದನ್ನು ಕಾರ್ಯಗತ ಮಾಡುವುದಷ್ಟೇ ಈಗ ಉಳಿದುದು.

ಇದರ ಪ್ರಥಮ ಅಂಗವಾಗಿ, ರಹಮತ್ ಖಾನನು ತನ್ನ ಮನೆಯ ಅನುಕೂಲಗಳನ್ನು ಮುಂದು ಮಾಡಿಕೊಂಡು, ತನ್ನ ಪಹರೆಯ ಸರದಿಯನ್ನು ರಾತ್ರಿಯ ಕಾಲಕ್ಕೆ ಉಪಾಯಾಂತರವಾಗಿ ಬದಲಾಯಿಸಿಕೊಂಡನು. ತಮ್ಮ ಯಾವ ದುರುದ್ದೇಶವೂ ವಿಜಯಭದ್ರನಿಗೆ ತಿಳಿಯದಂತೆ ಎಚ್ಚರವನ್ನು ವಹಿಸಿದ್ದ.

ಸರದಿಯ ಬದಲಾವಣೆ ಸುಲಭವಾಗಿ ಸಾಧಿಸಿತು.

ಇನ್ನು ವಿಜಯಭದ್ರನ ಬಳಿಯಿರುವ ಸೆರೆಮನೆಯ ಬೀಗದ ಕೈಯನ್ನು ವಶಪಡಿಸಿಕೊಂಡು, ಸೆರೆಮನೆಯ ದ್ವಾರವನ್ನು ತೆರೆದು ಅಲ್ಲಿಂದ ಗೋವಿಂದ ರಾಜನನ್ನು ಬಿಡುಗಡೆ ಮಾಡುವುದು. ಇದೇ ಹೆಚ್ಚು ಕಠಿಣವಾಗಿ ತೋರಿತು. ಇದನ್ನು ಹೇಗೆ ಸಾಧಿಸಬೇಕೆಂಬುದೇ ಅವರಿಗೆ ಬಗೆಹರಿದಿರಲಿಲ್ಲ. ಅವರು ಅನುಕೂಲ ಸಮಯಕ್ಕಾಗಿ ಕಾದು ಕುಳಿತಿದ್ದಾಗ ಅವರ ದೈವ ಒಲಿದು ಬಂದಂತೆ ಬಂದು, ಸರಿಯಾದ ಸನ್ನಿವೇಶ ದೊರೆಯಿತು.

ಸಾಮಾನ್ಯವಾಗಿ ರಾತ್ರಿಯ ಪಹರೆಯ ಮೇಲ್ವಿಚಾರಣೆಯನ್ನು ಕೊರಮನಾಯಕನು ನೋಡಿಕೊಳ್ಳುತ್ತಿದ್ದ. ಇವನಿಗೆ ಒಂದು ಚಟವಿತ್ತು! ಅದು ಅಫೀಮಿನ ಚಟ. ಅವನು ರಾತ್ರಿಯ ವೇಳೆಯಲ್ಲಿ ಎಚ್ಚತ್ತಿರಲು

ಅಫೀಮಿನ ಸೇವನೆಯನ್ನು ಮಾಡುತ್ತಿದ್ದನು. ಇದನ್ನು ರಹಮತ್ ಖಾನನು ಹೇಗೋ ಪತ್ತೆಮಾಡಿದ್ದ. ಅವನ ಬಳಿಯಲ್ಲಿ ಸೆರೆಮನೆಯ ಬೀಗದ ಕೈ ಇರುತ್ತಿದ್ದುದು ಅಪರೂಪ. ಒಮ್ಮೊಮ್ಮೆ ವಿಜಯಭದ್ರನಿಗೆ ಅನಿವಾರ್ಯದ ಕೆಲಸಗಳು ಇದ್ದರೆ ಸೆರೆಮನೆಯ ಬೀಗದ ಕೈಯನ್ನು ಕೊರಮನಾಯಕನಿಗೆ ಕೊಡಲಾಗುತ್ತಿತ್ತು. ಅಂತಹ ಒಂದು ಸಂದರ್ಭಕ್ಕೇ ಅವರು ಕಾದುಕೊಂಡಿದ್ದುದು.

ಕೊರಮನಾಯಕನ ಬಳಿ ಬೀಗದ ಕೈ ಇರುವುದನ್ನು ನೋಡಿ ರಹಮತ್ ಖಾನನು ತನ್ನ ಜಾಣ್ಮೆಯಿಂದ ಕೊರಮನಾಯಕನು ಹೆಚ್ಚಿನ ಪ್ರಮಾಣದಲ್ಲಿ ಅಫೀಮು ಸೇವಿಸಿ, ಮೈಮೇಲೆ ಎಚ್ಚರವಿಲ್ಲದೆ ಮಲಗುವಂತೆ ಮಾಡಿದ. ಅನಂತರ ಆತನ ಬಳಿಯಲ್ಲಿದ್ದ ಬೀಗದ ಕೈಯನ್ನು ಹುಷಾರಾಗಿ ಹೊರತೆಗೆದು ತನ್ನ ಬಳಿ ಅಡಗಿಸಿಟ್ಟುಕೊಂಡು, ತನ್ನ ಸಂಗಡ ಪಹರೆಯ ಸರದಿಯಲ್ಲಿದ್ದ ಇನ್ನೊಬ್ಬ ವ್ಯಕ್ತಿಯನ್ನು ಪ್ರಲೋಭನೆಗಳಿಂದ ಮೋಸಪಡಿಸಲು ಸಾಧ್ಯವಿಲ್ಲವೆಂದು ಅರಿತೊಡನೆ ಅವನನ್ನು ನಿವಾರಿಸುವ ಹಂಚಿಕೆಯನ್ನು ಮಾಡಿದನು. ಅವನು ಗದ್ದಲಮಾಡುವ ಮುನ್ನವೇ ಅವನ ಮೇಲೆ ಬಿದ್ದು ಅವನ ಬಾಯಿಗೆ ಬಟ್ಟೆ ತುರುಕಿ, ಅವನನ್ನು ಕಟ್ಟಿಹಾಕಿ, ಸೆರಮನೆಯ ಮೂಲೆಯಲ್ಲಿ ಕೆಡಹಲಾಯಿತು. ಅನಂತರ, ಬೇರೆ ಪಹರೆಯವರು ಬರುವುದರೊಳಗಾಗಿ ಸೆರೆಮನೆಯ ಬಾಗಿಲನ್ನು ತೆರೆದು, ಗೋವಿಂದರಾಜನು ಹೊರಗೆ ಬರಲು ಅವಕಾಶ ಮಾಡಿದ. ಆಮೇಲೆ ಸೆರೆಮನೆಯ ಬಾಗಿಲನ್ನು ಭದ್ರಪಡಿಸಿ, ಬೀಗದ ಕೈಯನ್ನು ಕೊರಮನಾಯಕನ ಬಳಿ ಬಿಸಾಡಿ, ಸೆರೆಮನೆಯಿಂದ ಹೊರಗೆ ಬಂದರು. ಹೊರಗಿನ ಗಿಡಮರಗಳ ನೆರಳಿನಲ್ಲಿ ಅವರ ಬರುವನ್ನೇ ಇದಿರು ನೋಡುತ್ತಾ ಬೀಬಿ ಕುದುರೆಯೊಡನೆ ಸಜ್ಜಾಗಿ ನಿಂತಿದ್ದಳು. ಗೋವಿಂದರಾಜನು ಮಿಂಚಿನ ವೇಗದಲ್ಲಿ ಅಲ್ಲಿಗೆ ಬಂದು, ಆ ಕುದುರೆಯನ್ನೇರಿ, ಕತ್ತಲೆಯ ಕರಾಳ ಗರ್ಭದಲ್ಲಿ ಮಾಯವಾದ.

ರಹಮತ್ ಖಾನ್ ಮತ್ತು ಬೀಬಿ ಗೋವಿಂದರಾಜನು ಕಣ್ಮರೆಯಾಗುವ ತನಕ ಅವನನ್ನು ನೋಡುತ್ತಿದ್ದು, ಅವನು ಮರೆಯಾಗುತ್ತಲೂ, ಅವನಿಗೆ ಒಳ್ಳೆಯದನ್ನು ಕೋರಿ, ತಾವು ಇನ್ನು ಅಲ್ಲೇ ಉಳಿದಿದ್ದರೆ ತಮ್ಮ ಪ್ರಾಣಕ್ಕೆ ಸಂಚಕಾರ ಬರುವುದೆಂದು ಅವರು ಆ ಸ್ಥಳದಿಂದ ಕಣ್ಮರೆಯಾದರು. ಮಾರ

ನೆಯ ದಿನ ನೇಸರು ಮೂಡುವುದರೊಳಗೇ ರಹಮತ್‌ಖಾನನು ತನ್ನ ಮನೆಯಿಂದ ಸಾಗಿಸಬೇಕಾದ ಸಾಮಾನುಗಳನ್ನು ಸಾಗಿಸಿಕೊಂಡು, ಯಾರಿಗೂ ತಿಳಿಯದಂತೆ, ಎಲ್ಲಿಗೋ ಹೊರಟು ಹೋಗಿ ತಲೆ ಮರೆಸಿ ಕೊಂಡನು.

ಸೆರೆಮನೆಯಿಂದ ತಪ್ಪಿಸಿಕೊಂಡು ಹೊರಟ ಗೋವಿಂದರಾಜನಿಗೆ ಕ್ಷಣ ಕಾಲ ಯಾವ ದಿಕ್ಕಿಗೆ ಹೋಗಬೇಕೆಂದು ತಿಳಿಯಲಿಲ್ಲ. ನಗರಕ್ಕೆ ಸುಭದ್ರವಾದ ಏಳು ಕೋಟೆಗಳು ಇದ್ದು, ಪ್ರತಿಯೊಂದು ಕೋಟೆಯ ಬಾಗಿಲುಗಳನ್ನು ಸಂಜೆ ಯಾಗುತ್ತಲೇ ಮುಚ್ಚುತ್ತಿದ್ದರು. ಈ ಕೋಟೆಯ ಬಾಗಿಲುಗಳ ಬಳಿ ಸಶಸ್ತ್ರ ಸೈನಿಕರು ಪಹರೆ ಕಾಯುತ್ತಿದ್ದರು. ಈ ರಾಜಮಾರ್ಗದಲ್ಲಿ ಹೋದರೆ ಗೋವಿಂದರಾಜನು ಖಂಡಿತವಾಗಿಯೂ ಅವರಿಗೆ ಸಿಕ್ಕಿಬೀಳುವ ಸಂಭವವಿತ್ತು. ಅಂತಲೇ ಅವನು ರಾಜಮಾರ್ಗ ತೊರೆದು, ಸಂದಿಗೊಂದಿಗಳಲ್ಲಿ ಹಾದು, ಅನೇಕ ಗುಪ್ತಮಾರ್ಗಗಳ ಮೂಲಕ ಕೊನೆಯ ಕೋಟೆಯ ಮಹಾದ್ವಾರದ ಬಳಿಗೆ ಬಂದನು. ಅಲ್ಲಿ ಅವನು ಏರಿದ್ದ ಕುದುರೆ ಪ್ರಯೋಜನಕ್ಕೆ ಬಾರದಾ ಗಿತ್ತು. ಅವನು ಕುದುರೆಯಿಂದ ಇಳಿದು ಕೋಟೆಯ ಗೋಡೆಯನ್ನು ಹುಷಾ ರಾಗಿ ಹತ್ತಿ, ಇನ್ನೇನು ಕೆಳಕ್ಕೆ ಜಿಗಿಯಬೇಕು ಎನ್ನುವಷ್ಟರಲ್ಲಿ ಕೋಟೆಯ ಆ ಬುರುಜಿನ ಪ್ರದೇಶದಲ್ಲಿ ಇದ್ದ ಪಹರೆಯ ಸೈನಿಕನ ಕಣ್ಣಿಗೆ ಅವನು ಬಿದ್ದು ಬಿಟ್ಟ ! ಅವನ ಕುದುರೆಯು ಆ ನಿಶೆಯ ನೀರವತೆಯಲ್ಲಿ ಕೆನೆದು ಗದ್ದಲ ಮಾಡಿದುದರಿಂದ, ಗೋವಿಂದರಾಜನು ಸದ್ದಿಲ್ಲದೆ ಕೋಟೆಯನ್ನು ದಾಟಲು ಸಾಧ್ಯವಾಗದೆ ಹೋಯಿತು.

ತನ್ನನ್ನು ಬೆನ್ನಟ್ಟಿ ಬರುವ ರಾವುತರ ಕೈಗೆ ಸಿಕ್ಕಿದರೆ ತನ್ನ ಪರಿಣಾಮ ನೆಟ್ಟಗಾಗುವುದಿಲ್ಲವೆಂದು ಬೇರೇನು ಮಾಡಲು ತೋಚದೆ, ಕೋಟೆಯ ಗೋಡೆಯನ್ನು ಧುಮುಕಿ, ಓಡಲು ತೊಡಗಿದ. ಕೋಟೆ ಆ ಪ್ರದೇಶದಲ್ಲಿ ಹೆಚ್ಚು ಎತ್ತರವಾಗಿಲ್ಲದೆ ಇದ್ದುದರಿಂದ ಅವನಿಗೆ ಹೆಚ್ಚು ಅಪಾಯವಾಗಲಿಲ್ಲ.

ತಮ್ಮ ಕೈಗೆ ಸಿಕ್ಕದೆ ತಪ್ಪಿಸಿಕೊಂಡ ವ್ಯಕ್ತಿಯ ಮೇಲೆ ಗುಂಡು ಹಾರಿ ಸುತ್ತಾ ಪಹರೆಯ ರಾವುತರು ಸೂಡಿಯನ್ನು ಹಿಡಿದುಕೊಂಡು ಅವನ ಬೆನು ಹತ್ತಿದರು. ಅವರು ಬಹುಬೇಗನೆ ಗೋವಿಂದರಾಜನ ಸಮೀಪಕ್ಕೆ ಬಂದು ಬಿಟ್ಟಿದ್ದರು. ಅವರಲ್ಲಿ ಯಾರೋ ಹಾರಿಸಿದ ಗುಂಡು ಒಂದು ಬಂದು

ಗೋವಿಂದರಾಜನ ಬಲಗಾಲಿಗೆ ಬಡಿಯಿತು. ಓಡುತ್ತಿದ್ದ ಗೋವಿಂದ ರಾಜ ಹಾಗೆಯೇ ನೆಲಕ್ಕೆ ಉರುಳಿದ. ಅವನು ಅಲ್ಲಿ ಸತ್ತು ಬಿದ್ದಿರಬೇಕೆಂದು ಊಹಿಸಿ ರಾವುತರು ಅವನ ಶೋಧನೆಗೆ ಮುಂದಾದರು.

ಆ ಪ್ರದೇಶದಲ್ಲಿ ಕುರುಚಲು ಗಿಡಮರಗಳು ದಟ್ಟವಾಗಿ ಬೆಳೆದಿದ್ದುವು. ಒಂದೆರಡು ಕಡೆ ಪೊದೆಗಳು ಹೇರಳವಾಗಿ ಬೆಳೆದಿದ್ದುವು. ಅಲ್ಲಿಗೆ ಹೇಗಾದರೂ ಮಾಡಿ ತಪ್ಪಿಸಿಕೊಂಡರೆ ತಾನು ಉಳಿಯುವ ದಾರಿ ಇದೆ ಎಂದು ಗೋವಿಂದ ರಾಜ ಏಟು ಬಿದ್ದಿದ್ದರೂ ಅದರಿಂದಾಗುತ್ತಿದ್ದ ನೋವನ್ನು ಗಣನೆಗೆ ತಾರದೆ, ತೆವಳಿಕೊಂಡೇ ಬಂದು ಪೊದೆಯ ಬಳಿಗೆ ಹೋಗಿ ಅಲ್ಲಿ ಕೆಲಕಾಲ ವಿಶ್ರಮಿಸಿ ಕೊಳ್ಳುತ್ತಾ ಕುಳಿತ.

ಹಿಂಬಾಲಿಸಿ ಬಂದ ರಾವುತರಿಗೆ ಗೋವಿಂದರಾಜನು ಎಲ್ಲಿ ಹೋದ ನೆಂಬುದು ತಿಳಿಯದಾಯಿತು. ಅವನು ಗುಂಡಿನೇಟಿನಿಂದ ಬಿದ್ದುದನ್ನು ಅವರು ಆ ಕಾರ್ದಿಂಗಳ ಬೆಳಕಿನಲ್ಲೂ ಅಸ್ಪಷ್ಟವಾಗಿ ನೋಡಿದ್ದರು. ಅವನು ಬಿದ್ದ ಭಾಗದಲ್ಲಿ ಹುಡುಕಿದಾಗ ಅಲ್ಲಿ ಮಾತ್ರ ಯಾರೂ ಇರಲಿಲ್ಲ. ಅವನು ಸುರಿಸಿದ್ದ ರಕ್ತವನ್ನು ಅನುಸರಿಸಿ ಹೋಗಲು ಆ ಪ್ರದೇಶವೆಲ್ಲ ತರಗೆಲೆಗಳಿಂದ ಮುಚ್ಚಿ ಹೋಗಿತ್ತು. ಅಲ್ಲದೆ ಒಂದೆರಡು ಕಡೆ ದಟ್ಟವಾದ ಪೊದೆಗಳು ಬೆಳೆದಿದ್ದುವು. ಅವುಗಳ ಹಿಂದೆ ಎಲ್ಲಿ ಅಡಗಿರುವನೆಂಬುದು ತಿಳಿಯ ದಾಗಿತ್ತು.

ಅವರಿಗೆ ಒಂದು ವಿಷಯ ಸ್ಪಷ್ಟವಾಗಿತ್ತು. ಗೋವಿಂದರಾಜನಿಗೆ ಗುಂಡು ತಾಗಿದ್ದರೂ ಅವನು ಸತ್ತಿಲ್ಲ. ಗಾಯಗೊಂಡಿರುವ ಅವನು ಎಲ್ಲಿಯೋ ತಪ್ಪಿಸಿಕೊಂಡು ಹೋಗಿರಬೇಕೆಂಬುದು ಖಚಿತವಾಗಿತ್ತು. ಅವನು ಗಾಯಗೊಂಡಿದ್ದುದರಿಂದ ಹೆಚ್ಚು ದೂರ ಹೋಗಿರಲಾರನೆಂದೂ ತರ್ಕಿಸಿದರು. ಹುಡುಕಿದರೆ ಆ ಪೊದೆಗಳ ನಡುವೆ ಅವನು ಸಿಕ್ಕಬಹು ದೆಂದು ಊಹಿಸಿ, ಒಂದು ಪೊದೆಯನ್ನೂ ಬಿಡದೆ ಎಲ್ಲವನ್ನೂ ಸೂಡಿಯ ಬೆಳಕಿನಲ್ಲಿ ಹುಡುಕುತ್ತಾ ಬಂದರು. ಅವರು ತನ್ನನ್ನು ಹುಡುಕುತ್ತಾ ಹತ್ತಿರದಲ್ಲೇ ಬರುತ್ತಿರುವುದನ್ನು ನೋಡಿ ತನ್ನ ಆಯುಸ್ಸು ಇಂದಿಗೆ ತೀರಿ ತೆಂದುಕೊಂಡು ಗೋವಿಂದರಾಜ ಕಡೆಯ ಸಾಹಸ ಮಾಡಲು ನಿಶ್ಚಯಿಸಿದ. ಪೊದೆಯ ಆಶ್ರಯ ಹೊಂದಿದ್ದರೆ ಅವರ ಕೈಗೆ ತಾನು ಸುಲಭವಾಗಿ ಸಿಕ್ಕಿ ಬಿಡುವೆನೆಂದು ಊಹಿಸಿ, ಅವನು ಬಳಿಯಲ್ಲೇ ಇದ್ದ ಮರವೊಂದನ್ನು ಏರಿ

ಕುಳಿತನು. ಅಲ್ಲಿಗೆ ಒಬ್ಬ ಕುದುರೆ ಸವಾರನು ಗೋವಿಂದರಾಜನನ್ನು ಹುಡುಕುತ್ತಾ ಬಂದನು. ಇದೇ ಸಮಯಕ್ಕಾಗಿ ಕಾದಿದ್ದ ಗೋವಿಂದ ರಾಜನು ದೈವದ ಮೇಲೆ ಭಾರ ಹಾಕಿ, ಅವನ ಮೇಲೆ ಬಿದ್ದು ಆ ಸವಾರನನ್ನು ಕುದುರೆಯಿಂದ ನೆಲಕ್ಕೆ ಕೆಡವಿದ. ಅವನ ಕತ್ತನ್ನು ಹಿಸುಕಿ ಉಸಿರಾಡದಂತೆ ಮಾಡಿ, ತನ್ನ ಅಂಗವಸ್ತ್ರವನ್ನು ಬಾಯಿಗೆ ತುರುಕಿ, ಅಲ್ಲೇ ಇದ್ದ ಲತೆ ಗಳಿಂದ ಅವನನ್ನು ಚೆನ್ನಾಗಿ ಕಟ್ಟಿ ಹಾಕಿದ. ಅನಂತರ ಅವನ ಉಡಿಗೆ ಯನ್ನು ಕಳಚಿ, ತಾನು ಹಾಕಿಕೊಂಡು, ಅವನೇರಿದ್ದ ಕುದುರೆಯನ್ನು ಏರಿಕೊಂಡು, ಅವನಂತೆ ಕೈಲಿ ಸೂಡಿ ಹಿಡಿದು, ಇತರ ರಾವುತರನ್ನು ಹಿಂಬಾಲಿಸಿದ. ಅವರೊಡನೆ ಸೇರಿದ್ದರೂ, ಆ ಕಾರ್ದಿಂಗಳ ಅಸ್ಪಷ್ಟ ಬೆಳಕಿನಲ್ಲಿ ಅವನನ್ನು ಯಾರೂ ಗುರುತಿಸದೆ ಹೋದರು. ಅಲ್ಲಿ ಇಲ್ಲಿ ಸುತ್ತಾಡಿದ ಮೇಲೆ ಒಮ್ಮೆಲೇ ಗೋವಿಂದರಾಜ "ಅಗೋ, ಅಲ್ಲಿ ಓಡುತ್ತಿದ್ದಾನೆ ಅಲ್ಲಿ! ಹಿಡಿಯಿರಿ ಅವನನ್ನು!" ಎಂದು ಬೊಬ್ಬೆ ಇಡುತ್ತಾ ಒಂದು ದಿಕ್ಕಿನಲ್ಲಿ ಕುದರೆಯನ್ನು ದೌಡಾಯಿಸಿದ. ಉಳಿದವರಿಗೂ ಆ ಮಾತು ನಿಜವೆನಿಸಿ, ಆ ದಿಕ್ಕಿನಲ್ಲಿ ತಮ್ಮ ಕುದುರೆಗಳನ್ನು ಓಡಿಸಿದರು. ಇದೇ ಸಮಯ ಸಾಧಿಸಿ ಗೋವಿಂದರಾಜ, ತನ್ನ ಕುದುರೆಯನ್ನು ನಿಧಾನಮಾಡಿ ತದ್ವಿರುದ್ಧ ದಿಕ್ಕಿನಲ್ಲಿ ಕುದುರೆಯನ್ನು ವೇಗವಾಗಿ ನಡಸಿಕೊಂಡು, ಅವರಿಂದ ದೂರ, ಬಹು ದೂರ ಹೋಗಿಬಿಟ್ಟ. ಹೀಗೆ ಅವನು ಅದೆಲ್ಲಿ ಹೋದನೋ ಅವನಿಗೇ ತಿಳಿಯದು. ಅವನಿಗೆ ಗಾಯವಾಗಿ ರಕ್ತ ಸೋರಿ ತುಂಬ ದಣಿವಾಗಿತ್ತು. ಜೊತೆಗೆ ಮನಸ್ಸಿನ ಉದ್ವೇಗ, ಕುದುರೆಯ ನಾಗಾಲೋಟ—ಇವುಗಳೆಲ್ಲ ಸೇರಿಕೊಂಡು ಕುದುರೆಯ ಕಡಿವಾಣ ಅವನ ಕೈಯಿಂದ ಯಾವಾಗ ಕಳಚಿಬಿದ್ದಿತೋ ಅವನಿಗೆ ತಿಳಿಯದು. ಅವನು ಅಭ್ಯಾಸಬಲದಿಂದ, ಕುದುರೆಯ ಮೇಲೆ ಕುಳಿತಿದ್ದಂತೆಯೇ ಸುಸ್ತಾಗಿ ಸೊರಗಿ ಮಲಗಿದ. ಕುದುರೆ ಓಡಿತು. ಅದು ತನಗೆ ಆಯಾಸವಾಗುವ ತನಕ ಗೋವಿಂದರಾಜನನ್ನು ಹೊತ್ತು ಓಡಿತು.

ಈ ವೇಳೆಗೆ ಬೆಳಗಿನ ನೇಸರಿನ ಕಿರಣಗಳು ಆ ಪ್ರದೇಶವನ್ನೆಲ್ಲ ತುಂಬಿ, ಕತ್ತಲೆಯನ್ನು ಹೊರಗಟ್ಟಿತ್ತು. ಆದರೂ ಕುದುರೆ ಓಡುತ್ತಲೇ ಇತ್ತು. ಅದಕ್ಕೆ ಒಂದು ದಿಕ್ಕಿಗೆ ಹೋಗಬೇಕೆಂಬ ನಿರ್ಭಂದವಿರಲಿಲ್ಲ.

ಮನಸ್ಸು ಬಂದ ಕಡೆ ಓಡಿ ಓಡಿ ಅದು ಗೋವಿಂದರಾಜನನ್ನು ಹೊತ್ತು ಕೊಂಡು, ರಾಜಧಾನಿಯಿಂದ ದಕ್ಷಿಣಕ್ಕೆ ಅನೇಕ ಗಾವುದ ದೂರ ಬಂದು ಬಿಟ್ಟಿತ್ತು. ಈಗ ಅದು ನಿರ್ಜನವಾದ ಘೋರ ಅರಣ್ಯವನ್ನು ಪ್ರವೇಶಿಸಿತ್ತು.

ಕುದುರೆಯ ಮೇಲೆ, ಶಕ್ತಿಗುಂದಿ ಮಲಗಿದ್ದ ಗೋವಿಂದರಾಜನಿಗೆ ತಾನೆಲ್ಲಿದ್ದೇನೆ ಎಂಬುದು ತಿಳಿದಿರಲಿಲ್ಲ. ಕುದುರೆಯ ಮೇಲೆ ಕುಳಿತಿದ್ದುದು ಜೋಕಾಲಿಯಲ್ಲಿ ತೂಗಿದಂತೆ ಆಗಿತ್ತು. ಅವನು ಅಭ್ಯಾಸ ಬಲದಿಂದ, ಕುದುರೆಯ ಮೇಲೆ ನೆಲಕ್ಕೆ ಬೀಳದಂತೆ ಮಲಗಿದ್ದ. ಅವನ ಮುಖಕ್ಕೆ ಬೆಳಗಿನ ತಂಗಾಳಿ ಬೀಸಿದಾಗಲೇ ಅವನಿಗೆ ಎಚ್ಚರ, ಕಣ್ಣು ಬಿಟ್ಟು ನೋಡಿದಾಗ, ಕುದುರೆ ಓಡುವುದನ್ನು ನಿಲ್ಲಿಸಿ, ಹುಲ್ಲು ಮೇಯುತ್ತಾ ನಿಂತಿತ್ತು. ಅವನು ಸುತ್ತಲೂ ನೋಡಿದ. ದುರ್ಭೇದ್ಯವಾದ ದಟ್ಟವಾದ ಕಾಡಿನ ಮಧ್ಯೆ ತಾನಿರುವೆನೆಂದು ತಿಳಿಯಿತು. ತನ್ನನ್ನು ಯಾವ ಅಪಾಯಕ್ಕೂ ಈಡು ಮಾಡದೆ ಇಲ್ಲಿಯ ತನಕ ಸುರಕ್ಷಿತವಾಗಿ ಕರೆತಂದ ಕುದುರೆಯನ್ನು ಅವನು ಮೊದಲು ತಟ್ಟಿ ಧನ್ಯವಾದ ತಿಳಿಸಿದ. ಅನಂತರ, ಮೈಯಲ್ಲಿ ರಕ್ತ ಸೋರಿ ನಿತ್ರಾಣವಾದುದನ್ನು ಅರಿತು, ಬಳಿಯಲ್ಲಿ ನೀರಿನ ಆಸರೆ ಇದ್ದರೆ ಮೊದಲು ಗಾಯವನ್ನು ತೊಳೆದು, ಅದಕ್ಕೆ ಔಷಧಿ ಹಚ್ಚಬೇಕೆಂದು ಕುದುರೆಯ ಮೇಲೆ ಇದ್ದಂತೆಯೇ ನೀರಿಗಾಗಿ ಶೋಧಿಸಿದ. ಅವನ ಅದೃಷ್ಟಕ್ಕೆ ತಕ್ಕಂತೆ ಅಲ್ಲೊಂದು ಸಣ್ಣ ಅಬ್ಬಿ ಹರಿಯುತ್ತಿತ್ತು. ಅದನ್ನು ನೋಡುತ್ತಲೇ ಅವನ ಹೃದಯ ಸಂತೋಷದಿಂದ ಹಿಗ್ಗಿತು. ಅವನು ಕುದುರೆಯಿಂದ ಇಳಿದು, ಅದನ್ನು ಒಂದು ಗಿಡಕ್ಕೆ ಕಟ್ಟಿ ಆ ಅಬ್ಬಿಯ ಬಳಿಗೆ ಹೋಗಿ, ಮೊದಲು ದಣಿವಾರುವಂತೆ ನೀರು ಕುಡಿದು, ಅನಂತರ ಗಾಯಗಳನ್ನೆಲ್ಲ ತೊಳೆದು. ಗುಂಡನ್ನು ಹೊರತೆಗೆದು ಯಾವುದೋ ಸೊಪ್ಪಿನ ರಸವನ್ನು ಹಚ್ಚಿ ಕಟ್ಟಿದ. ಅನಂತರ ಆಯಾಸವನ್ನು ಪರಿಹರಿಸಿಕೊಳ್ಳಲು ಅಲ್ಲೇ ಇದ್ದ ಹಸಿರು ಗರಿಕೆಯ ಮೇಲೆ ಮಲಗಿಕೊಂಡ. ರಾತ್ರಿಯೆಲ್ಲ ದಣಿದಿದ್ದ ಅವನಿಗೆ ನಿದ್ರೆ ಬಂದುದೇ ತಿಳಿಯಲಿಲ್ಲ. ಅವನಿಗೆ ಎಚ್ಚರವಾದಾಗ, ದೂರದಲ್ಲಿ ಯಾರೋ ಮಾತನಾಡಿಕೊಂಡು ಬರುತ್ತಿರುವುದು ಕೇಳಿಸಿತು! ಕುದುರೆ ಅವರನ್ನು ನೋಡಿ ಕೆನೆಯುತ್ತಿತ್ತು.

## ೧೭

ಅನತಿ ದೂರದಲ್ಲಿ ಬರುತ್ತಿರುವವರು ಶತ್ರುಗಳೋ ಮಿತ್ರರೋ ಎಂಬುದನ್ನು ತಿಳಿಯದೆ ಗೋವಿಂದರಾಜನು ತಟ್ಟನೆ ಎದ್ದು ಕುಳಿತುಕೊಂಡ. ಅವರನ್ನು ಒಂದೇ ಸಮನೆ ದುರುಗುಟ್ಟಿಕೊಂಡು ನೋಡಿ ಯಾವುದೂ ಬಗೆಹರಿಯದೆ, ಅವರ ಕಣ್ಣಿಗೆ ಬೀಳದಂತೆ ಮರೆಯಾಗಿರುವುದೇ ಲೇಸೆಂದು, ಕೂಡಲೇ ಅಲ್ಲಿ ಇದ್ದ ಕಲ್ಲು ಬಂಡೆಗಳನ್ನು ಆಶ್ರಯಿಸಿ ಅಡಗಿ ಕುಳಿತುಕೊಂಡ.

ಆ ಗುಂಪು ಗಟ್ಟಿಯಾಗಿ ಮಾತನಾಡುತ್ತಾ, ಆಗಾಗ್ಗೆ ತಮ್ಮೊಳಗೇ ನಗುತ್ತಾ ಅಲ್ಲಿಗೆ ಬಂದಿತು. ಅವರನ್ನು ನೋಡಿ, ಬಹುಶಃ ಅಡವಿಯ ಚೋರರಿರಬೇಕೆಂದು ಊಹಿಸಿದ ಗೋವಿಂದರಾಜ. ಯಾಕೆಂದರೆ ಅವರು ಪ್ರತಿಯೊಬ್ಬರೂ ಬಹುಮಟ್ಟಿಗೆ ಬೆತ್ತಲೆಯಾಗಿಯೇ ಇದ್ದು ಒಂದೊಂದು ಕಂಬಳಿಗಳನ್ನು ಮಾತ್ರ ಹೊದ್ದುಕೊಂಡಿದ್ದರು. ಅವರ ಕೈಯಲ್ಲಿ ಹರಿತವಾದ ಮಚ್ಚು, ಕುಡುಗೋಲು, ದೊಣ್ಣೆ, ಈಟಿ ಮೊದಲಾದ ಆಯುಧಗಳಿದ್ದುವು. ಅವರ ಮುಖದಲ್ಲಿ ದಟ್ಟವಾದ ಕೂದಲು ಬೆಳೆದಿದ್ದು, ಅವರನ್ನು ನೋಡುತ್ತಲೇ ಎಂತಹ ಧೈರ್ಯಶಾಲಿಗೂ ಹೆದರಿಕೆಯುಂಟಾಗುತ್ತಿತ್ತು. ತಾನು ಅವರ ಕೈಗೆ ಸಿಕ್ಕಿದರೆ ಮತ್ತೆ ಯಾವ ತೊಂದರೆಗೆ ಒಳಪಡಬೇಕಾಗುವುದೋ, ಎಂದು ಹೆದರಿ ಗೋವಿಂದರಾಜನು ತನ್ನ ಆಶ್ರಯತಾಣದಿಂದ ಹೊರಗೆ ಕಾಣಿಸಿಕೊಳ್ಳಲಿಲ್ಲ.

ಗುಂಪು ತಮ್ಮದೇ ಆದ ಭಾಷೆಯಲ್ಲಿ ಏನನ್ನೋ ಮಾತನಾಡಿಕೊಳುತ್ತಾ ಗೋವಿಂದರಾಜನ ಕಡೆಗೆ ಗಮನ ಕೊಡದೆ ಮುಂದೆ ಸಾಗಿತ್ತು. ಅಷ್ಟರಲ್ಲಿ ಗೋವಿಂದರಾಜನ ಕುದುರೆ ಕೆನೆದು ಗದ್ದಲಮಾಡಿತು. ಅದನ್ನು ಕೇಳಿ ಆ ಕಳ್ಳರ ಗುಂಪಿನ ಗಮನ ಅತ್ತ ಹರಿಯಿತು. ಈ ನಿರ್ಜನ ಅರಣ್ಯದಲ್ಲಿ ಅದೂ ಚೋರಸೀಮೆ ಎಂದು ಪ್ರಸಿದ್ಧವಾಗಿರುವ ಈ ರಾಮಗಿರಿ ಪರ್ವತದ ದುರ್ಗಮವಾದ ಅರಣ್ಯಪ್ರಾಂತ್ಯದಲ್ಲಿ ಕುದುರೆಯ ಮೇಲೇರಿ ಧೈರ್ಯವಾಗಿ ಬಂದಿರುವ ವ್ಯಕ್ತಿ ಯಾರೆಂದು ತಿಳಿಯಲು ಅವರಿಗೆ ಸಹಜವಾಗಿಯೇ

ಕುತೂಹಲ ಕೆರಳಿತು. ಅವರಲ್ಲಿ ಒಬ್ಬನು ಓಡಿಹೋಗಿ ಕುದುರೆಯನ್ನು ಹಿಡಿದುಕೊಂಡ. ಮತ್ತೊಬ್ಬ ಬಳಿಯಲ್ಲೇ ಕಲ್ಲುಗುಂಡುಗಳ ಮರೆಯಲ್ಲಿ ಅವಿತುಕೊಂಡಿದ್ದ ಗೋವಿಂದರಾಜನನ್ನು ಪತ್ತೆಮಾಡಿಬಿಟ್ಟ. ತಡ ಮಾಡದೇ ಉಳಿದವರೆಲ್ಲ ಅವನನ್ನು ಸುತ್ತುಗಟ್ಟಿ ಮುತ್ತಿ, ನಿಮಿಷ ಮಾತ್ರದಲ್ಲಿ ಅವನನ್ನು ತಮ್ಮ ಕೈಸೆರೆಯನ್ನಾಗಿ ಮಾಡಿಕೊಂಡರು.

ಅವರು ಗೋವಿಂದರಾಜನನ್ನು ಅಡಿಯಿಂದ ಮುಡಿಯ ತನಕ ಕುತೂಹಲದಿಂದ ನೋಡಿ, ಅವನನ್ನು ಅನೇಕ ಪ್ರಶ್ನೆ ಕೇಳಿದರು. ಆದರೆ ಅವರದು ಯಾವುದೋ ವಿಚಿತ್ರವಾದ ಭಾಷೆ. ಅವರ ಒಂದು ಶಬ್ದವೂ ಗೋವಿಂದರಾಜನಿಗೆ ಅರ್ಥವಾಗಲಿಲ್ಲ. ಗೋವಿಂದರಾಜನು ತನಗೆ ತಿಳಿದಿರುವ ಎಲ್ಲ ಭಾಷೆಗಳಲ್ಲಿ ತಾನಾರು, ತಾನು ಅಲ್ಲಿಗೆ ಹೇಗೆ ಬಂದೆ ಎಂಬ ವಿಷಯ ಹೇಳಿದರೂ ಅವರಿಗೆ ಅವನು ಹೇಳಿದ ಒಂದು ಮಾತೂ ಅರ್ಥವಾಗದಂತೆ ಕಾಣಲಿಲ್ಲ. ಕಡೆಗೆ ಮಾತನಾಡಿ ವೃಥಾ ಕಂಠಶೋಷಣೆ ಎಂದು ತಿಳಿದು, ಗೋವಿಂದರಾಜನು ಅವರು ಸಂಜ್ಞೆಮಾಡಿ ಹೇಳಿದಂತೆ, ಅವರನ್ನು ಮಾತಿಲ್ಲದೆ ಹಿಂಬಾಲಿಸಿದ. ಗೋವಿಂದರಾಜನಿಗೆ ಕಾಲಿಗೆ ಏಟು ಬಿದ್ದು ನಡೆಯಲು ತೊಂದರೆಯಾಗಿರುವುದನ್ನು ಗಮನಿಸಿ, ಅವರು ಅವನಿಗೆ ಕುದುರೆಯನ್ನು ಹತ್ತಲು ಅವಕಾಶ ಕೊಟ್ಟರು. ಉಳಿದವರು ಅವನ ಕುದುರೆಯ ಕಡಿವಾಣವನ್ನು ಹಿಡಿದುಕೊಂಡು ನಿಧಾನವಾಗಿ ಹೆಜ್ಜೆ ಹಾಕುತ್ತ ಹೊರಟರು.

ಹೀಗೆ ಅವರು ಸುಮಾರು ಒಂದೆರಡು ಗಾವುದ ನಡೆದಿರಬಹುದು. ಕಡೆಗೆ ಅವರು ಒಂದು ಪ್ರದೇಶದಲ್ಲಿ ನಿಂತರು! ಬಹುಶಃ ಅವರ ಗಮ್ಯಸ್ಥಾನ ಹತ್ತಿರ ಬಂದಿರಬೇಕೆಂದು ಗೋವಿಂದರಾಜ ತನ್ನಲ್ಲೇ ಊಹಿಸಿದ.

ಆ ಪ್ರದೇಶದಲ್ಲಿ ಕಲ್ಲು ಗುಂಡುಗಳು ಎತ್ತರವಾಗಿ ಒಂದರ ಮೇಲೆ ಒಂದರಂತೆ ಕುಳಿತು ಅವುಗಳ ನಡುವೆ ಒಂದು ಗವಿ ಉಂಟಾಗಿತ್ತು. ಆ ಕಳ್ಳರ ಗುಂಪು ಅಲ್ಲಿಗೆ ಬರುತ್ತಲೇ ಒಬ್ಬನು ಸೀಟಿಯನ್ನು ಹೊಡೆದು ಮೂರು ಬಾರಿ ಕಲ್ಲಿನಿಂದ, ಗುಹೆಯ ಬಾಗಿಲನ್ನು ಬಡಿದು, ಶಬ್ದಮಾಡಿದ. ಗುಹೆಯ ಬಾಗಿಲು ತೆರೆದುಕೊಂಡು ಒಬ್ಬ ಕುಳ್ಳನ ವ್ಯಕ್ತಿ ಹೊರಗೆ ಬಂದ. ಉಳಿದವರು ತಮ್ಮ ಭಾಷೆಯಲ್ಲಿ ಏನನ್ನೋ ಹೇಳಿ 'ಜೈ ಭವಾನಿ' ಎಂದು ಅವನಿಗೆ ವಂದನೆಯನ್ನು ಮಾಡಿದರು. ಅನಂತರ ಅವನು ಎಲ್ಲರನ್ನೂ

ಗುಹೆಯ ಬಳಿಗೆ ಕರೆದುಕೊಂಡು ಹೋದ. ಅವರ ಹಿಂದೆ ಗುಹೆಯ ಬಾಗಿಲು ತಾನಾಗಿ ಮುಚ್ಚಿಕೊಂಡಿತು.

ಅವರು ಒಳಗೆ ಹೋದಂತೆ ಮಾರ್ಗವು ಮೊದಲು ಇಕ್ಕಾಟ್ಟಾಗಿದ್ದು ಅನಂತರ ವಿಶಾಲವಾಗುತ್ತಾ ಬಂದಿತ್ತು. ಮೊದಲು ಕತ್ತಲೆಯಾಗಿದ್ದುದು ಬರುಬರುತ್ತಾ ಗಾಳಿಬೆಳಕುಗಳಿಂದ ಕೂಡಿದ ವಿಶಾಲವಾದ ಬಯಲು ಪ್ರದೇಶ ಅಲ್ಲಿ ಕಣ್ಣಿಗೆ ಬಿತ್ತು. ಅಲ್ಲಿ ಅನೇಕ ಒರಟು ಕಲ್ಲುಗಳಿಂದ ಕಟ್ಟಿದ ಮನೆಗಳು ಇರುವುದು ಗೋಚರಿಸಿತು. ಆ ಪ್ರದೇಶವು ಗಿಡಮರಗಳ ಹಾಗೂ, ಕಲ್ಲು ಗುಂಡುಗಳ ದುರ್ಭೇದ್ಯವಾದ ಕೋಟೆಯ ನಡುವೆ ಇರುವಂತೆ ಭಾಸವಾಯಿತು.

ಅಲ್ಲಿಗೆ ಚೋರರ ಗುಂಪು ಬರುತ್ತಿದ್ದಂತೆ, ಮತ್ತೊಂದು ದೊಡ್ಡ ಗುಂಪು 'ಜೈ ಭವಾನಿ' ಎಂದು ಕೂಗುತ್ತಾ ಅವರನ್ನು ಸ್ವಾಗತಿಸಿತು. ಆ ಗುಂಪಿನ ಮುಖಂಡನಂತೆ ತೋರುವ ದಷ್ಟಪುಷ್ಟವಾಗಿದ್ದ ಒಬ್ಬ ವ್ಯಕ್ತಿ, ಕುದುರೆಯ ಮೇಲೆ ಕುಳಿತಿದ್ದ ಗೋವಿಂದರಾಜನನ್ನು ನೋಡಿ, ಅವನಾರೆಂದು ಆ ಗುಂಪಿನವರನ್ನು ಕೇಳಿದನು. ಅವರು ಅದೇನು ಉತ್ತರ ಕೊಟ್ಟರೋ, ಅಂತೂ ಆ ಉತ್ತರದಿಂದ ಅವನು ಸುಪ್ರಸನ್ನನಾದಂತೆ ತೋರಿತು. ಅನಂತರ ಬಂದಿದ್ದವರನ್ನೆಲ್ಲ ಬೇರೆಬೇರೆ ಕಡೆಗೆ ಕಳುಹಿಸಿ ಕೊಡಲಾಯಿತು. ಗೋವಿಂದರಾಜನನ್ನು ಪ್ರತ್ಯೇಕವಾಗಿ ಕರೆದೊಯ್ದು ಒಂದು ಕೋಣೆಯಲ್ಲಿ ಇಡಲಾಯಿತು.

ಗೋವಿಂದರಾಜನು ಆ ಮುಖಂಡನೊಡನೆ ಏನನ್ನೋ ಮಾತಾಡಲು ಪ್ರಯತ್ನಿಸಿದ. ಆದರೆ ಅವನ ಮಾತುಗಳೊಂದೂ ಅವನಿಗೆ ತಿಳಿಯಲಿಲ್ಲ. ತನ್ನ ವಿಷಯವನ್ನು ಅವರಿಗೆ ಹೇಗೆ ತಿಳಿಸುವುದೆಂಬುದು ಗೋವಿಂದರಾಜನಿಗೆ ತಿಳಿಯದೆ ಹೋಗಿತ್ತು.

ಈಗ ಗೋವಿಂದರಾಜನಿಗೆ ವಿಪರೀತವಾಗಿ ಆಯಾಸ ಬಳಲಿಕೆಗಳು ಆಗಿದ್ದುವು. ಹೊಟ್ಟೆಯಲ್ಲಿ ಹಸಿವಿನಿಂದ ಬೆಂಕಿ ಹಾಕಿದಂತೆ ಆಗುತ್ತಿತ್ತು. ಅವನಿಗೆ ನಿಶ್ಶಕ್ತಿಯೊಂದು ಕಡೆ, ಹಸಿವೆ ಮತ್ತೊಂದು ಕಡೆ, ಇವುಗಳಿಂದ ತಲೆ ಸುತ್ತಿಬರುತ್ತಿತ್ತು. ಅವನು ತನ್ನನ್ನು ವಿಚಾರಿಸಲು ಆ ಮುಖಂಡನು ಬಂದಾಗ, ತನಗೆ ಯಾವುದಾದರೂ ಆಹಾರ ಬೇಕೆಂದು ತನ್ನ ಹೊಟ್ಟೆಯನ್ನು ಮುಟ್ಟಿ ತೋರಿಸಿ, ಸಂಜ್ಞೆಮಾಡಿದ. ಗೋವಿಂದರಾಜನ ಅಸಾಹಯಕ ಸ್ಥಿತಿ, ಅವನ ದೀನ ಮುಖವನ್ನು ನೋಡಿ ಅವನಿಗೆ ಅದೇನೆನಿ

ಸಿತೋ ! ಅವನು ಕೂಡಲೇ, ಒಬ್ಬ ಸೇವಕನೊಂದಿಗೆ ಕರಿದಿದ್ದ ಮಾಂಸ, ಒಂದು ದೊಡ್ಡ ಮಣ್ಣಿನ ಮಡಕೆಯ ತುಂಬ ಬಿಸಿಬಿಸಿಯಾದ ಹುಳಿಯ ಹೆಂಡವನ್ನು ತಂದು ಇರಿಸಿದ. ಅದನ್ನು ನೋಡುತ್ತಲೇ, ಅದರ ಸುವಾಸನೆಯನ್ನು ಹಿಡಿಯುತ್ತಲೇ ಗೋವಿಂದರಾಜನ ಗ್ರಹಣೇಂದ್ರಿಯಗಳು ಚುರುಕಾಗಿ ಕೆಲಸಮಾಡಲಾರಂಭಿಸಿದುವು. ಅವನ ಬಾಯಲ್ಲಿ ನೀರೂರಿತು. ಆದರೆ, ಎದುರಿಗಿರುವುದು ಮಾಂಸ, ಹಾಗು ಮದ್ಯಗಳೆಂದು ತಿಳಿದಾಗ, ಅವನಿಗೆ ತುಂಬ ನಿರಾಶೆಯೇ ಆಯಿತು. ಅವನು ಸಂಜ್ಞೆಮಾಡಿ, ತಾನು ಬ್ರಾಹ್ಮಣನೆಂದು, ಹಾಕಿಕೊಂಡಿದ್ದ ಯಜ್ಞೋಪವೀತವನ್ನು ತೋರಿಸಿ, ತಾನು ಮಾಂಸಾಹಾರವನ್ನು ಸೇವಿಸುವುದಿಲ್ಲವೆಂದು ಹೇಳಿದಾಗ, ಗೋವಿಂದರಾಜನ ವಿಷಯದಲ್ಲಿ ಅವನಿಗೆ ನಿಜವಾಗಿಯೂ ಭಯ ಭಕ್ತಿ ಉಂಟಾಗಿ, ಅವನು ಕೂಡಲೇ ಹೋಗಿ ಒಂದು ಮಣ್ಣಿನ ತಟ್ಟೆಯ ತುಂಬ, ಬೇಯಿಸಿದ ಕಾಳು, ಮತ್ತು ಅಡವಿಯಲ್ಲಿ ದೊರೆಯುವ ಗೆಡ್ಡೆಗೆಣಸು, ಹಣ್ಣು ಹಂಪಲುಗಳನ್ನೂ, ಒಂದು ತಂಬಿಗೆಯ ತುಂಬ ಹಾಲನ್ನೂ ತಂದು ಎದುರಿಗೆ ಇಟ್ಟು ನಮಸ್ಕಾರ ಮಾಡಿದ. ತಾನು ಬ್ರಾಹ್ಮಣನೆಂದು ತಿಳಿದುದರಿಂದ, ಅವರಿಗೆ ತನ್ನಲ್ಲಿ ಭಯಭಕ್ತಿಯುಂಟಾಗಿರಬೇಕೆಂದು ಭಾವಿಸಿ, ಅವನು ಆ ಚೋರ ಮುಖಂಡನೊಡನೆ ಗೆಳೆತನ ಬೆಳೆಸಲು 'ಜೈ ಭವಾನಿ' ಎಂದು ಹೇಳಿ, ಹಣ್ಣು ಹಂಪಲನ್ನು ತಿನ್ನಲು ತೊಡಗಿದ.

ಗೋವಿಂದರಾಜನ ಬಾಯಲ್ಲಿ 'ಜೈ ಭವಾನಿ' ಎಂದು ಬರುತ್ತಲೂ ಅವನು ಗೋವಿಂದರಾಜನಿಗೆ ದೀರ್ಘದಂಡ ನಮಸ್ಕಾರ ಹಾಕಿ ಕೈಕಟ್ಟಿ ನಿಂತುಕೊಂಡ. ಇದರಿಂದ ಗೋವಿಂದರಾಜನಿಗೆ ಇನ್ನಷ್ಟು ವಿಸ್ಮಯವಾಯಿತು. ಅವನು ತಂದಿಟ್ಟಿದ್ದ ಹಣ್ಣು ಹಂಪಲುಗಳಿಂದ ತನ್ನ ಹಸಿವೆಯನ್ನು ಹಿಂಗಿಸಿ, ಆ ಚೋರ ಮುಖಂಡನಿಗೆ ಧನ್ಯವಾದ ಹೇಳಿ, ಆಯಾಸ ಪರಿಹರಿಸಿಕೊಳ್ಳಲು ಅಲ್ಲೇ ಇದ್ದ ಈಚಲು ಚಾಪೆಯ ಮೇಲೆ ಮಲಗಿಕೊಂಡನು. ಹೀಗೆ ಅವನು ಅದೆಷ್ಟು ಹೊತ್ತು ನಿದ್ರೆಮಾಡಿದ್ದನೋ ಅವನಿಗೆ ತಿಳಿಯದು. ಅವನು ಎಚ್ಚತ್ತು ನೋಡಿದಾಗ ಸೂರ್ಯೋದಯವಾಗಿತ್ತು. ಬಹುಶಃ ಇಡೀ ರಾತ್ರಿ ತಾನು ನಿದ್ರಿಸಿರಬೇಕೆಂದು ಅಂದುಕೊಂಡ ಗೋವಿಂದರಾಜ.

ದೀರ್ಘಕಾಲದ ನಿದ್ರೆ ಗೋವಿಂದರಾಜನಿಗೆ ಎಷ್ಟೋ ಗೆಲುವುಂಟು ಮಾಡಿತ್ತು. ಕಾಲಿನ ಗಾಯದ ನೋವು ಈಗ ಕಡಿಮೆಯಾಗಿತ್ತು. ಅವನು ಚಾಪೆಯ ಮೇಲೆ ಹೊರಳಿ ಹೊರಗೆ ನೋಡಿದ. ನಿನ್ನೆ ಬಂದಿದ್ದ ಗುಂಪಿನ ಜನರೆಲ್ಲ ಈಗ ಪ್ರಯಾಣ ಸನ್ನದ್ಧರಾಗುತ್ತಿದ್ದರು. ಈಗ ಎಲ್ಲರೂ ಒಂದೊಂದು ಕುದುರೆಗಳನ್ನು ಸಿದ್ಧಪಡಿಸುತ್ತಿದ್ದರು. ಕುದುರೆಯ ಇರ್ಕಡೆಗಳಲ್ಲಿ ದೊಡ್ಡ ದೊಡ್ಡ ಮೂಟೆಗಳನ್ನು ಹಾಕಲಾಗಿತ್ತು.

ಗೋವಿಂದರಾಜನು ಎಚ್ಚೆತ್ತುದನ್ನು ನೋಡಿ ಆ ಚೋರಮುಖಂಡನು ಅವನಿಗೆ ನೀರು ಕೊಟ್ಟು, ಬೆಳಗಿನ ನಿತ್ಯವಿಧಿಗಳಿಗೆ ತಾನೇ ಕರೆದುಕೊಂಡು ಹೋದನು. ಅನಂತರ ಲಘುವಾದ ಫಲಹಾರ ಸೇವನೆಯಾದ ಮೇಲೆ ಅವನನ್ನೂ ತಮ್ಮೊಡನೆ ಕುದುರೆಯ ಮೇಲೆ ಕರೆದುಕೊಂಡು, ಹೊರಗೆ ಹೊರಟರು!

ಅವರು ಎಲ್ಲಿಗೆ ಹೊರಟಿರುವರೆಂದು ಗೋವಿಂದರಾಜನು ತಿಳಿಯದಿದ್ದರೂ ಅವರನ್ನು, ಹಿಂಬಾಲಿಸಿ ಹೊರಟ. ಅವನಿಗೆ ಈ ಕುದುರೆಗಳ ಮೇಲೆ ಹೊರಟಿರುವ ಚೋರರೆಲ್ಲರೂ ಎಲ್ಲಿಗೆ ಹೊರಟಿದ್ದಾರೆ, ಅವರ ಉದ್ದೇಶ್ಯವೇನು ಎಂದು ತಿಳಿಯದಾಯಿತು. ಸುಮಾರು ಐವತ್ತು ಮಂದಿ ಕುದುರೆಗಳ ಮೇಲೆ ಹೊರಟಿರುವುದನ್ನು ನೋಡಿ ಅವರು ಯಾವುದೋ ಮುತ್ತಿಗೆಗೆ ಹೊರಟಿರಬಹುದೋ ? ಕೊಳ್ಳೆಗೆ ಹೊರಟಿರಬಹುದೋ ? ಯಾತ್ರೆಗೆ ಹೊರಟಿರಬಹುದೋ ? ಎಂಬ ಸಂದೇಹಕ್ಕೆ ಬಿದ್ದ. ಅದಕ್ಕೆ ತಕ್ಕಂತೆ ಕುದುರೆಯ ಮೇಲೆ ಇದ್ದ ಚೀಲಗಳಲ್ಲಿ ಅಡಗಿಸಿದ್ದ ಪದಾರ್ಥಗಳನ್ನು ನೋಡಿಯೇ ಅವನು ಬೆರಗಾಗಿದ್ದ. ಅವುಗಳಲ್ಲಿ ಅಕ್ಕಿ, ಬೇಳೆ, ಬೆಲ್ಲ, ಕಾಯಿಪಲ್ಯಗಳೇ ಮೊದಲಾದ ನಿತ್ಯೋಪಯೋಗವಸ್ತುಗಳಿದ್ದುವು. ಮುತ್ತು ರತ್ನ, ಬಂಗಾರದ ನಾಣ್ಯಗಳು, ಒಡವೆವಸ್ತುಗಳೂ ಇದ್ದುವು. ಕತ್ತಿ ಗುರಾಣಿ, ಈಟಿ, ಬಿಲ್ಲು ಬಾಣಗಳೂ ಕೋವಿಗಳೂ ಇದ್ದುವು. ಇವುಗಳನ್ನು ಅವರು ಎಲ್ಲಿಗೆ ಸಾಗಿಸುತ್ತಿದ್ದಾರೆ ಎಂಬುದು ಅವನೆಷ್ಟು ಆಲೋಚಿಸಿದರೂ ತಿಳಿಯದಾಯಿತು. ಗೋವಿಂದರಾಜನಿಗೆ ಈ ಕಳ್ಳರ ವರ್ತನೆ ಅಚ್ಚರಿಯನ್ನು ಉಂಟುಮಾಡಿದ್ದರೂ ಅದರಲ್ಲಿ ಯಾವ ವಿಶೇಷವಿರಲಿಲ್ಲ. ರಾಮಗಿರಿ ಪ್ರಾಂತ್ಯವು ಮೊದಲಿನಿಂದಲೂ ಚೋರರ ಸೀಮೆ ಎಂದೇ ಪ್ರಸಿದ್ಧ

ವಾಗಿತ್ತು. ಆ ಪ್ರಾಂತದಲ್ಲಿ, ನೂರಾರು ಮೈಲಿ ಪ್ರದೇಶಗಳಲ್ಲಿ ಕಳ್ಳರ ಸಂಸಾರಗಳು ವಾಸಿಸುತ್ತಾ, ತಮ್ಮದೇ ಆದ ಒಂದು ರಾಜ್ಯವನ್ನು ಕಟ್ಟಿದ್ದರು. ಅವರಿಗೆ ಒಬ್ಬ ನಾಯಕನೂ ಇದ್ದ. ಅವನು ರಾಮುಗಿರಿ ದುರ್ಗದಲ್ಲಿ ವಾಸಿಸುತ್ತಿದ್ದ. ಅವನಿಗೆ ಪ್ರತಿ ಹುಣ್ಣಿಮೆಯ ದಿನ, ಚೋರರೆಲ್ಲರೂ ಆಯಾ ತಿಂಗಳು ತಾವು ಮಾಡಿದ್ದ ಸುಲಿಗೆ ದರೋಡೆಗಳ, ಹತ್ತನೆಯ ಒಂದು ಪಾಲನ್ನು ತಂದು ರಾಜಾದಾಯವಾಗಿ ಸಲ್ಲಿಸಬೇಕಾಗಿತ್ತು. ಅಲ್ಲದೆ, ಚೋರ ಸಮುದಾಯಕ್ಕೆ ಸಂಬಂಧಿಸಿದ ನೂರಾರು ಸಂಗತಿಗಳನ್ನು ಪರಿಶೀಲಿಸಲು ದುರ್ಗದ ಮೇಲೆ ಚೋರ ಪರಿಷತ್ತು ನಡೆಯುತ್ತಿತ್ತು. ಈ ಪರಿಷತ್ತಿಗೆ, ಚೋರ ಸೀಮೆಯ ಪ್ರತಿನಿಧಿಗಳು ಅಂದರೆ, ಮನೆಗೊಬ್ಬರಂತೆ ಬಂದು ನೆರೆಯುತ್ತಿದ್ದರು. ಮೊದಲು ಅವರೆಲ್ಲರೂ ಬಂದು, ಆ ಗವಿಯ ಪ್ರದೇಶದಲ್ಲಿ ಸೇರುತ್ತಿದ್ದರು. ಅನಂತರ ಅಲ್ಲಿ ಇದ್ದ ಕುದುರೆಗಳನ್ನೇರಿ, ರಾಮುಗಿರಿ ದುರ್ಗಕ್ಕೆ ಸಕಾಲದಲ್ಲಿ ಬಂದು ಸೇರುತ್ತಿದ್ದರು. ಇದೇ ಬಹಳ ದಿನಗಳಿಂದ ಅನೂಚಾನವಾಗಿ ನಡೆದು ಬಂದಿದ್ದ ಪದ್ಧತಿ.

ಇಂದು ಚೋರರ ಗುಂಪು ರಾಮುಗಿರಿ ದುರ್ಗಕ್ಕೆ ಹೊರಟ್ಟಿದ್ದ ಸನ್ನಿವೇಶದಲ್ಲಿ ಅವರ ಕೈಗೆ ಗೋವಿಂದರಾಜನು ಸಿಕ್ಕಿದ್ದುದರಿಂದ, ಅವನನ್ನು ಏನು ಮಾಡಬೇಕೆಂದು ತಿಳಿಯದೆ, ತಮ್ಮ ನಾಯಕನಿಗೆ ಒಪ್ಪಿಸಲು ಅವನನ್ನೂ ತಮ್ಮ ಜೊತೆಯಲ್ಲಿಯೇ ಕರೆತಂದಿದ್ದರು.

ಕಾಡುಪ್ರದೇಶದಲ್ಲಿ ಅವರು ಒಂದು ದಿನವೆಲ್ಲ ಪ್ರಯಾಣ ಮಾಡಿದ ಮೇಲೆ ರಾಮುಗಿರಿ ಬೆಟ್ಟದ ತಪ್ಪಲಿಗೆ ಬಂದು ಮುಟ್ಟಿದರು.

ರಾಮುಗಿರಿ ಬೆಟ್ಟ ಆ ಪ್ರದೇಶದಲ್ಲೆಲ್ಲ ತುಂಬ ಎತ್ತರವಾದ ಬೆಟ್ಟ. ಅದು ಹಿಂದೆ ಪುರಾಣಪ್ರಸಿದ್ಧವಾದ ಸ್ಥಳವಾಗಿತ್ತು. ಅಲ್ಲಿ ಒಂದು ಪುರಾತನ ಭವಾನಿಯ ಗುಡಿ ಇದೆ. ಹಿಂದೆ, ಆನೆಗೊಂದಿಯ ಅರಸರ ಕಾಲಕ್ಕೆ ಅದು ಒಂದು ಯಾತ್ರಾಸ್ಥಳವಾಗಿತ್ತು. ಅರಸರು ಬಿದ್ದು ಹೋಗಿದ್ದ ಗುಡಿಯನ್ನು ಜೀರ್ಣೋದ್ಧಾರ ಮಾಡಿ, ಅದಕ್ಕೊಂದು ಕೈಸಾಲೆಯನ್ನು ಕಟ್ಟಿಸಿದರು. ಅಲ್ಲದೆ ಒಂದು ಸಣ್ಣ ಕೊಳವೂ ದೇವಾಲಯದ ಸುತ್ತಲೂ ಪ್ರಾಕಾರವೂ ಕಟ್ಟಲ್ಪಟ್ಟಿತು. ಯಾತ್ರಿಕರ ಅನುಕೂಲಕ್ಕಾಗಿ, ಅನೇಕ ಬಿಡದಿ ಮನೆಗಳೂ, ಮಂಟಪಗಳೂ ಏರ್ಪಟ್ಟಿದ್ದುವು. ಆ ದೇವಾಲಯಕ್ಕೆ ಭಕ್ತಾದಿಗಳು

ತಂಡತಂಡವಾಗಿ ಬಂದು ಹರಕೆ ಸಲ್ಲಿಸುತ್ತಿದ್ದರು.

ಅಲ್ಲಿ ಇದ್ದ ದೇವಾಲಯಕ್ಕಿಂತ ತಾನಾಗಿಯೇ ಬೆಳೆದಿದ್ದ ಬೃ ದಾಕಾರದ, ದೆವ್ವದಂತಹ ಹುಣಿಸೆಮರ ಹೆಚ್ಚು ಪ್ರಸಿದ್ಧವಾಗಿತ್ತು. ಅ ಬ್ರಹ್ಮರಾಕ್ಷಸನು ವಾಸಿಸುತ್ತಿರುವನೆಂದು ಪ್ರತೀತಿ ಇತ್ತು. ದೆವ್ವ, ಗಾ ಭೂತ ಪ್ರೇತಗಳಿಂದ ತೊಂದರೆಯನ್ನು ಅನುಭವಿಸುತ್ತಿದ್ದವರು ಅಲ್ಲಿ ಬಂದು ಪುಷ್ಕರಣಿಯಲ್ಲಿ ಮಿಂದು, ಭವಾನಿಯ ಭಂಡಾರವನ್ನು ಹಣೆ ಇಟ್ಟುಕೊಂಡು ಹುಣಿಸೆಮರಕ್ಕೆ ಒಂದು ಮೊಳೆಯನ್ನು ಹೊಡೆದರೆ ಅಲ್ಲಿ ಅವರ ಮೈಮೇಲಿದ್ದ ಭೂತಪ್ರೇತಗಳು ಹಾರಿಹೋದಂತೆಯೇ ಸರಿ. ಹೀ ಆ ಹುಣಿಸೇಮರದಲ್ಲಿ ದಿಗ್ಬಂದನವಾಗಿದ್ದ ಭೂತ ಪ್ರೇತಗಳ ಸಂ ಎಣಿಕೆಗೆ ನಿಲುಕದಷ್ಟು. ಭವಾನಿಯ ಶಕ್ತಿ ಎಂದರೆ ಸಾಮಾನ್ಯವೇ ಆವಳ ಮುಂದೆ ಎಷ್ಟೋ ಬಲಶಾಲಿಯಾದ ಭೂತಪ್ರೇತಗಳು ಬಾಲ ಮುದು ಕೊಂಡು ತಣ್ಣಗಾಗಿ, ಹುಣಿಸೆಯ ಮರದಲ್ಲಿ ಸೆರೆಯಾಗಿರುತ್ತಿದ್ದು ಹೀಗೆ ಸೆರೆಯಾಗಿದ್ದ ಒಂದು ಬ್ರಹ್ಮರಾಕ್ಷಸನ ಕೀರ್ತಿ ಆ ಪ್ರಾಂತ್ಯದಲ್ಲಿ ಪ್ರಸಿದ್ಧಿಯನ್ನು ಪಡೆದಿತ್ತು.

ಮೊದಮೊದಲು ಯಾತ್ರಿಕರು ತಂಡೋಪತಂಡವಾಗಿ ಬಂ ಸೇವೆ ಸಲ್ಲಿಸಿಹೋಗುತ್ತಿದ್ದರು. ಆದರೆ ಕಾಲಗತಿ ಭವಾನಿಯನ್ನೂ ಬಿಡಲಿ ವೆಂದು ತೋರುತ್ತದೆ. ಕೆಲವು ಕಾಲಾನಂತರ ಅಲ್ಲಿಗೆ ಬರುತ್ತಿದ್ದ ಯಾತ್ರಿಕ ಸಂಖ್ಯೆ ಕಡಿಮೆಯಾಯಿತು. ಕೊನೆಕೊನೆಗೆ ಭವಾನಿಯ ಭಕ್ತರಿಗೆ ದೇ ಯಲ್ಲಿ ನಂಬಿಕೆ ತಪ್ಪಿತೋ, ಅಥವಾ ಹುಣಿಸೆಮರದ ಬ್ರಹ್ಮರಾಕ್ಷಸನಿ ಹೆದರಿದರೋ, ಅಂತೂ ಅಲ್ಲಿಗೆ ಪೂಜೆಗೆಂದು ಯಾರೂ ಬರುತ್ತಿರಲಿ ಅಲ್ಲಿದ್ದ ಪೂಜಾರಿ ಗಂಟು ಮೂಟೆ ಕಟ್ಟಿಕೊಂಡು ಎಂದೋ ಬೆಟ್ಟವನ್ನು ಬಿಟ್ಟ ಭವಾನಿಯನ್ನು ತೊರೆದು ಓಡಿ ಹೋದ. ಗುಡಿ ಪಾಳು ಬಿತ್ತು. ದೇವಿ ಮೇಲೆ ಒಂದು ಗೇಣು ದೂಳು ಮುಚ್ಚಿತು. ಕೊಳದ ನೀರು ಪಾಚಿಕಟ್ಟಿತ ದೇವಾಲಯದಲ್ಲಿ ಪ್ರಾಣಿಪಕ್ಷಿಗಳು ವಾಸಿಸಲು ತೊಡಗಿದುವು. ಹೀಗಾ ಭವಾನಿಯ ಗುಡಿ ಎಷ್ಟು ಬೇಗ ಪ್ರಸಿದ್ಧಿಯನ್ನು ಪಡೆಯಿತೋ ಅಷ್ಟೆ ಬೇಗ ಅದು ಜನಸಾಮಾನ್ಯರ ದೃಷ್ಟಿಯಿಂದ ಮರೆಯಾಗಿತ್ತು.

ಹೀಗಾಗಲು ಮುಖ್ಯಕಾರಣ ರಾಮಗಿರಿಯ ಪ್ರಾಂತ್ಯದ ದಟ್ಟವಾ

ಕಾಡು. ಅಲ್ಲಿ ವಾಸಿಸುತ್ತಿದ್ದ ಕ್ರೂರ ಜಂತುಗಳಾದ ಹುಲಿ, ಚಿರತೆ, ಕಾಡು ಹಂದಿಗಳ ಹೆದರಿಕೆ. ಅಷ್ಟೇ ಹೆದರಿಕೆ ಆ ಪ್ರದೇಶದಲ್ಲಿ ಸೇರಿಕೊಂಡು, ಪ್ರಯಾಣಿಕರನ್ನು ಯಾತ್ರಿಕರನ್ನು ಸುಲಿದು, ಕೊಳ್ಳೆಹೊಡೆಯುತ್ತಿದ್ದ ಕಳ್ಳಕಾಕರರಿಂದಲೂ ಉಂಟಾಗಿತ್ತು. ಭವಾನಿಯ ಸೇವೆಗೆಂದು ಬರುತ್ತಿದ್ದ ಭಕ್ತಾದಿಗಳಿಗೆ ತಾವು ಸಜೀವವಾಗಿ ಮನೆ ಸೇರುವುದು ಸಂಶಯವಾದ ಮೇಲೆ ಅವರು ಯಾತ್ರೆ ಬರುವುದನ್ನೇ ನಿಲ್ಲಿಸಿದರು. ಇದರ ಜೊತೆಗೆ ಹುಣಿಸೆ ಮರದಲ್ಲಿ ವಾಸಿಸುತ್ತಿದ್ದ ಬ್ರಹ್ಮರಾಕ್ಷಸನು ಆ ಪ್ರದೇಶದಲ್ಲಿ ಒಂಟಿಯಾಗಿ ಬರುವವರ ಮೇಲೆ ಸೇಡುತೀರಿಸಿಕೊಳ್ಳಲು ಚಿತ್ರಹಿಂಸೆ ಕೊಡುವನೆಂಬ ಪ್ರತೀತಿ ಜೇರೆ ಹುಟ್ಟಿತ್ತು. ಇದಕ್ಕೆ ಕಾರಣವೂ ಇತ್ತು. ಕಳ್ಳಕಾಕರ ಕೈಗೆ ಸಿಕ್ಕಿ ನರಳಿದವರು ಈ ಬ್ರಹ್ಮರಾಕ್ಷಸನ ಕಥೆಯನ್ನು ಹಬ್ಬಿಸಿಬಿಟ್ಟಿದ್ದರು. ಇವೆಲ್ಲ ಕಾರಣಗಳಿಂದಾಗಿ ರಾಮಗಿರಿ ಪರ್ವತ ಪ್ರಾಂತ್ಯವೆಂದರೆ ಯಾರೂ ಧೈರ್ಯವಾಗಿ ಪ್ರವೇಶಿಸುತ್ತಿರಲಿಲ್ಲ.

ಇದು ಅಲ್ಲಿ ವಾಸಿಸುತ್ತಿದ್ದ ಕಳ್ಳರಿಗೆ ಅನುಕೂಲವೇ ಆಯಿತು. ಅವರಿಗೆ ಸರಿಯಾದ ನೆಲೆಯಿಲ್ಲದೆ, ರಕ್ಷಣೆ ಇಲ್ಲದೆ ಸ್ಥಳದಿಂದ ಸ್ಥಳಕ್ಕೆ ತಿರುಗುವ ಕಷ್ಟ ತಪ್ಪಿತು. ಅವರು ತಮ್ಮ ಸಂಸಾರ ಸಮೇತ ದುರ್ಗದ ಸುತ್ತಲೂ ನೆಲೆಯಾಗಿ ನಿಂತರು. ರಾಮಗಿರಿ ದುರ್ಗ ಅವರ ರಾಜಧಾನಿ ಯಾಯಿತು. ಅಲ್ಲಿ ಚೋರರು ತಮ್ಮ ಭಂಡಾರವನ್ನೂ, ಆಯುಧಗಳನ್ನೂ ಶೇಖರಿಸಿಟ್ಟಿದ್ದರು. ಅಲ್ಲಿ ಅನೇಕ ಚೋರಸಂಸಾರಗಳು ವಾಸಿಸುತ್ತಿದ್ದುವು. ಅವರಿಗೆ ನಾಯಕನಾಗಿ ಒಡೆಯನಾಗಿ ಓಬನಾಯಕನೆಂಬುವನು ವಾಸಿಸುತ್ತಿದ್ದ. ಇವನು ಭವಾನಿಯ ಅವಿಚ್ಛಿನ್ನ ಭಕ್ತ. ದೇವಿಯ ಪೂಜೆಯ ಜೊತೆಗೆ ಚೋರರ ಹಿತರಕ್ಷಣೆಯೂ ಇವನಿಗೆ ಸೇರಿತ್ತು.

ಓಬನಾಯಕನು ಚೋರರ ನಾಯಕನಾದುದು ಒಂದು ವಿಚಿತ್ರವಾದ ಕಥೆ. ಭವಾನಿದೇವಿಯು ತನಗೆ ಭಕ್ತರು ಪೂಜೆ ಸಲ್ಲಿಸವೆ ಇರುವುದರಿಂದ ಅವರ ಮೇಲೆ ಕೋಪಗೊಂಡು ಆ ಪ್ರಾಂತ್ಯದ ಜನರನ್ನು ಹಿಂಸಿಸಲು ತನ್ನ ಭೂತಗಣವನ್ನು ಬಿಟ್ಟಿರುವಳೆಂಬ ಪ್ರತೀತಿ ಹರಡಿದುದೇ ತಡ, ಕಳ್ಳಕಾಕರರಿಗೆ ಆ ಪ್ರದೇಶ ಉಂಬಳಿಯಾಗಿ ಕೊಟ್ಟಂತಾಗಿತ್ತು. ಆ ಪ್ರದೇಶಕ್ಕೆ ಬೇರೆ ಬೇರೆ ಕಡೆಗಳಿಂದ, ಚೋರವೃತ್ತಿಯನ್ನು ಕೈಗೊಂಡಿದ್ದ ಜನರು

ಬಂದು ಸೇರಿಕೊಳ್ಳಲು ಆರಂಭಿಸಿದ್ದರು. ಹೀಗಾಗಿ ಚೋರರ ಸಂಖ್ಯೆಯು ಹೆಚ್ಚಿ ಅವರಲ್ಲೂ ಒಂದು ಬಗೆಯ ಶಿಸ್ತು, ಒಗ್ಗಟ್ಟು, ಆಡಳಿತವ್ಯವಸ್ಥೆ ಅನಿವಾರ್ಯವಾಯಿತು. ತಾವು ಸಂಘಟನೆ ಹೊಂದಿದರೆ ತಮಗೆ ಇದರಿಂದ ಹೆಚ್ಚು ಅನುಕೂಲವಿದೆ ಎಂದು ಅರಿತ ಅವರು ಬಲಾಢ್ಯನಾದ ಒಬ್ಬ ವ್ಯಕ್ತಿಯನ್ನು ತಮ್ಮ ನಾಯಕನನ್ನಾಗಿ ಮಾಡಿಕೊಳ್ಳಲು ನಿಶ್ಚಯಿಸಿದರು. ಅಂತಹ ಪರಿಸ್ಥಿತಿಯಲ್ಲಿ ಆ ಪ್ರದೇಶಕ್ಕೆ ಓಬನಾಯಕ ಬಂದುದು.

ಓಬನಾಯಕನು ಆ ಪ್ರದೇಶಕ್ಕೆ ಬಂದೊಡನೆಯೇ ಅವನಿಗೆ ಅಭೂತ ಪೂರ್ವಕವಾದ ಸ್ವಾಗತವೇ ದೊರೆಯಿತು. ಕಳ್ಳರು ಅವನನ್ನು ಕರೆದುಕೊಂಡು ಹೋಗಿ, ಭವಾನಿಯ ಸಮ್ಮುಖದಲ್ಲಿ ಅವನನ್ನು ತಮ್ಮ ನಾಯಕನೆಂದು ಒಪ್ಪಿಕೊಂಡರು. ಕಳ್ಳರು ಓಬನಾಯಕನನ್ನು ತಮ್ಮ ನಾಯಕನಾಗಿ ಆರಿಸಲು ಕಾರಣ, ಅವನಿಗೆ ಒಂದೇ ಒಂದು ಕೈ ಇದ್ದುದು. ಎಡಗೈ ಊನವಾಗಿತ್ತು. ಕಳ್ಳರ ಮುಖಂಡರ ಕನಸಿನಲ್ಲಿ ಭವಾನಿಯು ಕಾಣಿಸಿಕೊಂಡು, ಆ ಪ್ರದೇಶಕ್ಕೆ ಬರುವ ಒಂದು ಕೈಯುಳ್ಳ ವ್ಯಕ್ತಿಯನ್ನು ತಮ್ಮ ನಾಯಕನನ್ನಾಗಿ ಮಾಡಿಕೊಂಡರೆ, ಚೋರರಿಗೆ ಭಾಗ್ಯೋದಯವಾಗುವುದೆಂದೂ, ಅವರ ಸಾಂಪತ್ತಿಕ ಸ್ಥಿತಿ ಉತ್ತಮಗೊಳ್ಳುವುದೆಂದೂ ಹೇಳಿದ್ದಳಂತೆ. ಅವರು ಅನೇಕ ದಿನಗಳಿಂದ ತಮ್ಮನ್ನು ಉದ್ಧರಿಸಲು ಬರಲಿರುವ ಆ ನಾಯಕನಿಗಾಗಿ ಕಾಯುತ್ತಿದ್ದರು. ಅಂಥವರಿಗೆ, ಒಂದು ಕೈಯುಳ್ಳ ಓಬನಾಯಕನು ಭೇಟಿಯಾದಾಗ, ಭವಾನಿದೇವಿಯು ತಮ್ಮ ಕನಸಿನಲ್ಲಿ ನಿರ್ದೇಶಿಸಿದ್ದ ವ್ಯಕ್ತಿ ಅವನೇ ಎಂದು ಭಾವಿಸಿ, ಅವನಿಗೆ ಚೋರನಾಯಕನ ಪಟ್ಟಕಟ್ಟಿ, ತಮ್ಮ ಏಕೈಕ ಪ್ರಭುವೆಂದು ಸಾರಿದರು.

ಓಬನಾಯಕನಿಗೆ ಆಕಸ್ಮಿಕವಾಗಿ ದೊರೆತ ಈ ಸನ್ಮಾನ ಪುರಸ್ಕಾರಗಳಿಂದ ಮೊದಲು ಅಚ್ಚರಿಯಾಯಿತು. ಅನಂತರ ಎಲ್ಲವೂ ಭವಾನಿಯ ಕೃಪೆ ಎಂದು ಅವನು ದೈವದತ್ತವಾಗಿ ದೊರೆತಿದ್ದ ಅವಕಾಶವನ್ನು ಬಿಟ್ಟು ಕೊಡದೆ ಚೋರರ ನಾಯಕನಾಗಿ ನಿಂತು, ಅವರಲ್ಲಿ ಒಂದು ಸಂಘಟನೆಯನ್ನು ತಂದು ಅವರ ಶಕ್ತಿಯನ್ನು ವೃದ್ಧಿಸಿ, ಅವರ ಜೀವನ ಹೆಚ್ಚು ಸುಖಮಯವಾಗುವಂತೆ ಮಾಡಿದ್ದ. ಚೋರರ ಸ್ಥಿತಿಗತಿಗಳನ್ನು ಉತ್ತಮ ಪಡಿಸಲು ತನ್ನಿಂದಾದಷ್ಟು ಪ್ರಯತ್ನ ಮಾಡಿದ್ದ. ಹೀಗಾಗಿ ಅವನು ಚೋರ ಸಮುದಾಯದ

ಲ್ಲೆಲ್ಲ ಗೌರವಾನ್ವಿತ ವ್ಯಕ್ತಿಯಾಗಿ, ಅವರ ಪ್ರೇಮಾದರಗಳಿಗೆ ಪಾತ್ರನಾಗಿದ್ದ.

ಓಬನಾಯಕನು ಬುದ್ಧಿವಂತ; ರಾಜತಂತ್ರ ನಿಪುಣ. ಅವನು ಚೋರನಾಯಕನಾಗಿ ಇದ್ದುದರ ಜೊತೆಗೆ ಭವಾನಿಯ ಪೂಜೆಯನ್ನೂ ಮಾಡುತ್ತಿದ್ದ. ಭವಾನಿಯು ತನ್ನ ಆಜ್ಞೆಗಳನ್ನು, ಸಂದೇಶಗಳನ್ನು ಅವನ ಮೂಲಕವೇ ಚೋರರಿಗೆ ಮುಟ್ಟಿಸುತ್ತಿದ್ದಳು. ಹೀಗಾಗಿ ಚೋರರಿಗೆ ಓಬನಾಯಕನ ಬಗ್ಗೆ ವಿಶೇಷ ಭಯ ಭಕ್ತಿಗಳು ಉಂಟಾಗಿದ್ದು, ಅವನ ಮಾತಿನಲ್ಲಿ ಎಲ್ಲರಿಗೂ ಗೌರವವಿತ್ತು; ಅವನು ಹೇಳಿದುವೇ ಕಡೆಯ ತೀರ್ಪು. ಅವನ ಮಾತೆಂದರೆ ಸ್ವಯಂ ಭವಾನಿಯೇ ನುಡಿದಂತೆ. ಅಷ್ಟರ ಮಟ್ಟಿನ ನಂಬಿಕೆಗೆ ಅವನು ಪಾತ್ರನಾಗಿದ್ದ.

ಓಬನಾಯಕನು ಚೋರನಾಯಕನಾಗಿ ನಿಂತ ಮೇಲೆ ಚೋರರ ಸ್ಥಿತಿ ಅನೇಕ ರೀತಿಯಲ್ಲಿ ಉತ್ತಮಗೊಂಡಿತ್ತು. ಅವರಲ್ಲಿ ಇದ್ದ ಸ್ವಾರ್ಥ, ಪರಸ್ಪರ ದ್ವೇಷ, ಅಂತಃಕಲಹಗಳು ಬಹುಮಟ್ಟಿಗೆ ಕಡಮೆಯಾಗಿದ್ದುವು. ಅವರಲ್ಲಿ ಒಗ್ಗಟ್ಟು ಉಂಟಾಗಿತ್ತು. ಅವರು ತಮ್ಮ ಜಗಳಗಳನ್ನು ಶಕ್ತಿ ಪ್ರದರ್ಶನದಿಂದ ತೀರ್ಮಾನಿಸುತ್ತಿದ್ದರು. ಇದು ತಪ್ಪಿ ಹೋಗಿ, ಅವರ ಎಲ್ಲ ಜಗಳಗಳೂ ಶಾಂತರೀತಿಯಲ್ಲಿ ಈಗ ಬಗೆಹರಿಯಲಾರಂಭಿಸಿತ್ತು. ಅವರು ಪರಸ್ಪರ ಹೊಡೆದಾಡುತ್ತಿರುವಾಗ, ಅವರಿಗೆ ನೆಮ್ಮದಿಯೇ ಇರಲಿಲ್ಲ. ಯಾವ ಗಳಿಗೆಯಲ್ಲಿ ಹೇಗೊ ಎನ್ನುವ ಭೀತಿ ಆವರಿಸಿತ್ತು. ಅವರ ಪರಸ್ಪರ ಸ್ವಾರ್ಥದಿಂದಾಗಿ, ಸುಲಿಗೆ ದರೋಡೆಗಳಲ್ಲೂ ಅವರಿಗೆ ಯಶಸ್ಸು ದೊರೆಯುತ್ತಿರಲಿಲ್ಲ. ಹೀಗಾಗಿ ಅವರ ಜೀವನ, ಹಿಂಸೆ, ಕ್ರೌರ್ಯ, ಬಡತನಗಳಲ್ಲಿ ಬೆಂದು ಹೋಗಿತ್ತು. ಓಬನಾಯಕನು ಅವರ ಮುಖಂಡನಾದ ಮೇಲೆ, ಅವರಲ್ಲಿದ್ದ ಅವಗುಣಗಳು ಬಹು ಮಟ್ಟಿಗೆ ಕಡಮೆಯಾಗಿ, ಅವರೆಲ್ಲರೂ ಒಬ್ಬ ಮುಖಂಡನ ನೇತೃತ್ವದಲ್ಲಿ ಸಹೋದರರಂತೆ, ತಮ್ಮ ವೃತ್ತಿಯನ್ನು ನಿರಾತಂಕವಾಗಿ, ಹೆಚ್ಚು ಸಂಘಟಿತರಾಗಿ, ನಡಸುವಂತೆ ಆಯಿತು. ಆಪತ್ಕಾಲದಲ್ಲಿ ನೆರವಾಗಲು, ಕಳ್ಳರು ತಾವು ಸಂಗ್ರಹಿಸಿದ್ದ ಪ್ರತಿಯೊಂದು ವಸ್ತುವಿನಲ್ಲೂ ಹತ್ತನೆಯ ಒಂದು ಭಾಗವನ್ನು ರಾಜಾದಾಯವಾಗಿ ಸಲ್ಲಿಸುತ್ತಿದ್ದರು. ಹೀಗಾಗಿ ರಾಮಗಿರಿ ದುರ್ಗದಲ್ಲಿ ಧನ ಧಾನ್ಯಗಳೂ, ಕತ್ತಿ, ಕೋವಿ, ಈಟಿ, ಮೊದಲಾದ ಯುದ್ಧೋಪಯೋಗಿ ಆಯುಧಗಳೂ ಸಂವೃದ್ಧಿಯಾಗಿದ್ದುವು.

ಪ್ರತಿ ಹುಣ್ಣಿಮೆಯ ದಿನ ಚೋರಮುಖಂಡರೆಲ್ಲ ರಾಮಗಿರಿ ದುರ್ಗದಲ್ಲಿ ಒಟ್ಟಿಗೆ ಸೇರಬೇಕಾಗಿತ್ತು. ಅಂದು ದೇವಿಗೆ ವಿಶೇಷ ಪೂಜೆ. ಬಂದವರಿಗೆಲ್ಲ ವಿಶೇಷ ಭೋಜನ. ಅಂದು ನಡೆಯುವ ಸಭೆಯಲ್ಲಿ ಚೋರರಿಗೆ ಸಂಬಂಧಿಸಿದ ನೂರಾರು ವಿಷಯಗಳು ಚರ್ಚಿಸಲ್ಪಡುತ್ತಿದ್ದುವು. ಅದು ಒಂದು ರೀತಿಯಾಗಿ ಚೋರ ಪರಿಷತ್ತೇ ಆಗಿತ್ತು. ಮೂರು ದಿನಗಳ ಕಾಲ ಈ ಸಭೆ ನಡೆಯುತ್ತಿತ್ತು. ಈ ಸಭೆಯಲ್ಲಿ ನಿರ್ಣಯಿಸಲ್ಪಟ್ಟ ಸಂಗತಿಗಳಿಗೆ ಉಳಿದವರೆಲ್ಲ ಬಾಗಬೇಕಾಗಿತ್ತು. ಇದನ್ನು ಧಿಕ್ಕರಿಸಿ ನಡೆಯುವ ಅಧಿಕಾರ ಯಾರಿಗೂ ಇರಲಿಲ್ಲ. ಈ ಪರಿಷತ್ತಿಗೆ ಪ್ರತಿಯೊಬ್ಬರ ಹುಟ್ಟು ಸಾವುಗಳ ಮೇಲೆ ಸಂಪೂರ್ಣ ಅಧಿಕಾರವಿತ್ತು. ಇದರ ಮಾತೇ ಶಾಸನ. ತಪ್ಪಿ ನಡೆದವರು ತಲೆದಂಡ ಕೊಡಬೇಕಾಗಿತ್ತು. ಚೋರರ ಶಾಸನ ಅಷ್ಟು ಉಗ್ರವಾಗಿತ್ತು !

ಈ ಪರಿಷತ್ತಿನ ಸಭೆಗೆ ಬರಬೇಕಾದ ಚೋರಮುಖಂಡರೆಲ್ಲ ತಪ್ಪದೆ ಬರುತ್ತಿದ್ದರು. ತುಂಬ ಅನಿವಾರ್ಯದ ಸಂದರ್ಭ ಉಳಿದು ಉಳಿದ ಕಾಲದಲ್ಲಿ ಅವರು ತಪ್ಪಿಸಿಕೊಳ್ಳುತ್ತಿರಲಿಲ್ಲ.

ನಾಳೆ ಹುಣ್ಣಿಮೆಯ ದಿನ ಪರಿಷತ್ತು ನಡೆಯಬೇಕಾಗಿತ್ತು. ಅನೇಕ ಕಡೆಗಳಿಂದ ಚೋರಮುಖಂಡರು ಇಂದಿನಿಂದಲೇ ಅಲ್ಲಿ ನೆರೆಯಲು ತೊಡಗಿದ್ದರು. ಈ ಬಾರಿ ಸಭೆಯಲ್ಲಿ ಒಂದು ವಿಶೇಷವಿತ್ತು. ಗೋವಿಂದರಾಜನನ್ನು ಅವರು ಸೆರೆ ಹಿಡಿದು ತಂದಿದ್ದರು. ಅವನ ಮೇಲೆ ಅವರಿಗೆ ರಾಯನ ಗುಪ್ತಚಾರನೆಂಬ ಗುಮಾನಿ ಬಂದಿತ್ತು. ರಾಜಪುತ್ರನಂತೆ ಕಾಣುತ್ತಿದ್ದ ಗೋವಿಂದರಾಜನು ಧೈರ್ಯವಾಗಿ ಚೋರಸೀಮೆಯಲ್ಲಿ ಬಂದು ವಿಶ್ರಮಿಸಿಕೊಳ್ಳುತ್ತಿರುವುದೆಂದರೆ ಸಾಮಾನ್ಯ ವಿಷಯವೇ ? ಕೃಷ್ಣದೇವರಾಯನು ಕಳುಹಿಸಿರುವ ಯಾವನೋ ಗುಪ್ತಚಾರನಿರಬೇಕೆಂದು ಶಂಕಿಸಿ, ಅವನನ್ನು ಓಬನಾಯಕನಿಗೆ ಒಪ್ಪಿಸಲು ಕರೆತಂದಿದ್ದರು. ಅವನು ಗುಪ್ತಚಾರನೆಂದು ತೀರ್ಮಾನಿಸಲ್ಪಟ್ಟರೆ, ಅವನನ್ನು ಭವಾನಿಗೆ ಬಲಿಕೊಡುವುದು ಖಂಡಿತವೆಂದು ತಿಳಿದು, ಎಲ್ಲರೂ ಈ ಬಗ್ಗೆ ಉತ್ಸುಕರಾಗಿದ್ದರು.

ಓಬನಾಯಕನು ಗೊತ್ತಾದ ವೇಳೆಗೆ, ಸಭೆಗೆ ಬಂದು ತನ್ನ ಆಸನದಲ್ಲಿ ಕುಳಿತ. ಅವನು ಸಭೆಗೆ ಬಂದೊಡನೆಯೇ, ಅವನ ಕಣ್ಣಿಗೆ ಗೋವಿಂದರಾಜನು ಬಿದ್ದ. ಉಳಿದ ವಿಷಯಗಳನ್ನು ಬದಿಗಿರಿಸಿ, ಗೋವಿಂದ

ರಾಜನು ಅವರ ಕೈಗೆ ಹೇಗೆ ಸಿಕ್ಕಿಕೊಂಡನೆಂಬ ಸಂಗತಿಯೇ ಮೊದಲು ವಿಚಾರಣೆಗೆ ಬಂದಿತು.

ಕಳ್ಳರ ಮುಖಂಡರು ತಮ್ಮ ಭಾಷೆಯಲ್ಲಿ ಏನೇನೋ ಹೇಳಿದರು. ಈಗ ಗೋವಿಂದರಾಜನ ಸರದಿ. ಅವನಿಗೆ ಓಬನಾಯಕನನ್ನು ನೋಡುತ್ತಲೇ ಒಂದು ಬಗೆಯ ಸಂತೋಷವುಂಟಾಗಿತ್ತು. ಅವನಿಗೆ ತಾನು ಆಡುವ ಭಾಷೆ ತಿಳಿಯಬಹುದು. ತನ್ನ ಕಥೆಯನ್ನೆಲ್ಲ ಕೇಳಿ ಅವನು ಸಹಾನುಭೂತಿಯಿಂದ ನಡೆದುಕೊಳ್ಳಬಹುದು, ತನಗೆ ನೆರವನ್ನು ಸಹ ಕೊಡಬಹುದು ಎಂದು ಅವನು ಕನಸು ಕಾಣುತ್ತಿದ್ದ. ಈಗ ಓಬನಾಯಕನು ತನ್ನೊಡನೆ ಕನ್ನಡದಲ್ಲಿಯೇ ಮಾತನಾಡಿದುದನ್ನು ಕೇಳಿದೊಡನೆಯೇ ಅವನು ಸಂತೋಷದಿಂದ ಜಿಗಿಯುವಂತೆ ಆಯಿತು. ಆದರೂ ಭಾವೋದ್ವೇಗವನ್ನು ಬಿಗಿಹಿಡಿದು, ಓಬನಾಯಕನಿಗೆ ತನ್ನ ಎಲ್ಲ ಸಂಗತಿಗಳನ್ನು ಕೆಲವೇ ಮಾತುಗಳಲ್ಲಿ ಹೇಳಿ, ನೆಲೆಯಿಲ್ಲದ ತನಗೆ, ಆಶ್ರಯವನ್ನು ಕೊಟ್ಟು ಕಾಪಾಡಬೇಕೆಂದು ಪ್ರಾರ್ಥಿಸಿದನು.

ಗೋವಿಂದರಾಜನ ವೃತ್ತಾಂತದಿಂದ ಓಬನಾಯಕನ ಮನಸ್ಸು ಕರಗಿತು. ಅವನು ಗೋವಿಂದರಾಜನನ್ನು ಗೆಳೆಯನೆಂದು ಸಂಬೋಧಿಸಿ ಗೌರವ ತೋರಿದ. ಯಾವ ಯೋಚನೆ ಇಲ್ಲದೆ ತನ್ನ ಸಂಗಡ ನಿರ್ಭಯವಾಗಿ ಇರಬಹುದೆಂದು ಆಶ್ವಾಸನವನ್ನು ಇತ್ತ. ಗೋವಿಂದರಾಜನ ಪ್ರತೀಕಾರದಲ್ಲಿ ಸಹಾನುಭೂತಿಯನ್ನು ವ್ಯಕ್ತಪಡಿಸಿ, ಅವನಿಗೆ ತನ್ನಿಂದಾಗುವ ಎಲ್ಲ ನೆರವನ್ನೂ ಕೊಡುವುದಾಗಿ ಭರವಸೆಯನ್ನು ಇತ್ತನು.

ಒಮ್ಮೆಲೇ ದೈವ ತನಗೆ ಒಲಿದು, ತನ್ನ ಎಲ್ಲ ಉದ್ಯಮದಲ್ಲಿ ಯಶಸ್ಸನ್ನು ದೊರಕಿಸಿ ಕೊಟ್ಟುದಕ್ಕಾಗಿ ಗೋವಿಂದರಾಜನು ತನ್ನ ದೈವವನ್ನು ಕೊಂಡಾಡಿದ. ಗೋವಿಂದರಾಜನಿಗೆ ರಹಮತ್‌ಖಾನನ ನೆರವು ದೊರೆಯದಿದ್ದರೆ, ಸೆರೆಮನೆಯಿಂದ ತಪ್ಪಿಸಿಕೊಂಡು ಬರಲು ಸಾಧ್ಯವೇ ಇರಲಿಲ್ಲ. ಕೋಟೆಯನ್ನು ಹಾರಿ ಬಂದಾಗಲೂ ದೈವ ಅವನನ್ನು ರಕ್ಷಿಸಿತ್ತು. ಅವನ ಕಾಲಿಗೆ ಗುಂಡು ಬಡಿದಿದ್ದರೂ ಶತ್ರುಗಳ ಕೈಯಿಂದ ಅವನನ್ನು ಪಾರುಮಾಡಿತ್ತು. ಮುಂದೆ ಹೇಗೋ ಎತ್ತೊ ಎಂದು ಕಂಗೆಟ್ಟಿದ್ದ ಅವನನ್ನು ಯೋಗ್ಯ ಸಂಗಡಿಗರ ನಡುವೆ ತಂದುಹಾಕಿತ್ತು. ಓಬನಾಯಕನ

ನೆರವಿನಿಂದ ಗೋವಿಂದರಾಜನು ತನ್ನ ಪ್ರತೀಕಾರವನ್ನು ಸಾಧಿಸಬಹುದಾಗಿತ್ತು. ತನಗೆ ಕೇಡನ್ನು ಬಗೆದ ವಿಜಯ ಭದ್ರನ ಮೇಲೆ ಸೇಡನ್ನು ತೀರಿಸಿಕೊಳ್ಳಬಹುದಾಗಿತ್ತು. ಇಂತಹ ಅಪೂರ್ವ ಸುಯೋಗ ದೊರಕಿಸಿ ಕೊಟ್ಟುದಕ್ಕಾಗಿ ಅವನು ತನ್ನ ಇಷ್ಟದೈವವನ್ನು ವಂದಿಸಿದ.

ಬಹುಬೇಗನೆ ಓಬನಾಯಕ ಮತ್ತು ಗೋವಿಂದರಾಜರು ಗೆಳೆಯರಾದರು. ಓಬನಾಯಕನಿಗೆ ತನ್ನಂತೆಯೇ ದುಃಖಿಯಾದ, ಪ್ರತೀಕಾರದ ದ್ವೇಷದಿಂದ ಕುದಿಯುತ್ತಿದ್ದ, ದುರ್ದೈವಿಯೊಬ್ಬನ ಪರಿಚಯವಾದುದಕ್ಕಾಗಿ ತುಂಬ ಸಂತೋಷವಾಗಿತ್ತು. ಅಂತಲೇ ಚೋರಸಮುದಾಯಕ್ಕೆ ತಮಗೊಬ್ಬ ಸಶಕ್ತನಾದ ಮಿತ್ರನೊಬ್ಬನು ದೊರೆತನೆಂದು ಅವರಿಗೂ ಸಂತೋಷವಾಗಿತ್ತು. ಈ ಸಂತೋಷವನ್ನು ಅವರು ತಮ್ಮದೇ ಆದ ವಿಶಿಷ್ಟ ರೀತಿಯಲ್ಲಿ ಭಾರಿ ಔತಣಮಾಡಿ, ತೋರ್ಪಡಿಸಿದರು.

ಓಬನಾಯಕನೂ ಜೀವನದಲ್ಲಿ ತುಂಬ ನೊಂದಿದ್ದ ವ್ಯಕ್ತಿ. ಅವನೂ ಗೋವಿಂದರಾಜನಂತೆ ಕೃಷ್ಣದೇವರಾಯನ ಅನ್ಯಾಯಕ್ಕೆ ಬಲಿಯಾಗಿದ್ದವನು. ರಾಯನ ಮೇಲೆ ಅವನಿಗೆ ಭಯಂಕರ ಸಿಟ್ಟು, ಅಸಮಾಧಾನವಿತ್ತು. ಸೇಡು ತೀರಿಸಲೆಂದೇ ಅವನು ಚೋರನಾಯಕನಾಗಿ ನಿಂತುದು. ಚೋರನಾಯಕನಾಗಿ ನಿಂತು, ರಾಯನಿಗೆ ಸೇರಿದ ಪ್ರದೇಶಗಳನ್ನು ಲೂಟಿಹೊಡೆದು, ಅವನ ಪ್ರಜೆಗಳ ನೆಮ್ಮದಿಗೆ ಭಂಗ ತರುವುದರ ಮೂಲಕ, ಕಿರುಕುಳ ಕೊಡುವುದರ ಮೂಲಕ ರಾಯನ ಮೇಲೆ ತನ್ನ ದ್ವೇಷವನ್ನು ಸಾಧಿಸುತ್ತಿದ್ದನು. ಅವನಿಗೆ ರಾಯನ ಮೇಲೆ ಇದ್ದ ದ್ವೇಷದ ಸಾವಿರಪಾಲು ದ್ವೇಷ ಕೊರಮನಾಯಕ ಭರಮನಾಯಕರ ಮೇಲೆ ಇತ್ತು. ಅವರನ್ನು ಹೇಗಾದರೂ ಮಾಡಿ ಸೆರೆಹಿಡಿದು, ಭವಾನಿಗೆ ಬಲಿಕೊಡುವುದರ ಮೂಲಕ ತನ್ನ ಸೇಡನ್ನು ತೀರಿಸಿಕೊಳ್ಳಬೇಕೆಂದು ಅವನು ನಿರ್ಧರಿಸಿದ್ದ. ಆದರೆ ಇದುವರೆಗೆ ಕೊರಮನಾಯಕ, ಭರಮನಾಯಕರು ಅವನ ಕೈಗೆ ಸಿಕ್ಕಿರಲಿಲ್ಲ. ಅವರು ಸಿಕ್ಕಿ ಬೀಳುವ ಪ್ರಸಂಗವೂ ಬಂದಿರಲಿಲ್ಲ. ಇದರಿಂದಾಗಿ, ಓಬನಾಯಕನು ರಾಯನ ಸೀಮೆಯನ್ನು ಕೊಳ್ಳೆಹೊಡೆದು ಪ್ರಜೆಗಳಿಗೆ ಉಪಟಳ ಉಂಟುಮಾಡುವುದರಲ್ಲೇ ತೃಪ್ತನಾಗಬೇಕಾಗಿತ್ತು.

ಇಂದಲ್ಲ, ನಾಳೆ ರಾಯನು ತನ್ನನ್ನು ಹಿಡಿಯಲು ಸೈನ್ಯವನ್ನು ಕಳುಹಿಸ

ಬಹುದು, ಚೋರರನ್ನು ಅಡಗಿಸಲು ಭರಮನಾಯಕ ಕೊರಮನಾಯಕ ರನ್ನು ಕಳುಹಿಸಬಹುದು. ಆಗ ತನ್ನ ಕೈ ತೋರಿಸಲು ಒಂದು ಅವಕಾಶ ಬಂದೀತೆಂದು ಕಾದಿದ್ದ ಓಬನಾಯಕ. ಈಗ ತನ್ನಂತೆಯೇ ಗೋವಿಂದ ರಾಜನೂ ರಾಯನ ಮೇಲೆ, ಮುಖ್ಯವಾಗಿ ವಿಜಯಭದ್ರನ ಮೇಲೆ ದ್ವೇಷ ಸಾಧಿಸುವ ವಿಷಯ ಅರಿತಾಗ, ತಾವಿಬ್ಬರೂ ಜೊತೆಗೂಡಿದುದು ದೈವ ತಮ್ಮಿಂದ ಯಾವುದೋ ಮಹತ್ಕಾರ್ಯ ಸಾಧಿಸುವ ಸಲವಾಗಿಯೇ ಎಂದು ಕೊಂಡ. ಅವನು ಗೋವಿಂದರಾಜನನ್ನು ತನ್ನೆಡೆಗೆ ಬರಮಾಡಿದುದಕ್ಕಾಗಿ ಭವಾನಿಯನ್ನು ಸಾವಿರ ಬಾರಿ ವಂದಿಸಿದ.

ಓಬನಾಯಕನಿಗೆ ಕೊರಮನಾಯಕ, ಭರಮನಾಯಕರ ಮೇಲೆ ಬಹು ಕಾಲದ ಹಗೆತನವಿತ್ತು. ಓಬನಾಯಕನು ಆ ಅಣ್ಣ ತಮ್ಮಂದಿರಿಗೆ ದೂರ ವೇನೂ ಅಲ್ಲ. ಅವನೂ ಅವರ ರಕ್ತಸಂಬಂಧಿಯೇ ಆಗಿದ್ದ.

ಕೃಷ್ಣದೇವರಾಯನಿಗೆ ಸಂಚಿ ಹಿಡಿಯುವ ಊಳಿಗ ಮಾಡುತ್ತಿದ್ದ ಅಡಿವಪ್ಪನಾಯಕನಿಗೆ ಇಬ್ಬರು ಹೆಂಡಿರು. ಮೊದಲನೆಯ ಹೆಂಡತಿಯ ಮಗ ಓಬನಾಯಕ. ಎರಡನೆಯ ಹೆಂಡತಿಯ ಮಕ್ಕಳೇ ಕೊರಮನಾಯಕ, ಭರಮ ನಾಯಕ. ತಾಯಿ ತೀರಿಹೋದ ಮೇಲೆ ಓಬನಾಯಕ ಮಲತಾಯಿಯ ಕೈಕೆಳಗೆ ಬಂದ. ಅಡಿವಪ್ಪನಾಯಕನು ಸದಾ ಯುದ್ಧಗಳಲ್ಲಿ ತೊಡಗಿದ್ದುದ ರಿಂದ, ಮಕ್ಕಳ ಯೋಗಕ್ಷೇಮವೆಲ್ಲ ಹೆಂಡತಿಯ ಮೇಲೆ ಬಿತ್ತು. ಅವಳು ಸವತಿ ಮತ್ಸರದಿಂದ, ಓಬನಾಯಕನನ್ನು ಪರಿಪರಿಯಾಗಿ ಗೋಳಾಡಿಸಿದಳು. ಅವಳ ಮಕ್ಕಳಾದ ಕೊರಮನಾಯಕ ಭರಮನಾಯಕರು ಓಬನಾಯಕ ನನ್ನು ಮನೆಯ ಸೇವಕನಂತೆ ನಡಸಿಕೊಂಡು, ಅಪಮಾನ ಮಾಡುತ್ತಿದ್ದರು. ಕಾಲ ಯಾವಾಗಲೂ ಒಂದೇ ಸಮನೆ ಇರುವುದಿಲ್ಲವೆಂದು ಹಲ್ಲು ಕಚ್ಚಿಕೊಂಡು ದಿನಗಳನ್ನು ಕಳೆಯುತ್ತ ಓಬನಾಯಕ ಬೆಳೆದು ದೊಡ್ಡವನಾದ.

ಆಗ ಅವನಿಗೆ ಇಪ್ಪತ್ತು ವರ್ಷ ವಯಸ್ಸು. ಈ ವಯಸ್ಸಿಗಾಗಲೇ ಅವನು ಒಳ್ಳೆಯ ಬಿಲ್ಗಾರನೆಂದು ಹೆಸರು ಪಡೆದಿದ್ದ. ರಾಯನ ಸೈನ್ಯದಲ್ಲಿ ಅವನಿಗೆ ಕೆಲಸವೂ ಸಿಕ್ಕಿತು. ಅಲ್ಲಿಗೆ ತನ್ನ ಮಲತಾಯಿಯ ಕೋಟಲೆಯಿಂದ ತಪ್ಪಿಸಿ ಕೊಂಡಂತೆ ಆಯಿತು. ಅವನು ತನ್ನ ಪಾಡಿಗೆ ತಾನು ಒಬ್ಬರ ತಂಟೆಗೆ ಹೋಗದೆ ಎಲ್ಲರಿಗೂ ಬೇಕಾದ ವ್ಯಕ್ತಿಯಾಗಿದ್ದ.

ಅವನ ಸದ್ಗುಣಗಳನ್ನು ಮೆಚ್ಚಿಕೊಂಡವರ ಪೈಕಿ ಮಲ್ಲಿಗೆಯೂ ಒಬ್ಬಳು. ಮಲ್ಲಿಗೆ ಹೆಸರಿಗೆ ತಕ್ಕಂತೆ ಚೆಲುವೆ. ಮೈ ಬಣ್ಣ ಕಪ್ಪಾದರೂ, ಮುಖದಲ್ಲಿ ಒಳ್ಳೆ ಕಳೆಯಿತ್ತು. ಚೆನ್ನಾಗಿ ಬೆಳೆದಿದ್ದ ಅವಳು ನಡೆದು ಬಂದರೆ, ನೋಡುತ್ತಿದ್ದವರ ಚಿತ್ತ ಕಲಕುತ್ತಿತ್ತು. ಅವಳ ನಗು ಮಲ್ಲಿಗೆಯು ನಕ್ಕಂತೆ. ಅಷ್ಟೇ ಮಧುರವಾಗಿತ್ತು. ಅವಳು ಓಬನಾಯಕನನ್ನು ಒಲಿದು ಬಂದಿದ್ದಳು. ಅವಳಿಗೆ ಓಬನಾಯಕನು ತನ್ನ ಹೃದಯದಲ್ಲಿ ಸ್ಥಳವನ್ನು ಕೊಟ್ಟಿದ್ದ. ಅವಳನ್ನು ಮದುವೆಯಾಗಿ ಸುಖಸಂಸಾರದ ಕನಸು ಕಟ್ಟುತ್ತಿದ್ದ; ಆದರೆ ಅವನ ಎಲ್ಲ ಕನಸನ್ನು ಮಣ್ಣುಗೂಡಿಸುವ ಪ್ರಸಂಗ ಬಂತು.

ಮಲ್ಲಿಗೆಯ ಮೇಲೆ ಕೊರಮನಾಯಕನ ವಕ್ರದೃಷ್ಟಿ ಬಿದ್ದಿತ್ತು. ಅವನ ದೃಷ್ಟಿಯಿಂದ ಅವಳು ತಪ್ಪಿಸಿಕೊಳ್ಳಲು ಸಮರ್ಥಳಾಗಲಿಲ್ಲ. ಒಂದು ದಿನ ಅವಳು ನೀರು ತರಲು ಹೊಂಡಕ್ಕೆ ಹೋಗಿರುವಾಗ, ಕೊರಮನಾಯಕನು ಅವಳ ಮೇಲೆ ಬಿದ್ದು ಮಾನಭಂಗಮಾಡಲು ಪ್ರಯತ್ನಿಸಿದನಂತೆ. ಅಲ್ಲಿಗೆ ಅಕಸ್ಮಾತ್ ಬಂದ ಓಬನಾಯಕನಿಗೆ ಅದನ್ನು ನೋಡಿ ರಕ್ತ ಕುದಿದು, ಅವನು ಕೊರಮನಾಯಕನಿಗೆ ಚೆನ್ನಾಗಿ ಥಳಿಸಿದನಂತೆ. ಅಪಮಾನಿತನಾದ ಕೊರಮನಾಯಕನು ಮಲ್ಲಿಗೆ ಹಾಗೂ ಓಬನಾಯಕನ ಮೇಲೆ ಸೇಡು ತೀರಿಸಿಕೊಳ್ಳಲು ನಿರ್ಧರಿಸಿದನಂತೆ.

ಅದರಂತೆ ಅವನು ಸಮಯ ಸಾಧಿಸಿ, ಒಂದು ದಿನ ಮಲ್ಲಿಗೆಯನ್ನು ಅಪಹರಿಸಿ, ಅವಳ ಮೇಲೆ ಅತ್ಯಾಚಾರಮಾಡಿ, ಅವಳು ಹೆಣವಾಗುವಂತೆ ಮಾಡಿದ. ವಿಷಯ ತಿಳಿದ ಓಬನಾಯಕ ಅಲ್ಲಿಗೆ ಬರುವ ವೇಳೆಗೆ ಕಾರ್ಯ ಮಿಂಚಿಹೋಗಿತ್ತು. ತನ್ನ ಕಣ್ಣೆದುರಿಗೇ ತನ್ನ ಪ್ರೇಯಸಿಯನ್ನು ಕ್ರೂರ ರೀತಿಯಲ್ಲಿ ಕೊಂದ ಅವನ ಮೇಲೆ ಓಬನಾಯಕನಿಗೆ ಕೆಟ್ಟ ಕೋಪ ಬಂತು. ಅವನನ್ನು ಕೊಲ್ಲಲೆಳಸಿ, ಅವನ ಮೇಲೆ ಬಿದ್ದ. ಈ ವೇಳೆಗೆ ಅಲ್ಲಿಗೆ ಭರಮನಾಯಕನು ಬಂದು ಕೊರಮನಾಯಕನನ್ನು ಕೂಡಿಕೊಂಡ. ಅವರ ಕೈ ಮೇಲಾಯಿತು. ಓಬನಾಯಕನಿಗೆ ಈ ಹೋರಾಟದಲ್ಲಿ ಒಂದು ಕೈ ಕತ್ತರಿಸಿಹೋಯಿತು. ಅಂದು ಅವನ ಪ್ರಾಣ ಉಳಿದುದೇ ಅವನ ಪುಣ್ಯ.

ತನಗಾದ ಅನ್ಯಾಯದಿಂದ ಕೆರಳಿ ಓಬನಾಯಕನು ರಾಯನ ಬಳಿಗೆ ಹೋಗಿ ದೂರು ಕೊಟ್ಟ. ವಿಚಾರಣೆಯಲ್ಲಿ, ಮಲ್ಲಿಗೆಯನ್ನು ಕೊಂದ

ಅಪವಾದ ಓಬನಾಯಕನ ಮೇಲೆ ಬಂತು. ಓಬನಾಯಕನಿಗೆ ಕೈ ಕಳೆದು ಕೊಂಡಷ್ಟೇ ಲಾಭವಾಯಿತು. ವಿಜಯಭದ್ರನ ಬೆಂಬಲ ಪಡೆದಿದ್ದ ಕೊರಮ ನಾಯಕ ಭರಮನಾಯಕರು ಯಾವ ಶಿಕ್ಷೆಯಿಲ್ಲದೆ ಪಾರಾದರು. ಓಬ ನಾಯಕನಿಗೆ ಮಲ್ಲಿಗೆಯನ್ನು ಕೊಂದುದಕ್ಕಾಗಿ, ಹನ್ನೆರಡು ವರ್ಷ ಕಠಿಣ ಶಿಕ್ಷೆ ಅನುಭವಿಸಬೇಕಾಗಿ ಬಂತು. ರಾಯನ ನ್ಯಾಯತೀರ್ಮಾನದಿಂದ ಓಬನಾಯಕನಿಗೆ ರಾಯನ ಮೇಲೆ ತುಂಬ ಸಿಟ್ಟು ಬಂತು. ಅಂತಲೇ ತನ್ನ ಮಲ್ಲಿಗೆಯನ್ನು ಕೊಂದು ಶಿಕ್ಷೆಯಿಂದ ತಪ್ಪಿಸಿಕೊಂಡ, ಕೊರಮನಾಯಕ, ಭರಮನಾಯಕರ ಮೇಲೆ ಹಗೆತನ ಹೆಪ್ಪುಗಟ್ಟಿತು. ಈ ಹನ್ನೆರಡು ವರ್ಷ ಕಾಲ ಅವನು ಸೆರೆಮನೆಯಲ್ಲಿದ್ದರೂ ಆತ ತನ್ನ ಶತ್ರುಗಳ ಮೇಲೆ ಇದ್ದ ದ್ವೇಷವನ್ನು ಮರೆಯಲಿಲ್ಲ.

ಬಿಡುಗಡೆಯಾದ ಮೇಲೆ ಅವರ ಮೇಲೆ ಹೇಗೆ ಸೇಡು ತೀರಿಸಿಕೊಳ್ಳ ಬೇಕೆಂಬುದೇ ಅವನ ಚಿಂತೆಯಾಯಿತು. ಅವನು ಯಾವ ಒಂದು ನಿರ್ಧಾರಕ್ಕೆ ಮುಟ್ಟದಿರುವಾಗ, ಸೆರೆಮನೆಯಲ್ಲಿ ಸ್ನೇಹಿತನಾಗಿದ್ದ ಒಬ್ಬ ಕಳ್ಳನ ಉಪದೇಶ ದಿಂದ ಓಬನಾಯಕನು ಚೋರವೃತ್ತಿ ಕೈಗೊಳ್ಳಲು ನಿರ್ಧರಿಸಿದ. ಚೋರ ಸೀಮೆಯೆಂದು ಪ್ರಸಿದ್ಧವಾಗಿದ್ದ ರಾಮಗಿರಿ ಪರ್ವತ ಪ್ರದೇಶಕ್ಕೆ ಬಂದಿದ್ದಾಗ, ದೈವಾನುಕೂಲ ಒದಗಿ ಅವನು ಚೋರಮುಖಂಡನಾಗಿದ್ದ.

ಅಂದಿನಿಂದ ಇಂದಿನ ವರೆಗೂ ಓಬನಾಯಕನ ಹೃದಯಲ್ಲಿ ಹೊಗೆ ಯಾಡುತ್ತಿದ್ದ ಪ್ರತೀಕಾರದ ಬೆಂಕಿ ಆರಿರಲಿಲ್ಲ. ಈಗ ಗೋವಿಂದರಾಜನು ಸಂಗಡಿಗನಾಗಿ ದೊರೆತುದು, ಬೆಂಕಿಗೆ ತುಪ್ಪ ಸುರಿದಂತೆ ಆಗಿತ್ತು. ಅವರಿ ಬ್ಬರೂ ಭವಾನಿಯ ಇದಿರಿನಲ್ಲಿ ನಿಂತು ತಮ್ಮ ಸಂಕಲ್ಪ ಈಡೇರುವ ತನಕ, ತಾವು ಎಲ್ಲ ಬಗೆಯ ಭೋಗ ಭಾಗ್ಯಗಳಿಗೆ ತಿಲಾಂಜಲಿಯನ್ನು ಇತ್ತಿರುವು ದಾಗಿ ಶಪಥಮಾಡಿದರು. ಆ ಗಳಿಗೆಯಿಂದಲೇ ಅವರಿಬ್ಬರೂ ಅಪೂರ್ವ ರೀತಿಯ ಸೋದರರಾದರು.

ಅವರ ಮುಂದೆ ಇದ್ದುದು ಒಂದೇ ಪ್ರಶ್ನೆ ಪ್ರತೀಕಾರ !

# ೧೮

ಗೋವಿಂದರಾಜನು ಚೋರರ ಉಪನಾಯಕನಾಗಿ ನಿಂತಮೇಲೆ ಮಾಡಿದ ಮೊದಲನೆಯ ಕೆಲಸವೆಂದರೆ ರಾಮಗಿರಿಯ ಬೆಟ್ಟದ ಸುತ್ತಲೂ ದುರ್ಗಮವಾದ ಕೋಟೆಯನ್ನು ಕಟ್ಟಿಸಿದುದು. ಈ ಕೋಟೆ ಕಟ್ಟಲು ಅಲ್ಲೇ ಇದ್ದ ಕಲ್ಲು, ಗುಂಡು, ಮಣ್ಣುಗಳನ್ನು ಉಪಯೋಗಿಸಿ, ಚೋರರಿಂದ ವಾರದ ಕೆಲಸ ಮಾಡಿಸಿದ. ಕೋಟೆಯ ಕೆಲಸ ಪೂರೈಸಿದ ಮೇಲೆ ಚೋರರನ್ನೆಲ್ಲ ಅಲ್ಲಿಗೆ ಬರಮಾಡಿಕೊಂಡು, ಮುದುಕರು, ಹುಡುಗರು ಹೆಂಗಸರನ್ನು ಬಿಟ್ಟು ಉಳಿದವರೆಲ್ಲರಿಗೆ ಸೈನಿಕ ಶಿಕ್ಷಣವನ್ನು ಶಾಸ್ತ್ರೋಕ್ತವಾಗಿ ಕೊಟ್ಟು ಸುವ್ಯವಸ್ಥಿತವಾದ ಸೈನಿಕ ಪಡೆಯನ್ನು ಸಿದ್ಧಗೊಳಿಸಿದನು. ಅನಂತರ ತಾವು ಆಲೋಚಿಸಿ ಗೊತ್ತುಪಡಿಸಿದ್ದ ಕಾರ್ಯಕ್ರಮದಂತೆ, ಸೈನ್ಯವನ್ನು ತುಕಡಿಗಳಾಗಿ ವಿಂಗಡಿಸಿ, ರಾಯನ ರಾಜ್ಯಕ್ಕೆ ಸೇರಿದ ಹಳ್ಳಿ ಊರುಗಳನ್ನು ಕೊಳ್ಳೆಹೊಡೆದು ಅವುಗಳಲ್ಲಿ ವಿದ್ರೋಹದ ಚಳುವಳಿಯನ್ನು ಎಬ್ಬಿಸಲು ಆರಂಭಿಸಿದನು.

ಈಗ ಚೋರರ ಸಣ್ಣಪುಟ್ಟ ಕೊಳೆ ಸುಲಿಗೆಗಳು ಸಂಪೂರ್ಣವಾಗಿ ನಿಂತುವು. ಸುಲಿಗೆಗೆ ಅವರು ಹೊರಟರೆಂದರೆ ಕುದುರೆಗಳ ಮೇಲೆ ಸುಸಜ್ಜಿತರಾಗಿ, ನೂರಾರು ಮಂದಿ ಹೊರಡುತ್ತಿದ್ದರು. ಹಳ್ಳಿಗಳನ್ನು ಮುತ್ತಿದರೂ, ಅಲ್ಲಿನ ಹೆಂಗಸರು ಮಕ್ಕಳು ದನಕರುಗಳ ತಂಟೆಗೆ ಹೋಗುತ್ತಿರಲಿಲ್ಲ. ಹಳ್ಳಿಯ ಬಡಜನರ ತಂಟೆಗೆ ಹೋಗುತ್ತಿರಲಿಲ್ಲ. ಶ್ರೀಮಂತರನ್ನು ಸುಲಿದು, ಅವರು ಇತರರ ಹೊಟ್ಟೆಯ ಮೇಲೆ ಹೊಡೆದು ಸಂಪಾದಿಸಿ ಕೂಡಿಟ್ಟ ಧನ ಧಾನ್ಯಗಳನ್ನು ಸೂರೆಮಾಡುತ್ತಿದ್ದರು. ಈ ಸೂರೆಯಲ್ಲಿ ಆದಷ್ಟು ಮಟ್ಟಿಗೆ ಹಿಂಸೆಗೆ ಅವಕಾಶ ಕೊಡದಂತೆ ನೋಡಿಕೊಳ್ಳಲಾಗಿತ್ತು. ಮನೆಗೆ ಬೆಂಕಿ ಇಡುವುದಾಗಲಿ ಹೆಂಗಸರನ್ನು ಬಲಾತ್ಕರಿಸುವುದಾಗಲೀ ಮಹಾ ಪಾಪವಾಗಿ ಪರಿಗಣಿಸಲ್ಪಟ್ಟಿತ್ತು. ಹೀಗೆ ಶಿಸ್ತು ಮೀರಿ ವರ್ತಿಸುವವರನ್ನು ಗುಂಡಿಟ್ಟು ಕೊಲ್ಲಲಾಗುತ್ತಿತ್ತು. ಅವರು ಚೋರರೇ ಆಗಿದ್ದರೂ ಅವರಲ್ಲಿ ಒಳ್ಳೆಯ ಶಿಸ್ತು, ಸಂಯಮವಿತ್ತು. ಚೋರರಿಂದ ಗ್ರಾಮಸ್ಥ

ರಿಗೆ ಯಾವ ವಿಧವಾದ ಹಾನಿಯಾಗದಂತೆ ನೋಡಿಕೊಳ್ಳುವುದೇ ಸೈನಿಕ ಪಡೆಯ ಮುಖಂಡನ ಕೆಲಸವಾಗಿತ್ತು.

ಇದರಿಂದಾಗಿ ಚೋರರು ಹೋದೆಡೆಯಲ್ಲೆಲ್ಲ ಅವರನ್ನು ದ್ವೇಷಿಸುವ ಬದಲು ಎಲ್ಲೆಡೆಯಲ್ಲೂ ಅವರನ್ನು ಹೊಗಳುವವರೇ ಆದರು. ಹಳ್ಳಿಗಳಲ್ಲಿ ಇದ್ದ ಶ್ರೀಮಂತರು, ಅಕ್ಕಸಾಲಿಗಳು, ವೇಶ್ಯೆಯರು, ಲೇವಾದೇವಿ ಮಾಡುವ ಹಣವಂತರು ಸಾಮಾನ್ಯವಾಗಿ ಚೋರರಿಗೆ ಹೆದರುತ್ತಿದ್ದರು. ಯಾರು ಅನ್ಯಾಯವಾಗಿ ಹಣ ಸಂಪಾದಿಸುತ್ತಿದ್ದರೋ ಅವರಿಗೆ ಚೋರರ ಹೆಸರು ಎತ್ತಿದರೆ ಮೈ ನಡುಕ ಉಂಟಾಗುತ್ತಿತ್ತು. ಉಳಿದವರಿಗೆಲ್ಲ ಚೋರರ ವಿಷಯದಲ್ಲಿ ಸದ್ಭಾವನೆಯೇ ಉಂಟಾಗಿತ್ತು.

ಚೋರರ ಮುಖಂಡರು ಒಂದು ಹಳ್ಳಿಗೆ ಮುತ್ತಿಗೆ ಹಾಕಿದೊಡನೆಯೇ ಆ ಹಳ್ಳಿಯ ಶ್ಯಾನುಭೋಗ ಮತ್ತು ಪಟೇಲರನ್ನು ಮೊದಲು ಕರೆಸಿ ಕೊಳ್ಳುತ್ತಿದ್ದರು. ಅವರಿಗೆ ತಮ್ಮ ಅಧಿಕಾರಿಗಳಿಂದ ರಾಜೀನಾಮೆ ಕೊಡಲು ಉಪದೇಶಿಸುತ್ತಿದ್ದರು. ರಾಜದ್ರೋಹದ ಚಳುವಳಿಗೆ ಪ್ರೋತ್ಸಾಹ ಕೊಡಲು ತಿಳಿಸುತ್ತಿದ್ದರು. ರಾಜರಿಗೆ ಸಲ್ಲಬೇಕಾದ ಯಾವ ಕರವನ್ನೂ, ದಂಡವನ್ನೂ ಸಲ್ಲಿಸದಂತೆ ಅವರಿಗೆ ಬೋಧಿಸುತ್ತಿದ್ದರು. ಹಳ್ಳಿಯ ಯುವಕರಿಗೆ ಸೈನಿಕ ಶಿಕ್ಷಣ ಕೊಟ್ಟು ಅವರ ಪಡೆಯನ್ನು ರಚಿಸಿ, ಸಮಯದಲ್ಲಿ ತಮಗೆ ಸಹಾಯ ಮಾಡಲು ಕೋರುತ್ತಿದ್ದರು. ಅಲ್ಲದೆ ಹಳ್ಳಿಯಲ್ಲಿ ಬಡ ಜನರನ್ನು ಸುಲಿದು ಸಂಗ್ರಹಿಸಿದ್ದ ಎಲ್ಲ ಧನ ಧಾನ್ಯಗಳನ್ನು ತಮಗೆ ತಂದೊಪ್ಪಿಸಲು ಅಪ್ಪಣೆ ಮಾಡುತ್ತಿದ್ದರು. ಈ ಕೋರಿಕೆಗಳನ್ನು ಈಡೇರಿಸದೆ ಹೋದರೆ ಮುಂದಿನ ಪ್ರಯತ್ನ ಬಲಾತ್ಕಾರ ಇದ್ದೇ ಇತ್ತು. ಹೀಗಾಗಿ ಕೆಲವು ಗ್ರಾಮಗಳಲ್ಲಿ ರಾಜದ್ರೋಹದ ಚಳುವಳಿಗೆ ಬೆಂಬಲ ದೊರೆಯಿತು. ಮತ್ತೆ ಕೆಲವು ಹಳ್ಳಿಗಳಲ್ಲಿ ಜನ ಚೋರರೊಂದಿಗೆ ವಿರಸ ಕಟ್ಟಿಕೊಂಡು ಇಲ್ಲದ ತೊಂದರೆಗಳಿಗೆ ಒಳಗಾಗಿ, ಕಷ್ಟನಷ್ಟಗಳನ್ನು ಅನುಭವಿಸಿದ್ದರು.

ಈ ವಿದ್ರೋಹದ ಚಳುವಳಿ ಕ್ರಮಕ್ರಮವಾಗಿ, ಊರಿಂದ ಊರಿಗೆ ಹರಡಲಾರಂಭಿಸಿತು. ಇದರ ಬಿಸಿ ಕೃಷ್ಣದೇವರಾಯನಿಗೆ ಮುಟ್ಟಲು ಹೆಚ್ಚುಕಾಲ ಬೇಕಾಗಲಿಲ್ಲ.

ರಾಜಧಾನಿಯ ದಕ್ಷಿಣದ ಗಡಿಪ್ರದೇಶಗಳು ಈ ವಿದ್ರೋಹದ ಚಳು

ವಳಿಯಲ್ಲಿ ಭಾಗವಹಿಸಿದ್ದುವು. ಎಲ್ಲೆಲ್ಲೂ ಕೃಷ್ಣದೇವರಾಯನ ದಬ್ಬಾಳಿಕೆಯ ವಿರುದ್ಧ ದಂಗೆ ಏಳಲು ಪ್ರೇರಕಶಕ್ತಿ ಗುಪ್ತವಾಗಿ ಕೆಲಸ ಮಾಡಲಾರಂಭಿಸಿತ್ತು. ಇದರ ಸೂತ್ರಧಾರರಾಗಿ ಓಬನಾಯಕ ಮತ್ತು ಗೋವಿಂದ ರಾಜರು ನಿಂತು, ಚಳುವಳಿಯ ಕಾವು ಆರದಂತೆ, ಎಚ್ಚರವಹಿಸಿದ್ದರು.

ವಿದ್ರೋಹದ ಚಳುವಳಿ ಒಳ್ಳೆಯ ವ್ಯವಸ್ಥೆಯಿಂದ ಶಿಸ್ತಿನಿಂದ ನಡೆಯುತ್ತಾ, ನೆರೆಪ್ರಾಂತಗಳಿಗೆ ಮೆಲ್ಲಮೆಲ್ಲಗೆ ಹಬ್ಬತೊಡಗಿದಾಗ, ಇದನ್ನು ರಾಯನ ಅಧಿಕಾರಿಗಳು ನಿರ್ಲಕ್ಷಿಸಿದರು. ಮೊದಮೊದಲು ಚೋರರು ಮಾಡುತ್ತಿರುವ ಪುಂಡಾಟಿಕೆ ಎಂದು ಅವರು ತಿಳಿದು ಸುಮ್ಮನಿದ್ದರು. ಆದರೆ ಈ ಚೋರರ ಹಿಂದೆ ಪ್ರಬಲರಾದ ವ್ಯಕ್ತಿಗಳು ನಿಂತು ಈ ಕೆಲಸಮಾಡುತ್ತಿರುವರೆಂದು ತಿಳಿಯಲು ಅವರಿಗೆ ಹೆಚ್ಚು ಕಾಲ ಬೇಕಾಗಲಿಲ್ಲ.

ಹಳ್ಳಿಗಳಲ್ಲಿ ಶ್ರೀಮಂತರಲ್ಲಿ ಹಾಹಾಕಾರವೆದ್ದಿತ್ತು. ಜನತೆಯ ನೆಮ್ಮದಿಗೆ ಭಂಗ ಬಂದಿತ್ತು. ಎಲ್ಲೆಲ್ಲೂ ಪ್ರಕ್ಷುಬ್ಧ ವಾತಾವರಣ ಉಂಟಾಗಿತ್ತು. ರಾಯನ ವಿರುದ್ಧ ಜನ ಸಾಮಾನ್ಯರ ಮನಸ್ಸು ಕೆಡಲಾರಂಭಿಸಿತು. ಅವರು ಪ್ರತ್ಯಕ್ಷವಾಗಿ ಪರೋಕ್ಷವಾಗಿ ಅಧಿಕಾರಿಗಳ ವಿರುದ್ಧ ದಂಗೆ ಏಳುತ್ತಿದ್ದರು. ಇದರಿಂದಾಗಿ, ಗಡಿನಾಡಿನ ಕೆಲವು ಪ್ರದೇಶದಲ್ಲಿ ಆಡಳಿತ ಯಂತ್ರ ಕುಸಿದು ಬಿದ್ದು, ಮೊದಲ ಬಾರಿಗೆ, ರಾಜಧಾನಿಯ ತನಕ ಈ ಚೋರರು ನಡಸುತ್ತಿರುವ ಉಪಟಳ, ರಾಜದ್ರೋಹಕರವಾದ ಚಳುವಳಿಯ ಸುದ್ದಿ ಹೋಯಿತು.

ಇದನ್ನೆಲ್ಲ ದೂತರಿಂದ ಕೇಳಿ ಕೃಷ್ಣದೇವರಾಯನು ಬೆರಗಾದ. ತನ್ನ ವಿರುದ್ಧ ವಿದ್ರೋಹದ ಚಳುವಳಿಯೇ! ಇದನ್ನು ನಡಸಬಲ್ಲ ಧೀರನಾರು? ಈ ಚಳುವಳಿಯ ಪ್ರೇರಕರು ಎಲ್ಲರೂ ಹೇಳುವಂತೆ ಚೋರರಲ್ಲ! ಅವರ ಹಿಂದೆ ಯಾರೋ ಮಹಾವ್ಯಕ್ತಿಗಳು ನಿಂತು ಕೆಲಸ ಮಾಡಿಸುತ್ತಿದ್ದಾರೆ. ಈ ಚಳುವಳಿಯ ಹಿಂದೆ, ಅವರದೇ ಆದ ಯಾವುದೋ ಸ್ವಾರ್ಥ ಅಡಗಿದೆ. ಚೋರರ ಮುಖಂಡರು ಯಾರೆಂದು ತಿಳಿದರೆ, ಅವರ ಸ್ವಾರ್ಥವೇನು, ಈ ಚಳುವಳಿಯ ಉದ್ದೇಶ ಏನು ಎಂಬುದು ತಿಳಿಯುವುದೆಂದು, ಆ ಚೋರ ಮುಖಂಡರನ್ನು ಪತ್ತೆ ಮಾಡಲು ಗುಪ್ತಚಾರರನ್ನು ಹಚ್ಚಿದ.

ಗುಪ್ತಚಾರರು ಬಹಳ ಪ್ರಯಾಸಪಟ್ಟು ರಾಯನಿಗೆ ಬೇಕಾಗಿದ್ದ

ಸುದ್ದಿಯನ್ನು ಸಂಗ್ರಹಿಸಿ ತಂದರು. ಓಬನಾಯಕ ಮತ್ತು ಗೋವಿಂದ ರಾಜರು ಅವರ ನಾಯಕರು ಎಂದು ತಿಳಿದ ಮೇಲೆ ಈ ಚೋರರ ವಿದ್ರೋಹದ ಚಳುವಳಿಯ ಯಥಾರ್ಥ ಸ್ವರೂಪ ತಿಳಿದುಹೋಯಿತು.

ಗೋವಿಂದರಾಜನು ಸೆರೆಮನೆಯಿಂದ ತಪ್ಪಿಸಿಕೊಂಡ ಮೇಲೆ ಏನಾದ, ಎಲ್ಲಿಗೆ ಹೋದ – ಎಂಬುದು ಈ ತನಕ ಕೃಷ್ಣದೇವರಾಯನಿಗೆ ತಿಳಿದಿರಲಿಲ್ಲ. ಗೋವಿಂದರಾಜನು ಸೆರೆಯಿಂದ ತಪ್ಪಿಸಿಕೊಂಡು ಹೋಗಲು ಅವಕಾಶವಿತ್ತ ವಿಜಯಭದ್ರನನ್ನು ರಾಯನು ದಂಡಿಸದಿದ್ದರೂ, ಚಿನ್ನಾದೇವಿಯ ಮುಖ ನೋಡಿಕೊಂಡು, ಅವನಿಗೆ ಯಾವ ಶಿಕ್ಷೆಯನ್ನೂ ವಿಧಿಸಿರಲಿಲ್ಲ. ತಪ್ಪಿಸಿಕೊಂಡು ಹೋಗಿದ್ದ ಗೋವಿಂದರಾಜನನ್ನು ಮತ್ತೆ ಹಿಡಿದು ತರುವ ಜವಾಬ್ದಾರಿಯನ್ನು ವಿಜಯಭದ್ರನೇ ವಹಿಸಿಕೊಂಡ ಮೇಲೆ ಅವನ ಮೇಲಿನ ಆಗ್ರಹ ಕೊಂಚ ಕಡಿಮೆಯಾಗಿತ್ತು. ವಿಜಯಭದ್ರನಿಗೆ ಇದುವರೆಗೆ ಗೋವಿಂದರಾಜನ ನೆಲೆ ಸಿಕ್ಕಿರಲಿಲ್ಲ. ಈಗ ಅವನು ರಾಮಗಿರಿ ದುರ್ಗದಲ್ಲಿ ಚೋರರ ಮುಖಂಡನಾಗಿ ನಿಂತಿರುವನೆಂದು ತಿಳಿದಾಗ ಅವನನ್ನು ಹಿಡಿದು ತರುವ ಕೆಲಸ ಹೆಚ್ಚು ಕಠಿಣವಾಗಿ ತೋರಲಿಲ್ಲ. ಅವನು ಸಾಕಷ್ಟು ದೊಡ್ಡ ಸೈನ್ಯವನ್ನು ತೆಗೆದುಕೊಂಡು, ಗೋವಿಂದರಾಜನನ್ನು ಹಿಡಿದು ತರಲು ಹೊರಟ.

ವಿಜಯಭದ್ರನು ರಾಯನ ಆಣತಿಯಂತೆ ತಮ್ಮನ್ನು ಹಿಡಿದು ತರಲು ದೊಡ್ಡಸೈನ್ಯದೊಂದಿಗೆ ಬರುತ್ತಿರುವ ಸಂಗತಿ ಗುಪ್ತಚಾರರಿಂದ ಕೇಳಿ ಚೋರನಾಯಕರಿಬ್ಬರೂ ಸಂತೋಷಪಟ್ಟರು. ತಮ್ಮ ವಿದ್ರೋಹದ ಚಳುವಳಿಯ ಬಿಸಿ ರಾಯನ ತನಕ ಹೋಗಿದೆಯಲ್ಲ ಎಂದು ಅವರಿಗೆ ಹರ್ಷವಾಯಿತು. ಅವರಿಗೆ ಬೇಕಾಗಿದ್ದುದು ಪ್ರತೀಕಾರ. ವಿಜಯಭದ್ರ ಮತ್ತು ಅವನ ಸಂಗಡಿಗರ ಮೇಲೆ ಪ್ರತೀಕಾರ! ಈಗ ವಿಜಯಭದ್ರನೇ ಸ್ವತಃ ದಂಡೆತ್ತಿ ಬರುತ್ತಿರುವ ಸಂಗತಿಯನ್ನು ಕೇಳಿ ಅವರಿಗೆ ಬಹಳ ಸಂತೋಷವಾಗಿತ್ತು.

ವಿಜಯಭದ್ರನು ತನ್ನ ಸೈನ್ಯದ ಆಗಮನವನ್ನು ಕೇಳಿಯೇ ಚೋರರು ಹೆದರಿ ಶರಣಾಗತರಾಗುವರೆಂದು ಭಾವಿಸಿದ್ದ. ತನ್ನ ಶಕ್ತಿಯಲ್ಲಿ ಅಷ್ಟು ನಂಬಿಕೆ ಇತ್ತು. ಅಂತಲೇ ಅವನು ಉತ್ಸವ ಹೊರಟವನಂತೆ ನಿಧಾನಗತಿ

ಯಲ್ಲಿ ರಾಮದುರ್ಗದ ಪರ್ವತಪ್ರಾಂತ್ಯಕ್ಕೆ ಬಂದು ಅಲ್ಲಿ ಬಿಡಾರ ಮಾಡಿದ.

ಇಷ್ಟಾದರೂ ಚೋರರು ಶರಣಾಗತರಾಗಿ ಬರುವ ಯಾವ ಸೂಚನೆಯೂ ಕಾಣಲಿಲ್ಲ. ಅವರ ಮೇಲೆ ಯುದ್ಧಕ್ಕೆ ಹೋಗದ ಹೊರತು ಬೇರೆ ದಾರಿ ಕಾಣಲಿಲ್ಲ. ಚೋರರ ಕೇಂದ್ರಸ್ಥಳ ರಾಮಗಿರಿಯ ದುರ್ಗವೆಂದು ತಿಳಿದಿತ್ತು. ಈ ದುರ್ಗವನ್ನು ಹಠಾತ್ತನೆ ಎರಡು ಕಡೆಯಿಂದ ಮುತ್ತಿಗೆ ಹಾಕಿದರೆ, ದುರ್ಗದಲ್ಲಿ ಇರುವ ಚೋರರೆಲ್ಲರೂ ತಮಗೆ ದುರ್ಗವನ್ನು ಒಪ್ಪಿಸಿ, ಶರಣಾಗತರಾಗುವರೆಂದು ವಿಜಯಭದ್ರ ಊಹಿಸಿದ. ತನ್ನ ದಳವನ್ನು ಎರಡು ಭಾಗವಾಗಿ ಮಾಡಿ ಒಂದು ದಳವನ್ನು ತನ್ನ ಅನುಚರರಾಗಿದ್ದ ಕೊರಮನಾಯಕ ಮತ್ತು ಭರಮನಾಯಕರ ಕೈಕೆಳಗೆ ಕಳುಹಿಸಿ ಕೊಟ್ಟ; ಮತ್ತೊಂದು ದಳವನ್ನು ತಾನೇ ನಡಸುತ್ತಾ ಮುಂದೆ ನಡೆದ.

ವಿಜಯಭದ್ರನು ತನ್ನ ದಳವನ್ನು ಇಬ್ಭಾಗವಾಗಿ ವಿಂಗಡಿಸಿ, ತಮ್ಮ ದುರ್ಗವನ್ನು ಮುತ್ತುವ ಆಲೋಚನೆಯಲ್ಲಿ ಇರುವನೆಂಬ ಸುದ್ದಿಯನ್ನು ಚೋರರು ಕೇಳಿ, ಅದಕ್ಕೆ ತಕ್ಕಂತೆ ತಮ್ಮ ಹೋರಾಟದ ಕ್ರಮವನ್ನು ಅವರೂ ಬದಲಾಯಿಸಿದರು. ತಮ್ಮ ಸೈನ್ಯವನ್ನು ಎರಡು ಗುಂಪು ಮಾಡಿ, ಒಂದು ಸೈನ್ಯವು ಓಬನಾಯಕನ ಕೈಕೆಳಗೂ, ಮತ್ತೊಂದು ಸೈನ್ಯ ಗೋವಿಂದ ರಾಜನ ಕೈಕೆಳಗೂ ಹೊರಟು, ವಿಜಯಭದ್ರನ ಸೈನಿಕರು ದುರ್ಗವನ್ನು ಸಮೀಪಿಸುವ ಮುನ್ನವೇ ಅವರ ಮೇಲೆ ಬಿದ್ದು ಅವರಿಗೆ ಕಾಳಗ ಕೊಡಬೇಕೆಂದು ತೀರ್ಮಾನಿಸಿದರು. ಅದರಂತೆ ಸೈನ್ಯವನ್ನು ಎರಡು ಭಾಗವಾಗಿ ಮಾಡಿ ಇಬ್ಬರೂ ಒಂದೊಂದು ತುಕ್ಕಡಿಯನ್ನು ನಡಸುತ್ತ ಬಹುಬೇಗನೆ ಚೋರತಪ್ಪಲಿಗೆ ಬಂದರು. ಅಲ್ಲಿ ತಮ್ಮದೇ ಆದ ರೀತಿಯಲ್ಲಿ ವ್ಯೂಹ ರಚನೆಯಲ್ಲಿ ತೊಡಗಿ ಶತ್ರುಗಳಿಗಾಗಿ ಕಾಯುತ್ತ ಕುಳಿತರು.

ರಾಮಗಿರಿ ಪರ್ವತ ತುಂಬ ಕಡಿದಾದ ಬೆಟ್ಟ. ಅದನ್ನು ಏರಬೇಕಾದರೆ ಇಕ್ಕಟ್ಟಾದ ಕಣಿವೆಗಳಲ್ಲಿ ಹಾದುಬರಬೇಕು. ಈ ಇಳುಕಲು ಪ್ರದೇಶ ಒಂದು ಕಡೆ ತೀರ ಕಿರಿದಾಗಿತ್ತು. ಇದರ ಒಂದು ಪ್ಕೈ ಬೆಟ್ಟದ ತಪ್ಪಲಿಗೆ ಸೇರಿಕೊಂಡಿದ್ದು, ಇನ್ನೊಂದು ಪ್ಕೈ ಪ್ರಪಾತವನ್ನೇ ಮುಟ್ಟಿತ್ತು. ಈ ಇಕ್ಕಟ್ಟಾದ ದಾರಿಯಲ್ಲಿ ಶತ್ರುಗಳನ್ನು ಸಿಕ್ಕಿಸಿಕೊಂಡು, ಅವರ ಮೇಲೆ ಧಾಳಿಯಿಟ್ಟು ಅವರನ್ನು ಯಮಲೋಕಕ್ಕೆ ಕಳುಹಿಸುವ ಹಂಚಿಕೆಯಿಂದ

ಗೋವಿಂದರಾಜನು ಆ ಪ್ರದೇಶದಲ್ಲಿ ನಿಯತಸ್ಥಳಗಳಲ್ಲಿ ತನ್ನ ಸೈನಿಕರನ್ನು ನಿಲ್ಲಿಸಿ, ಶತ್ರು ಸೈನ್ಯಕ್ಕಾಗಿ ಹೊಂಚು ಹಾಕುತ್ತಿದ್ದ.

ವಿಜಯಭದ್ರನ ಸೈನಿಕರು ಅದುವರೆಗೂ ತಮಗೆ ಯಾ [illegible] ಬರದೆ ಇರುವುದನ್ನು ನೋಡಿ, ಚೋರರು ಹೆದರಿ ದುರ್ಗದಲ್ಲಿ ಅಡಗಿ ಕುಳಿತಿರಬಹುದೆಂದು ಭಾವಿಸಿ, ಯಾವ ಬಗೆಯ ಶಂಕೆಯೂ ಇಲ್ಲದೆ ಈ ಕಣಿವೆಯ ಪ್ರದೇಶದಲ್ಲಿ ಬರತೊಡಗಿದರು.

ಇದೇ ಸಮಯ ಕಾಯುತ್ತಿದ್ದ ಗೋವಿಂದರಾಜನ ಸೈನಿಕರು —ಮುಖ್ಯವಾಗಿ ಬಿಲ್ಗಾರರು—ತಮ್ಮ ಕೈಚಳಕ ತೋರಿಸಲು ಆರಂಭಿಸಿದರು. ಅವರು ತಪ್ಪಲಿನ ಕಡೆಯ ಗಿಡ ಮರಗಳ ಮರೆಯಲ್ಲಿ ಅಡಗಿ ಕುಳಿತು, ಅಲ್ಲಿಂದ ಬಾಣದ ಮಳೆಯನ್ನು ಕರೆದರು. ದೊಡ್ಡದೊಡ್ಡ ಬಂಡೆಗಳನ್ನು ಉರುಳಿಸಿ ಸೈನ್ಯವನ್ನು ಯಮನ ಲೋಕಕ್ಕೆ ಕಳುಹಿಸಿದರು. ಒಮ್ಮೆಲೇ ತಮ್ಮ ಮೇಲೆ ಉಂಟಾದ ಈ ಶರಘಾತವನ್ನು, ಕಲ್ಲು ಗುಂಡುಗಳ ಮಳೆಯನ್ನು ಸಹಿಸಲಾರದೆ, ವಿಜಯಭದ್ರನ ಸೈನ್ಯ ತತ್ತರಿಸಿತು. ಅವರು ಮುಂದಕ್ಕೆ ಹೋಗಲು ಧೈರ್ಯವಿಲ್ಲ. ಹಿಂದಕ್ಕೆ ಓಡಲು ದಾರಿ ತುಂಬ ಇಕ್ಕಟ್ಟಾಗಿತ್ತು. ಪಕ್ಕಕ್ಕೆ ಹೊರಳಿದರೆ, ಕೊಂಚ ಎಚ್ಚರತಪ್ಪಿ ಹೊರಳಿದರೂ ಅವರು ಪ್ರಪಾತ ದಡಿಯನ್ನು ಸೇರುತ್ತಿದ್ದರು. ಹೀಗಾಗಿ, ಬಹುಮಂದಿ ಸೈನಿಕರು ಆನೆಯ ಕಾಲ ಕೆಳಗೆ ಸಿಕ್ಕಿದ ಇರುವೆಯ ಸಾಲಿನಂತೆ ಗೋವಿಂದರಾಜನ ಧಾಳಿಯನ್ನು ಎದುರಿಸಲಾರದೆ ಪ್ರಾಣ ಕಳೆದುಕೊಂಡರು.

ಈ ಅಪಾಯವನ್ನು ನೋಡಿ, ಹಿಂದಿನಿಂದ ಬರುತ್ತಿದ್ದ ವಿಜಯಭದ್ರನು ಶತ್ರು ತನ್ನ ಮೇಲೆ ಕೈಮಾಡುವ ಮುನ್ನವೇ ಎಚ್ಚರವಹಿಸಿ, ಕುದುರೆಯ ಮೇಲೆ ಪಲಾಯನ ಮಾಡಿದ್ದ. ಸೈನ್ಯವನ್ನು ಅವರ ಪಾಡಿಗೆ ಬಿಟ್ಟು ರಣಹೇಡಿಯಂತೆ ಓಡಿಹೋಗಿದ್ದ. ಹೀಗಾಗಿ ಗೋವಿಂದರಾಜನಿಗೆ ತುಂಬ ನಿರಾಶೆಯಾಯಿತು. ಕೈಗೆ ಸಿಕ್ಕಿದ ವಿಜಯಭದ್ರ ಕೊಂಚದರಲ್ಲೇ ತಪ್ಪಿಸಿಕೊಂಡು ಹೋಗಿದ್ದ. ನಾಯಕನು ಓಡಿಹೋದ ಮೇಲೆ ಸೈನಿಕರು ವೃಥಾ ಯುದ್ಧ ಮಾಡಿ ಪ್ರಾಣ ಕಳೆದುಕೊಳ್ಳಲು ಸಿದ್ಧರಾಗದೆ, ಎಲ್ಲರೂ ಶರಣಾಗತರಾದರು. ಗೋವಿಂದರಾಜನು ಕಹಳೆಯೂದಿ ಯುದ್ಧವನ್ನು ಸಮಾಪ್ತಿಗೊಳಿಸಿ ಕೈಗೆ ಸಿಕ್ಕಿದವರನ್ನು ಕೈಸೆರೆ ಹಿಡಿದು, ದುರ್ಗಕ್ಕೆ ಹೊರಟ.

ಗೋವಿಂದರಾಜನು ದುರ್ಗ ಪ್ರವೇಶಿಸುತ್ತಿದ್ದಂತೆ, ದುರ್ಗದ ಕಡೆಯಿಂದ ಸಂತೋಷದ ವಾರ್ತೆಯನ್ನು ಕೇಳಿದ. ಕೊರಮನಾಯಕ ಮತ್ತು ಭರಮನಾಯಕರ ಮೇಲೆ ಏರಿ ಹೋಗಿದ್ದ ಓಬನಾಯಕನು ಯುದ್ಧದಲ್ಲಿ ಜಯಶಾಲಿಯಾಗಿದ್ದ. ಕೊರಮ ಮತ್ತು ಭರಮನಾಯಕರನ್ನು ಕೈಸೆರೆ ಹಿಡಿದುಕೊಂಡು, ದುರ್ಗ ಸೇರಿದ್ದ. ಅವನು ಗೋವಿಂದರಾಜನಿಗಾಗಿ ಕಾಯುತ್ತಿರುವಂತೆಯೇ ಗೋವಿಂದರಾಜನು ವಿಜಯಿಯಾಗಿ ದುರ್ಗ ಪ್ರವೇಶ ಮಾಡಿದ.

ಚೋರಪರಿಷತ್ತು ನೆರೆಯಿತು. ಅವರ ಸಮ್ಮುಖದಲ್ಲಿ ಕೈಸೆರೆ ಸಿಕ್ಕಿದ ಕೊರಮನಾಯಕ ಮತ್ತು ಭರಮನಾಯಕರನ್ನು ಕೈಬೇಡಿ ಹಾಕಿ ತಂದು ನಿಲ್ಲಿಸಲಾಯಿತು. ಅವರು ಇದುವರೆಗೆ ಮಾಡಿರುವ ಎಲ್ಲ ಅನ್ಯಾಯಗಳನ್ನೂ ಬಯಲಿಗೆ ಎಳೆಯಲಾಯಿತು. ಚೋರಸಮುದಾಯ ಅವರು ಮಾಡಿದ ಎಲ್ಲ ಅನ್ಯಾಯಗಳನ್ನೂ ಪರಿಶೀಲಿಸಿ, ಅವರನ್ನು ಶೂಲಕ್ಕೇರಿಸಲು ತೀರ್ಪಿತ್ತಿತು. ಅದರಂತೆ ಅವರನ್ನು ರಕ್ತವಸ್ತ್ರದಲ್ಲಿ ಅಲಂಕರಿಸಿ, ರಕ್ತ ಬಣ್ಣದ ಹೂಮಾಲೆ ಹಾಕಿ, ಅವರಿಬ್ಬರನ್ನೂ ಹುಣಿಸೆಮರದ ಬಳಿಯಲ್ಲಿ ಗಲ್ಲಿಗೆ ಹಾಕಲಾಯಿತು. ಹೀಗೆ ಆ ದುಷ್ಕರ್ಮಿಗಳು ತಮ್ಮ ಪಾಪದ ಫಲವನ್ನು ಅನುಭವಿಸುತ್ತಾ ಈ ಲೋಕವನ್ನು ತ್ಯಜಿಸಿದರು.

ಅವರು ಸಾಯುವ ಮುನ್ನ ಓಬನಾಯಕನಿಂದ ಬಗೆಬಗೆಯಾಗಿ ಅವಮಾನಿತರಾಗಿದ್ದರು. ಅವರಿಗೆ ಬದುಕಿಗಿಂತ ಮರಣವೇ ಲೇಸಾಗಿ ಕಂಡಿತ್ತು. ತಮ್ಮನ್ನು ಓಬನಾಯಕನು ಎಲ್ಲಿ ಚಿತ್ರಹಿಂಸೆ ಕೊಟ್ಟು ಸೇಡು ತೀರಿಸಿಕೊಳ್ಳುತ್ತಾನೋ ಎಂದು ಹೆದರಿದ್ದ ಅವರಿಗೆ ಶೂಲಕ್ಕೇರುವಂತಾದುದು, ಎಷ್ಟೋ ಹಿತಕರವೆನಿಸಿತು. ಅವರು ಸಂತೋಷದಿಂದಲೇ ಸಾವನ್ನು ಅಪ್ಪಿದರು. ಸಾಯುವ ಗಳಿಗೆಯಲ್ಲಿ ಅವರಿಗೆ, ತಮ್ಮ ಎಲ್ಲ ಅನ್ಯಾಯಗಳೂ ಮನಸ್ಸಿಗೆ ಬಂದಿದ್ದುವು. ಅವುಗಳ ಪಾಪದ ಫಲವನ್ನು ಅನುಭವಿಸಲೇ ಬೇಕಾಗಿತ್ತು. ಅದನ್ನು ಅವರು ಸಂತೋಷದಿಂದಲೇ ಅನುಭವಿಸಿದರು.

ಇವರಿಬ್ಬರ ಸಾವಿನೊಂದಿಗೆ, ಓಬನಾಯಕನ ಬಹಳ ದಿನಗಳ ಪ್ರತೀಕಾರದ ಬಯಕೆ,ಸೇಡು ತೀರಿತ್ತು. ಇಲ್ಲಿಗೆ ಓಬನಾಯಕನ ಜೀವಿತದ ಮಹತ್ವಾಕಾಂಕ್ಷೆ ಸಫಲವಾಗಿತ್ತು. ಅಂತಲೇ ಓಬನಾಯಕನು ಚೋರಸಮುದಾಯ

ಕ್ಕೆಲ್ಲ ಭಾರಿ ಔತಣವನ್ನೇರ್ಪಡಿಸಿದ್ದನು. ತಾನು ಇಡೀ ರಾತ್ರಿ ಭವಾನಿಯ ಪೂಜೆಮಾಡಲು ನಿಶ್ಚಯಿಸಿರುವುದಾಗಿಯೂ, ಬೆಳಗಾಗುವ ತನಕ ಯಾರೂ ಗರ್ಭಗುಡಿಯ ಬಳಿಗೆ ತಲೆ ಇಡಬಾರದೆಂದೂ ಕಟ್ಟಾಣತಿಯನ್ನು ಮಾಡಿ, ಪೂಜಾಸಾಮಗ್ರಿಗಳೊಂದಿಗೆ ಭವಾನಿಯ ಗರ್ಭಗುಡಿಯನ್ನು ಸೇರಿದನು.

ರಾತ್ರಿಯೆಲ್ಲಾ ಅವನ ಉಗ್ರವಾದ ಪೂಜೆ ಎಡೆಬಿಡದೆ ಸಾಗಿತು. ಬೆಳಗಿನ ಜಾವದ ವೇಳೆಗೆ ಅವನ ಪೂಜೆಗೆ ಕೊನೆಯುಂಟಾಯಿತು. ಇನ್ನು ಉಳಿದುದು ಪೂರ್ಣ ಬಲಿ; ಅನಂತರ ಮಹಾಮಂಗಳಾರತಿ. ಅವನು ಮಹಾಮಂಗಳಾರತಿಯನ್ನು ಮೊದಲೇ ಮಾಡಿ, ದೇವಿಯನ್ನು ಭಕ್ತಿಯಿಂದ ಧ್ಯಾನ ಮಾಡುತ್ತ ಕುಳಿತನು. ಅನಂತರ ದೇವಿಯ ಕುಂಕುಮ ತೆಗೆದು ಹಣೆಯಲ್ಲಿ ಇಟ್ಟುಕೊಂಡು ಮಂಡಿಯೂರಿ ಕುಳಿತು, ಒರೆಯಿಂದ ಕತ್ತಿಯನ್ನು ಸೆಳೆದು ನಿಮಿಷಮಾತ್ರದಲ್ಲಿ ತನ್ನ ಕತ್ತನ್ನು ಕತ್ತರಿಸಿ, ದೇವಿಗೆ ತನ್ನನ್ನೇ ಅರ್ಪಿಸಿಕೊಂಡುಬಿಟ್ಟನು. ಅವನ ಆತ್ಮಾರ್ಪಣೆಯೊಂದಿಗೆ ಅವನ ಕೊನೆಯ ಪೂಜೆಯೂ ಮುಕ್ತಾಯವಾಯಿತು.

ಮಾರನೆಯ ದಿನ ಬೆಳಗಿನ ಜಾವ ಗರ್ಭಗುಡಿಯ ಬಾಗಿಲನ್ನು ತೆರೆದಾಗ, ಚೋರಸಮುದಾಯಕ್ಕೆ ಭಯಂಕರವಾದ ದೃಶ್ಯ ಕಾಣಿಸಿತು. ಅವರ ಒಡೆಯನಾದ ಓಬನಾಯಕನ ಆಕಸ್ಮಿಕ ಮರಣದಿಂದ, ಚೋರರಿಗೆಲ್ಲ—ಕ್ಷಣದ ಹಿಂದೆ ಇದ್ದ ವಿಜಯೋತ್ಸಾಹವೆಲ್ಲ ಕರಗಿ, ದುಃಖದ ಕೋಡಿಯಾಗಿ ಹರಿಯಿತು. ಅವರು ತಮ್ಮ ನೆಚ್ಚಿನ ನಾಯಕನು ದೇವಿಗೆ ಆತ್ಮಾರ್ಪಣೆ ಮಾಡಿಕೊಂಡು, ತಮ್ಮನ್ನೆಲ್ಲ ಅನಾಥನನ್ನಾಗಿ ಮಾಡಿ ಹೋದುದಕ್ಕಾಗಿ ಬಹಳವಾಗಿ ದುಃಖಿಸಿದರು. ಓಬನಾಯಕನು ಹಿಂದೆ ಒಂದೆರಡು ಬಾರಿ ಹೇಳಿದ್ದ ಮಾತು—ತಾನು ತನ್ನ ಶತ್ರುಗಳ ಮೇಲೆ ಸೇಡುತೀರಿಸಿಕೊಂಡ ದಿನವೇ ಅವರನ್ನು ಬಿಟ್ಟು ಹೊರಟು ಹೋಗುತ್ತೇನೆ—ಎನ್ನುವ ಮಾತು ಈ ರೀತಿಯಲ್ಲಿ ನಿಜವಾಗಬೇಕೇ, ಎಂದೆನಿಸಿತು. ತನ್ನ ಮನದ ಸಂಕಲ್ಪವನ್ನು ಈಡೇರಿಸಿ, ದೇವಿಗೆ ಕೊಟ್ಟಿದ್ದ ವಚನದಂತೆ, ಓಬನಾಯಕನು ತನ್ನನ್ನೇ ಬಲಿಕೊಟ್ಟು, ತನ್ನ ವಚನವನ್ನು ಉಳಿಸಿಕೊಂಡಿದ್ದನು. ಅವನ ಶ್ರದ್ಧಾಭಕ್ತಿಯನ್ನು ನೆನೆದು ಚೋರಸಮುದಾಯಕ್ಕೆಲ್ಲ ಅವನೊಬ್ಬನು ಮಹಾತ್ಮನಾಗಿಯೇ ತೋರಿದನು.

ಈಗ ಚೋರಸಮುದಾಯದ ಮುಂದೆ ಓಬನಾಯಕನನಂತರ ತಮಗೆ ಯಾರು ನಾಯಕನಾಗಬೇಕೆಂಬ ಪ್ರಶ್ನೆ ಬಂದಿತ್ತು. ಎಲ್ಲರೂ ಗೋವಿಂದ ರಾಜನನ್ನೇ ತಮ್ಮ ನಾಯಕನಾಗಲು ಸರ್ವಾನುಮತದಿಂದ ಅನುಮೋದಿಸಿದರು. ಗೋವಿಂದರಾಜನು ಚೋರರ ಬಗ್ಗೆ ಇಟ್ಟಿದ್ದ ಆಸಕ್ತಿ ಪ್ರೀತಿ ವಿಶ್ವಾಸಗಳು, ಅವನ ಕಾರ್ಯದಕ್ಷತೆ, ಆಡಳಿತ ಕುಶಲತೆಗಳು ಅವನನ್ನು ನಾಯಕನನ್ನಾಗಿ ಮಾಡಿಕೊಳ್ಳಲು ಚೋರರನ್ನು ಪ್ರೇರೇಪಿಸಿತ್ತು. ಅವರು ಭವಾನಿಯ ಇದಿರಿನಲ್ಲಿ ಅವನನ್ನು ತಮ್ಮ ನಾಯಕನೆಂದು ಒಪ್ಪಿಕೊಂಡು, ರಕ್ತದ ಕಾಣಿಕೆಯನ್ನು ಕೊಟ್ಟು, ತಮಗೆ ನಾಯಕನಲ್ಲಿರುವ ಶ್ರದ್ಧಾಭಕ್ತಿಗಳನ್ನು ಪ್ರದರ್ಶಿಸಿದರು.

ಗೋವಿಂದರಾಜನು ಚೋರರ ನಾಯಕನಾದ ಮೇಲೆ ಚೋರ ಸಾಮ್ರಾಜ್ಯದ ಎಲ್ಲ ಜವಾಬ್ದಾರಿ ಅವನ ಹೆಗಲ ಮೇಲೆ ಬಿದ್ದಿತ್ತು. ಇದುವರೆಗೆ ಓಬ ನಾಯಕನು ಅವನ ಸಂಗಡ ಇದ್ದು, ಬಹು ಮಟ್ಟಿನ ಜವಾಬ್ದಾರಿಯನ್ನು ತಾನೇ ಹೊತ್ತುಕೊಂಡಿದ್ದ. ಓಬನಾಯಕನು ತೀರಿಕೊಂಡ ಮೇಲೆ ಗೋವಿಂದ ರಾಜನಿಗೆ ನಿಮಿಷ ಕಾಲ ವಿರಾಮ ದೊರೆಯದಾಯಿತು. ಈಗ ಚೋರರ ಹಿತರಕ್ಷಣೆಯ ಭಾರವೂ ಅವನದಾಗಿತ್ತು.

ಇದಕ್ಕೆ ತಕ್ಕಂತೆ, ವಿಜಯಭದ್ರನ ಸೈನ್ಯವನ್ನು ತಾವು ಸೋಲಿಸಿ ಕೈಸೆರೆ ಹಿಡಿದಿದ್ದುದರಿಂದ, ತಮ್ಮ ಮೇಲೆ ಆಕ್ರೋಶಗೊಂಡು ರಾಯನು ದೊಡ್ಡದೊಂದು ಸೈನ್ಯವನ್ನು ಕಳುಹಿಸುವುದು ದಿಟವೆಂದು ಗೋವಿಂದರಾಜನು ಅದನ್ನು ಇದಿರಿಸುವ ಸಿದ್ಧತೆಯನ್ನು ಈಗಿನಿಂದಲೇ ಮಾಡಿಕೊಳ್ಳಬೇಕಾಗಿತ್ತು. ತಮ್ಮ ಮೇಲೆ ಬರಲಿರುವ ಸೈನ್ಯವನ್ನು ಎದುರಿಸಬೇಕಾದರೆ, ತಾನೂ ಸಾಕಷ್ಟು ದೊಡ್ಡ ಸೈನ್ಯವನ್ನು ಕೂಡಿಸಿಕೊಳ್ಳಬೇಕೆಂದು ಚೆದುರಿ ಹೋಗಿದ್ದ ಚೋರರನ್ನೆಲ್ಲ ಒಟ್ಟುಗೂಡಿಸುವ ಪ್ರಯತ್ನದಲ್ಲಿ ತೊಡಗಿದ್ದ. ಈ ಪ್ರಯತ್ನದಲ್ಲಿ ಅವನು ತೊಡಗಿರುವಂತೆಯೇ, ಗುಪ್ತಚಾರರು ಈ ಬಾರಿ ಮಹಾ ಮಂತ್ರಿಯೂ, ದಂಡನಾಯಕನೂ ಆದ ಕೊಂಡಮುರಸಯ್ಯನೇ ದೊಡ್ಡ ಸೇನೆಯೊಂದಿಗೆ ತಮ್ಮನ್ನು ಸೆರೆಹಿಡಿಯಲು ಬರುತ್ತಿರುವ ಸುದ್ದಿಯನ್ನು ತಂದಿತ್ತರು. ಅಧಿಕ ಸಂಖ್ಯೆಯಲ್ಲಿ ತಮ್ಮ ಮೇಲೆ ಬೀಳಲು ಬರುತ್ತಿರುವ ಸೈನ್ಯವನ್ನು ಯಾವ ರೀತಿಯಾಗಿ ಎದುರಿಸಬೇಕೆಂದು ಯೋಚಿಸಿ,

ತನ್ನ ಚೋರ ಸೈನ್ಯವನ್ನೆಲ್ಲ ಒಟ್ಟುಗೂಡಿಸಿ, ಅವರಿಂದ ಸಾಯುವ ತನಕ ಹೋರಾಡುವ ಭಾಷೆ ಇಡಿಸಿ, ಯುದ್ಧ ಸನ್ನದ್ಧನಾಗಿ ಗೋವಿಂದರಾಜ ಸೈನ್ಯದೊಡನೆ ಹೊರಟ.

ಈ ಬಾರಿ ಸೈನ್ಯದ ಮುಖಂಡತ್ವ ವಹಿಸಿಬಂದಿದ್ದ ಕೊಂಡಮರಸಯ್ಯನು ಮಹಾರಣಪಂಡಿತನೆಂದು ಹೆಸರು ಗಳಿಸಿದ್ದ. ಅವನು ಚೋರ ಸೈನ್ಯವನ್ನು ಮೂಲೋತ್ಪಾಟನ ಮಾಡಿ, ಗೋವಿಂದರಾಜನನ್ನು ಕೈಸೆರೆ ಹಿಡಿದು ತಂದು ಒಪ್ಪಿಸುವುದಾಗಿ, ಪ್ರಭುಗಳಿಗೆ ಆಶ್ವಾಸನವಿತ್ತು, ಸೈನ್ಯದೊಡನೆ ಬಂದಿದ್ದ. ಅವನ ಸೈನ್ಯದಲ್ಲಿ ಅಶ್ವ ಸೈನ್ಯವಿತ್ತು, ಗಜಸೈನ್ಯವಿತ್ತು. ಸಾಮಾನ್ಯ ಚೋರರೆಂದು ಅವನು ಉದಾಸೀನ ಮಾಡದೆ, ಸುಸಜ್ಜಿತವಾದ ಸೈನ್ಯದೊಂದಿಗೆ ಬಂದು, ರಾಮಗಿರಿಯ ಬಳಿ ಕಾಡಿನಲ್ಲಿ ಬೀಡು ಬಿಟ್ಟಿದ್ದ. ಈ ಬಾರಿ ಯುದ್ಧ ನಡೆದರೆ, ತನಗೆ ಸೋಲು ಖಂಡಿತವೆಂದು ಗೋವಿಂದ ರಾಜನು ಭಾವಿಸಿದ. ಕೊಂಡಮರಸಯ್ಯನ ಅಸಂಖ್ಯಾತ ಸೈನ್ಯದ ಮುಂದೆ ತನ್ನ ಚೋರ ಸೈನ್ಯ ಬಹಳ ಸಣ್ಣದು; ಅಲ್ಲದೆ ಅಷ್ಟು ಸುಸಜ್ಜಿತವಾದುದಲ್ಲ ವೆಂಬ ಸತ್ಯದರಿವು ಅವನಿಗೂ ಇತ್ತು. ತಾವು ನೇರ ಆ ಸೈನ್ಯದ ಮೇಲೆ ಬಿದ್ದು ವಿಜಯ ಗಳಿಸುವುದು ಕಷ್ಟ ಸಾಧ್ಯವೆಂದೂ, ತಾವು ಬೆಟ್ಟಗುಡ್ಡಗಳಲ್ಲಿ ಸೇರಿಕೊಂಡು, ತಮ್ಮನ್ನು ಮುತ್ತಲು ಬರುವ ಸೈನಿಕರಿಗೆ ಕಿರುಕುಳ ಕೊಟ್ಟು ಅವರನ್ನು ಸೋಲಿಸಿ, ಹಿಮ್ಮೆಟ್ಟಿಸುವುದೇ ತಮಗೆ ಉಳಿದಿರುವ ದಾರಿ ಎಂದೂ ತನ್ನ ಸೈನಿಕರನ್ನು ಬೆಟ್ಟ ಗುಡ್ಡಗಳ ಮೇಲೆಲ್ಲ ಚೆದರಿಸಿ, ಶತ್ರುಪಡೆಗಾಗಿ ಕಾಯುತ್ತ ಕುಳಿತ.

ಆದರೆ ಗೋವಿಂದರಾಜನ ಹಂಚಿಕೆಯನ್ನು ಕೊಂಡಮರಸಯ್ಯ ತಿಳಿದು ಕೊಂಡನೆಂದು ತೋರುತ್ತದೆ. ಕೊಂಡಮರಸಯ್ಯನು ತಾನು ಹಾಕಿದ್ದ ಬಿಡಾರ ವನ್ನು ಕೀಳದೆ ಅಲ್ಲೇ ನೆಲೆಯಾಗಿ ನಿಂತುಬಿಟ್ಟ. ಸುಮಾರು ಒಂದು ವಾರ ವಾದರೂ ಕೊಂಡಮರಸಯ್ಯನು ಶಿಬಿರ ಕೀಳುವ ಪ್ರಯತ್ನವಾಗಲಿ, ತಮ್ಮ ಮೇಲೆ ಏರಿಬರುವ ಸುದ್ದಿಯಾಗಲಿ ಕಾಣಲಿಲ್ಲ. ಇದರಿಂದ ಗೋವಿಂದ ರಾಜನು ಮಾಡಿದ್ದ ಎಲ್ಲ ಹಂಚಿಕೆಯೂ ವ್ಯರ್ಥವೇ ಆಯಿತು. ಅವನಿಗೆ ತಾವಾಗಿ ಶತ್ರುಗಳ ಮೇಲೆ ಬೀಳದ ಹೊರತು ಗತ್ಯಂತರ ಉಳಿಯಲಿಲ್ಲ. ಅವನು ಧೈರ್ಯಮಾಡಿ, ಒಮ್ಮೆಲೇ ತನ್ನ ಸೈನ್ಯವನ್ನೆಲ್ಲ ಒಟ್ಟುಗೂಡಿಸಿಕೊಂಡು,

ಕೊಂಡಮರಸಯ್ಯನ ಶಿಬಿರದ ಮೇಲೆ ಒಂದು ರಾತ್ರಿ ಧಾಳಿಯಿಟ್ಟು ಅವರ ಗುಡಾರಗಳಿಗೆ ಬೆಂಕಿ ಇಟ್ಟು ಅವರ ಶಸ್ತ್ರಾಸ್ತ್ರಗಳನ್ನು ದೋಚಿ ಕೈಗೆ ಸಿಕ್ಕಿದವರನ್ನು ಕೊಂದು ಹಾವಳಿ ಮಾಡಿದ. ಅವರು ಚೇತರಿಸಿಕೊಂಡು ತಮ್ಮ ಮೇಲೆ ಬೀಳುವುದರೊಳಗೆ, ಗೋವಿಂದರಾಜ ಆ ಸ್ಥಳದಿಂದ ತಪ್ಪಿಸಿಕೊಂಡುಹೋಗಿದ್ದ. ಹೀಗೆ ಗೋವಿಂದರಾಜನಿಗೆ ಅಂದು ಅಖಂಡ ಜಯ ದೊರೆಯಿತು. ಮಾರನೆಯ ದಿನವೆಲ್ಲ ಕೊಂಡಮರಸಯ್ಯ, ಗೋವಿಂದರಾಜನು ರಾತ್ರಿ ಮಾಡಿದ್ದ ಹಾವಳಿಯಿಂದ ಚೇತರಿಸಿಕೊಳ್ಳುವುದರಲ್ಲೇ ಕಳೆಯಿತು. ಅವನಿಗೆ-ಚೋರರ ಶಕ್ತಿ ಎಷ್ಟೆಂದು ಮೊದಲ ಬಾರಿಗೆ ಅರಿವಾಯಿತು. ಇನ್ನು ಅವರನ್ನು ಹಾಗೆಯೇ ಬಿಟ್ಟರೆ, ತನ್ನ ಸೈನ್ಯದ ಶಿಸ್ತು ಸಡಿಲಗೊಳ್ಳಬಹುದೆಂದೂ, ಚೋರರು ಹೆಚ್ಚು ಬಲಗೊಳ್ಳಬಹುದೆಂದೂ ಊಹಿಸಿ, ಮಾರನೆಯ ದಿನವೇ ಯುದ್ಧ ಕೊಡಲು ನಿಶ್ಚಯಿಸಿದ.

ಅದರಂತೆ ಮಾರನೆಯ ದಿನ ಸೂರ್ಯೋದಯಕ್ಕೆ ಮೊದಲೇ, ಸಿದ್ಧವಾದ ಸೈನ್ಯ ಹುರುಪಿನಲ್ಲಿ ರಾಮಗಿರಿ ದುರ್ಗವನ್ನು ವಶಪಡಿಸಿಕೊಳ್ಳಲು ಹೊರಟಿತು. ಅವರನ್ನು ತಡೆದರೆ ಬೆಟ್ಟದ ತಪ್ಪಲು ಪ್ರದೇಶದಲ್ಲಿ ಮಾತ್ರ. ಅದನ್ನು ಹಾಯ್ದು ಬರಲು ಅವಕಾಶ ಕೊಟ್ಟರೆ ದುರ್ಗ ಅವರ ವಶವಾದಂತೆ–ಎಂದು ಆಲೋಚಿಸಿ, ಗೋವಿಂದರಾಜನು ತನ್ನ ಸೈನ್ಯದೊಂದಿಗೆ, ಮುಂದೊತ್ತಿ ಬರುತ್ತಿದ್ದ ಕೊಂಡಮರಸಯ್ಯನ ಸೈನ್ಯದ ಮೇಲೆ ಹಠಾತ್ತನೆ ಬಿದ್ದ.

ಎರಡು ಸೈನ್ಯಗಳಿಗೂ ಭಯಂಕರ ಯುದ್ಧ ನಡೆಯಿತು. ಅಧಿಕ ಸಂಖ್ಯೆಯಲ್ಲಿದ್ದ ಕೊಂಡಮರಸಯ್ಯನ ಕೈ ಜೋರಾದಂತೆ ಕಂಡಿತು. ಅವರ ಹೊಡೆತಗಳನ್ನು ಎದುರಿಸಲಾರದೆ, ಗೋವಿಂದರಾಜನ ಸೈನ ತತ್ತರಿಸಿತು. ಆದರೂ ಅವರು ಕೊಟ್ಟಿದ್ದ ವಚನವನ್ನು ನೆನೆದುಕೊಂಡು, ಯುದ್ಧದಿಂದ ಹಿಮ್ಮೆಟ್ಟದೆ ಧೈರ್ಯದಿಂದ ಹೋರಾಡಿದರು. ಆದರೆ ಅಲ್ಪ ಸಂಖ್ಯೆಯ ಅವರ ಸೈನ್ಯ ಬಹುಬೇಗನೆ ಕೊಂಡಮರಸಯ್ಯನ ಸೈನ್ಯದಿಂದ ಸುತ್ತುಗಟ್ಟಲ್ಪಟ್ಟಿತು. ನೋಡನೋಡುತ್ತಿದ್ದಂತೆ ಗೋವಿಂದರಾಜನ ಸೈನಿಕರು ನೆಲಕ್ಕೆ ಉರುಳತೊಡಗಿದರು. ತನಗೆ ಸೋಲು ಖಂಡಿತವೆಂದು ಗೋವಿಂದರಾಜನಿಗೆ ತಿಳಿದುಹೋಯಿತು. ಆದರೂ ಅವನು ಎದೆಗುಂದಲಿಲ್ಲ. ಯುದ್ಧದಲ್ಲಿ ಕಾದಾಡುತ್ತ ಶತ್ರುಗಳನ್ನು ಸಂಹರಿಸುತ್ತಾ, ರಣಾಂಗಣದಲ್ಲಿ ಸತ್ತರೂ

ಚಿಂತೆ ಇಲ್ಲ. ಅವರಿಗೆ ತಾನು ಕೈಸೆರೆ ಸಿಕ್ಕಬಾರದು ಎಂದು ನಿರ್ಧರಿಸಿ, ಬಹಳ ಪರಾಕ್ರಮದಿಂದ ಹೋರಾಡಿದನು. ಎಷ್ಟು ಹೋರಾಡಿದರೂ ಗೋವಿಂದರಾಜನು ಶತ್ರು ಸೈನ್ಯದ ಮುಂದೆ ಹೆಚ್ಚುಕಾಲ ನಿಂತುಕೊಳ್ಳ ಲಾಗಲಿಲ್ಲ. ಅವನು ಪ್ರಾಣದ ಮೇಲಿನ ಆಸೆ ತೊರೆದು, ಕತ್ತಿಯನ್ನು ಝಳುಪಿಸುತ್ತಾ, ಶತ್ರುಸೈನ್ಯದ ಮೇಲೆ ಬಿದ್ದು ನೂರಾರು ತಲೆಗಳನ್ನು ನೆಲಕ್ಕೆ ಉರುಳಿಸಿ, ಮಾರಣ ಹೋಮ ಮಾಡಿದನು. ಈ ಹೋರಾಟದ ದಲ್ಲಿ ಅವನ ಕೈ ಸೋಲುತ್ತಾ ಬಂತು. ಇದೇ ಸಮಯ ಸಾಧಿಸಿ, ಕೊಂಡ ಮರಸಯ್ಯನು ಉಪಾಯಾಂತರದಿಂದ, ಅವನನ್ನು ನಿಶಸ್ತ್ರಗೊಳಿಸಿ, ಅವನು ಆತ್ಮಹತ್ಯೆ ಮಾಡಿಕೊಳ್ಳುವ ಮುನ್ನವೇ ಅವನನ್ನು ಕೈಸೆರೆ ಹಿಡಿದುಬಿಟ್ಟ. ತಾನು ಸತ್ತರೂ ಕೈಸೆರೆ ಸಿಕ್ಕಬಾರದೆಂದಿದ್ದ ಗೋವಿಂದರಾಜನ ಆಸೆ ನೆರವೇರ ಲಿಲ್ಲ. ಗೋವಿಂದರಾಜನ ಕೈಸೆರೆಯೊಂದಿಗೆ ಯುದ್ಧವು ಮುಕ್ತಾಯ ವಾಯಿತು. ಅತ್ತ ದಿನಮಣಿಯು ಪಶ್ಚಿಮ ದಿಗಂತದಲ್ಲಿ ಅಸ್ತಮಿಸಿದ್ದ ; ಇತ್ತ ಗೋವಿಂದರಾಜನ ಸಾಹಸಮಯ ಜೀವನಕ್ಕೂ ಕೊನೆ ಬಂದಿತ್ತು.

# ೧೯

ವಿಜಯನಗರದ ಜನರಿಗೆ ಇಂದು ಹಿಂದೆಂದೂ ಇಲ್ಲದ ಗಡಿಬಿಡಿ. ಎಲ್ಲರೂ ಸಾಲುಗಟ್ಟಿಕೊಂಡು 'ಭುವನವಿಜಯ'ದ ಕಡೆಗೆ ಹೊರಟಿದ್ದರು. ಇಂದು ರಾಜಾಸ್ಥಾನದಲ್ಲಿ ಸಾಮ್ರಾಟರ ಸಮ್ಮುಖದಲ್ಲಿ ರಾಜದ್ರೋಹಿಗಳಾದ ತಿಮ್ಮರಸ ಮತ್ತು ಗೋವಿಂದರಾಜ ಇವರ ಬಹಿರಂಗ ವಿಚಾರಣೆ ನಡೆಯುವುದೆಂದು ಹಿಂದಿನ ದಿನವೇ ರಾಜಧಾನಿಯಲ್ಲೆಲ್ಲ ಸಾರಿದ್ದರು. ರಾಜಧಾನಿಯ ನಾಗರಿಕರು ಇಂದಿನ ಸಭೆಯಲ್ಲಿ ನಡೆಯಲಿರುವ ವಿಚಾರಣಾ ವೈಖರಿಯನ್ನು ನೋಡಲು ಬಂದಿದ್ದರು. ಎಲ್ಲರಿಗೂ ನ್ಯಾಯದೇವತೆಯ ತೀರ್ಪು ಹೇಗೆ ಆಗುವುದೋ ಎಂದು ತಿಳಿಯುವ ಕುತೂಹಲ. ಏಕೆಂದರೆ ಸಾಮ್ರಾಜ್ಯದ ಸೇವೆಯಲ್ಲಿ ತಮ್ಮ ಆಯುಸ್ಸನ್ನು ಸವೆಸಿದ ತಿಮ್ಮರಸ ಮತ್ತು ಗೋವಿಂದ ರಾಜರ ಮೇಲೆ ರಾಜದ್ರೋಹದ ಆಪಾದನೆ ಹೊರಿಸಲ್ಪಟ್ಟಿತ್ತು. ಬಹುಮಂದಿ ನಾಗರಿಕರಿಗೆ ರಾಜಕುಮಾರನ ಕೊಲೆಯಲ್ಲಿ ತಿಮ್ಮರಸನ ಪಾತ್ರವಿದೆ ಎಂದು ನಂಬುವುದೇ ಸಾಧ್ಯವಾಗಲಿಲ್ಲ. ಜನರಿಗೆ ಇಂದು ರಾಜಸಭೆಯಲ್ಲಿ ನ್ಯಾಯ ಯಾವ ರೀತಿಯಲ್ಲಿ ತೀರ್ಮಾನವಾಗುವುದೋ ತಂದೆ ಮಕ್ಕಳ ಮೇಲಿನ ಆರೋಪ ನಿಲ್ಲುವುದೋ ಅಥವಾ ಹಾರಿ ಹೋಗುವುದೋ ಎಂದು ತಿಳಿಯುವ ಕುತೂಹಲ. ಹೀಗಾಗಿ ಅರಮನೆಯ ಮುಂದೆ ಜನಸ್ತೋಮ ಇರುವೆಗಳಂತೆ ನೆರೆದಿತ್ತು.

ವೇಳೆಗೆ ಸರಿಯಾಗಿ, ಬರಬೇಕಾಗಿದ್ದ ಆಸ್ಥಾನಿಕರು, ಪುರಪ್ರಮುಖರು ಬಂದು ತಮ್ಮ ತಮ್ಮ ಆಸನಗಳಲ್ಲಿ ಕುಳಿತುಕೊಂಡರು. ಎಲ್ಲರೂ ಸಾಮ್ರಾಟ ಕೃಷ್ಣದೇವರಾಯನಿಗಾಗಿ ಎದುರು ಕಾಯುತ್ತ ಕುಳಿತಿದ್ದರು.

ನಿಶ್ಚಿತವೇಳೆಗೆ ಸರಿಯಾಗಿ ಕೃಷ್ಣದೇವರಾಯನ ಸವಾರಿ ಸಭೆಗೆ ಚಿತ್ತೈಸಿತು. ರಾಯನು ಬರಲಿರುವ ಸೂಚನೆಯನ್ನು ಹೊತ್ತು ಪಿರಂಗಿಗಳು ಬತೇರಿಗಳಿಂದ ಹಾರಿ ಧ್ವನಿಗೈದುವು. ಪುರೋಹಿತರು ಮಂತ್ರಘೋಷಣೆ ಮಾಡಿದರು. ವಂದಿ ಮಾಗಧರು ಸಾಮ್ರಾಟರ ಬಿರುದು ಬಾವಲಿಗಳನ್ನು ಉಚ್ಚಕಂಠದಲ್ಲಿ ಹೇಳಿದರು—

"ಸ್ವಸ್ತಿಶ್ರೀ ಮತ್‌ಸಮಸ್ತ ಭುವನಾಶ್ರಯ, ದಕ್ಷಿಣಭಾರತ ಪೃಥ್ವೀವಲ್ಲಭ, ಶ್ರೀಮನ್ಮಹಾರಾಜಾಧಿರಾಜ, ರಾಜಪರಮೇಶ್ವರ, ಭಕ್ತಪರಮಭಟ್ಟಾಕರ, ಸತ್ಯಾಶ್ರಯ, ವೇದವಾಕ್ಯ ಪ್ರಮಾಣ ಪರಿವಾರಪಾರೀಣ, ಪ್ರತ್ಯರ್ಥಿರಾಜವಿಭಾಡ, ಶ್ರೀವಿರೂಪಾಕ್ಷಪಾದಪದ್ಮಾರಾಧಿಕ, ವೀರಪ್ರತಾಪ, ಆಸೇತುವಿಂಧ್ಯಾದಿ ಭೂಮಂಡಲೈಕ ಛತ್ರಾಧಿಪ, ಸಕಲವರ್ಣಾಶ್ರಮಾಚಾರ, ಸನಾತನಧರ್ಮಪ್ರತೀಪಾಲಿಕ, ಸಕಲ ಕಲಾ ನಿಪುಣ, ಆಂಧ್ರಭೋಜ, ಶ್ರೀಮದ್ ವಿದ್ಯಾನಗರಿ ರಾಜಧಾನಿ ಸಿಂಹಾಸನಾಧೀಶ್ವರ, ಕರ್ಣಾಟಕ ರಾಜ್ಯ ರಮಾರಮಣ, ಶ್ರೀಮನ್ನರಸ ರಾಜೇಂದ್ರಕುಮಾರ, ಶ್ರೀ ಕೃಷ್ಣದೇವರಾಯ ಮಹಾರಾಯ ಪರಾಕ್—ಬಹು ಪರಾಕ್ !"

ಆಸ್ಥಾನಿಕರೆಲ್ಲರೂ ಎದ್ದುನಿಂತು ಪ್ರಭುಗಳಿಗೆ ಗೌರವ ತೋರಿದರು. ಅನಂತರ ಪ್ರಭುಗಳು ಸಿಂಹಾಸನವನ್ನೇರಿದ ಮೇಲೆ ಅವರೂ ತಮ್ಮ ಆಸನಗಳಲ್ಲಿ ಕುಳಿತರು.

ರಾಜ ಸಭೆಯಲ್ಲಿ ಮೌನ ಆವರಿಸಿತು.

ಜನ ಅವಕ್ಕಾಗಿ ಕೃಷ್ಣದೇವರಾಯನನ್ನೇ ನೋಡುತ್ತಿದ್ದರು. ಕೃಷ್ಣದೇವರಾಯನು ಸಭೆಗೆ ಅಪರಾಧಿಗಳನ್ನು ತಂದು, ಅವರಿಗೆಂದೇ ಗೊತ್ತುಪಡಿಸಿದ್ದ ಸ್ಥಳದಲ್ಲಿ ನಿಲ್ಲಿಸಲಾಯಿತು.

ಪ್ರಭುಗಳ ಆಜ್ಞೆಯಂತೆ ಮಹಾಮಾತ್ಯನಾದ ಕೊಂಡಮರಸಯ್ಯನು ಪ್ರಭುಗಳಿಗೆ ಬಾಗಿ ನಮಸ್ಕರಿಸಿ, ಕೈಲಿ ಹಿಡಿದಿದ್ದ ರಾಯಸವನ್ನು ಬಿಚ್ಚಿ ಓದಲು ತೊಡಗಿದನು.

ಕೊಂಡಮರಸಯ್ಯನು ಆರೋಪಣಾ ಪತ್ರವನ್ನು ಉಚ್ಚಕಂಠದಲ್ಲಿ ಓದತೊಡಗಿದ. ಮೊದಲು ತಿಮ್ಮರಸ ಹಾಗೂ ಗೋವಿಂದರಾಜರು ಸಾಮ್ರಾಜ್ಯಕ್ಕೆ ಸಲ್ಲಿಸಿದ್ದ ಅಮೋಘವಾದ ಸೇವೆಯನ್ನು ಅದರಲ್ಲಿ ಪ್ರಸ್ತಾಪಿಸಲಾಗಿತ್ತು. ಅನಂತರ ರಾಜಕುಮಾರ ಪಟ್ಟಾಭಿಷೇಕ ಸಂದರ್ಭದಲ್ಲಿ ಪ್ರಭುಗಳಿಗೂ ಮತ್ತು ತಿಮ್ಮರಸರು ತಮ್ಮ ಅಮಾತ್ಯ ಪದವಿಯಿಂದ ನಿವೃತ್ತಿಯನ್ನು ಬಯಸಿದುದು, ಪ್ರಭುಗಳು ಅವರ ಮನವೊಲಿಸಿಕೊಳ್ಳಲು ವಿಫಲರಾಗಿ ಕಡೆಗೆ ರಾಜಾಜ್ಞೆಯಂತೆ ಅವರನ್ನು ಅಧಿಕಾರದಲ್ಲಿ ಉಳಿಸಿಕೊಂಡುದು, ತದನಂತರದ ಘಟನೆಗಳು, ಕುಮಾರನ ಅಸ್ವಸ್ಥತೆ, ಅವನಿಗೆ ಹಾಲಿನಲ್ಲಿ ವಿಷ

ಹಾಕಿಸಿ ಕೊಂದುದು ಮೊದಲಾದ ಎಲ್ಲ ಸಂಗತಿಗಳನ್ನು ವಿವರವಾಗಿ ಪ್ರಸ್ತಾಪಿಸಲಾಗಿತ್ತು. ಎರಡನೆಯ ಭಾಗದಲ್ಲಿ ರಾಜಕುಮಾರರ ಕೊಲೆಯ ಹತ್ಯಾಕಾರಿಗಳ ಬಗೆಗೆ ನಡೆದ ಶೋಧನೆ ತಿಮ್ಮರಸ ಹಾಗೂ ಗೋವಿಂದ ರಾಜರ ಮೇಲೆ ಬಂದ ಸಂಶಯ ಅವರ ಬಂಧನ ಗೋವಿಂದರಾಜನು ಸೆರೆ ಮನೆಯಿಂದ ತಪ್ಪಿಸಿಕೊಂಡು ಹೋದುದು, ಅವನು ಚೋರ ಮುಖಂಡ ನಾಗಿ ರಾಜದ್ರೋಹದ ಚಳುವಳಿಯನ್ನು ಎಬ್ಬಿಸಿದುದು, ಕೊರಮನಾಯಕ ಮತ್ತು ಭರಮನಾಯಕರನ್ನು ಕೊಂದುದು, ಕಡೆಗೆ ದಂಡನಾಯಕರೇ ಹೋಗಿ ಗೋವಿಂದರಾಜನನ್ನು ಸೆರೆಹಿಡಿದು ತರಬೇಕಾದ ಪ್ರಸಂಗ—ಎಲ್ಲವನ್ನೂ ಆದ್ಯಂತವಾಗಿ ವಿವರಿಸಲಾಗಿತ್ತು.

ಆರೋಪಣೆಗಳನ್ನೆಲ್ಲ ಹೇಳಿದ ಮೇಲೆ ಕೊಂಡಮರಸಯ್ಯನು ತಿಮ್ಮರಸ ಮತ್ತು ಗೋವಿಂದರಾಜರ ಅಪರಾಧಗಳ ವಿಚಾರಣೆ ಮಾಡಿ, ನ್ಯಾಯ ತೀರ್ಮಾನ ಕೊಡಲು ಧರ್ಮದೇವತೆಯಾಗಿ ಕುಳಿತ ಕೃಷ್ಣದೇವರಾಯನನ್ನು ಪ್ರಾರ್ಥಿಸಿಕೊಂಡನು.

ಆಸ್ಥಾನಿಕರಲ್ಲಿ ಗುಜುಗುಜು ಶಬ್ದಕ್ಕೆ ಆರಂಭವಾಯಿತು. ಮಹಾ ಪ್ರಭುಗಳೇ ಅಪ್ಪಣೆ ಕೊಡಿಸಿದರು—

" ಸಾಮ್ರಾಜ್ಯ ಸೇವೆಯಲ್ಲಿ ತಮ್ಮ ಆಯುಸ್ಸಿನ ಅರ್ಧಕ್ಕಿಂತಲೂ ಹೆಚ್ಚಿನ ಭಾಗ ಕಳೆದಿರುವ ವೀರಾಗ್ರಣಿಗಳೂ, ರಾಜತಂತ್ರ ವಿಶಾರದರೂ ಆಗಿರುವ ತಿಮ್ಮರಸರನ್ನು ಇಂದು ಅವರ ಮೇಲಿನ ರಾಜದ್ರೋಹದ ಆಪಾ ದನೆಗಳಿಗಾಗಿ ವಿಚಾರಣೆ ಮಾಡಬೇಕಾಗಿ ಬಂದ ಪ್ರಸಂಗಕ್ಕಾಗಿ ನಾವು ಬಹಳ ವಿಷಾದಿಸುತ್ತೇವೆ. ಇದು ಧರ್ಮದೇವತೆಯ ನ್ಯಾಯ ಮಂದಿರ. ಇಲ್ಲಿ ಎಲ್ಲರಿಗೂ ಸಮಾನವಾದ ನ್ಯಾಯದಾನ ದೊರೆಯುತ್ತದೆ. ಯಾರಿಗೂ ಈ ಬಗ್ಗೆ ಯಾವ ವಿಧವಾದ ಶಂಕೆ ಇರುವುದು ಬೇಡ. ಎಲ್ಲರೂ ನಡೆದಿರುವ ವಾಸ್ತವ ಸಂಗತಿಗಳನ್ನು ಯಾರ ಅಂಜಿಕೆ ಇಲ್ಲದೆ, ತಿಳಿಸಬೇಕು. ಇದರಿಂದ ನ್ಯಾಯ ತೀರ್ಮಾನಕ್ಕೆ ಅನುಕೂಲವಾಗುತ್ತದೆ. ಇನ್ನು ವಿಚಾರಣೆಯು ನಡೆ ಯಲಿ " ಎಂದು ಪ್ರಭುಗಳು ಅಪ್ಪಣೆ ಕೊಡಿಸಿ, ತಮ್ಮ ಸಿಂಹಾಸನದಲ್ಲಿ ಮಂಡಿಸಿದರು.

ವಿಚಾರಣೆಗೆ ಆರಂಭವಾಯಿತು. ಜನ ಅವಾಕ್ಕಾಗಿ ಆಲಿಸಿದರು.

ಮೊದಲು ತಿಮ್ಮರಸನ ವಿಚಾರಣೆ ನಡೆಯಿತು. ಕೊಂಡಮರಸಯ್ಯ ಹಾಗೂ ಮಹಾಪ್ರಭುಗಳ ಎಲ್ಲ ಪ್ರಶ್ನೆಗಳಿಗೆ ತಿಮ್ಮರಸನು ಉತ್ತರ ಹೇಳಿ, ತನ್ನ ಹೇಳಿಕೆಯ ಕೊನೆಯಲ್ಲಿ ಇಂತೆಂದ.

" ಕೇವಲ ವಿರೋಧ ಅಭಿಪ್ರಾಯ ಭಿನ್ನಾಭಿಪ್ರಾಯಗಳು ಇದ್ದ ಮಾತ್ರಕ್ಕೇ, ದೈವ ಸ್ವರೂಪರೂ, ಅನ್ನ ಕೊಟ್ಟು ಸಲಹುವ ಧಣಿಗಳೂ ಆಗಿದ್ದ ಕುಮಾರ ಸಾಮ್ರಾಟರನ್ನು ವಿಷವಿಟ್ಟು ಕೊಲೆ ಮಾಡುವಂತಹ ಪರಮ ಪಾಪಿ ನಾನಲ್ಲ ! ನನ್ನ ಐವತ್ತು ವರ್ಷಗಳ ನಿಸ್ವಾರ್ಥ ಸೇವೆಯಲ್ಲಿ ನಾನು ಒಮ್ಮೆಯಾದರೂ ಸ್ವಾಮಿದ್ರೋಹದ, ರಾಜದ್ರೋಹದ ಚಿಂತನೆ ಮಾಡಿದವ ನಲ್ಲ. ಇಂದು ವೃದ್ಧಾಪ್ಯದಲ್ಲಿ, ಸಾಯುವ ಮುನ್ನ ಸ್ವಾಮಿದ್ರೋಹಮಾಡಿ, ನಾನು ಯಾವ ನರಕಕ್ಕೆ ಹೋಗಲಿ ? ಈ ಬಗೆಯ ದ್ರೋಹದಿಂದ, ಪಾತಕ ದಿಂದ ನಾನು ಯಾವ ಸ್ವಾರ್ಥವನ್ನು ಸಾಧಿಸಬೇಕಾಗಿದೆ ?....ನನ್ನ ಮೇಲೆ ಈ ಬಗೆಯ ಕೊಲೆಯ ಆರೋಪಣೆ, ಸ್ವಾಮಿದ್ರೋಹದ ಆರೋಪಣೆ ಬಂದು ದಕ್ಕೆ ನಾನು ಯಾರನ್ನೂ ದೂರುತ್ತಿಲ್ಲ. ಮುಖ್ಯ ನನ್ನದು ದುರ್ದೈವ. ಇದು ನನ್ನ ಜನ್ಮಾಂತರ ಕರ್ಮಫಲವೇ ಸರಿ. ಇಂತಹ ಆರೋಪ ಹೊತ್ತು ಬದುಕಿರುವುದಕ್ಕಿಂತಲೂ ಸಾಯುವುದು ಪರಮ ಸುಖ. ಮಹಾಪ್ರಭುಗಳು ವಿಚಾರಣೆ ಯಿಲ್ಲದೆಯೇ ತಮಗೆ ಸೂಕ್ತ ಕಂಡ ಶಿಕ್ಷೆ ವಿಧಿಸಬಹುದು. ಸಂತೋಷವಾಗಿ ಅನುಭವಿಸುತ್ತೇನೆ. "

ಈ ಹೇಳಿಕೆಯಿಂದ, ನೆರೆದಿದ್ದ ಆಸ್ಥಾನಿಕರ ಮೇಲೆ ಬಹಳ ಪರಿಣಾಮ ಉಂಟಾಯಿತು.

" ಹಾಗಾದರೆ ಈ ಕೊಲೆಯನ್ನು ಮಾಡಿದವರು ಯಾರು ? "

" ನನಗೆ ತಿಳಿಯದು ಪ್ರಭು ! "

" ಈ ಕೊಲೆಯಲ್ಲಿ ನಿಮ್ಮ ಪ್ರತ್ಯಕ್ಷ ಪಾತ್ರವಿಲ್ಲದಿದ್ದರೂ ನಿಮ್ಮ ಪ್ರೇರಣೆ, ಪ್ರಚೋದನೆ ಈ ಕೊಲೆಯಲ್ಲಿರುವಂತೆ ನಮಗೆ ಭಾಸವಾಗುತ್ತದೆ. ಇದರ ಬಗ್ಗೆ ಸಾಕ್ಷ್ಯವು ದೊರೆತಿದೆ— "

" ಸಾಕ್ಷಿಗಳ ವಿಚಾರಣೆಯಾಗಲಿ ಪ್ರಭು. "

ವಿಜಯಭದ್ರನು ಕೊಂಡಮರಸಯ್ಯನ ಕೋರಿಕೆಯಂತೆ ಒಬ್ಬ ಸಾಕ್ಷಿ ಯನ್ನು ತಂದು ನಿಲ್ಲಿಸಿದ.

"ನಿನ್ನ ಹೆಸರೇನು ?" ಎಂದು ಪ್ರಶ್ನಿಸಿದ ಕೊಂಡಮರಸಯ್ಯ.

"ಗರುಡ ಪ್ರಭು" ಎಂದು ಆ ವ್ಯಕ್ತಿ ಉತ್ತರಿಸಿದ.

"ನಿನ್ನ ವೃತ್ತಿ ?"

"ಹಾವಾಡಿಸುವುದು."

"ನಿನ್ನಿಂದ ಯಾರಾದರೂ ವಿಷವನ್ನು ಪಡೆದಿದ್ದರೆ ?"

"ಹೌದು ಪ್ರಭು."

"ಯಾರು ? ಗಂಡಸರೆ ? ಹೆಂಗಸರೆ ?"

"ಹೆಂಗಸರು."

"ನಿನ್ನಿಂದ ಅವರು ಹೇಗೆ ವಿಷವನ್ನು ಒಯ್ದರು ?"

"ನನಗೆ ಈ ರತ್ನಾಭರಣವನ್ನು ಕೊಟ್ಟರು ಒಡೆಯ. ನಾನು ಬಡವ. ಆಸೆಬಿದ್ದೆ. ಯಾವುದೋ ಕೆಲಸಕ್ಕೆ ವೈದ್ಯರು ಕಾರ್ಕೋಟಕ ವಿಷಬೇಕೆಂದು ಹೇಳಿದರಂತೆ. ಅದಕ್ಕಾಗಿ ಅವರು ನನ್ನ ಬಳಿಗೆ ಬಂದರಂತೆ. ನಾನು ಹಣದ ಆಸೆಗೆ ಬಲಿಬಿದ್ದು ಹೆಚ್ಚು ವಿಚಾರ ಮಾಡದೆ ಕಾರ್ಕೋಟಕ ವಿಷವನ್ನು ಒಂದು ಭರಣಿಯಲ್ಲಿ ತುಂಬಿ ಕೊಟ್ಟೆ" ಎಂದು ಹೇಳಿ ತಾನು ವಿಷ ಕೊಟ್ಟಿದ್ದ ಭರಣಿಯನ್ನು ಗುರುತಿಸಿದ.

ಅನಂತರ ಅಂತಃಪುರದ ಸೇವಕಿಯ ಸಾಕ್ಷ್ಯ ನಡೆಯಿತು.

"ರಾಜಕುಮಾರರ ಕಾಹಿಲೆಯಲ್ಲಿ ಅವರನ್ನು ಉಪಚರಿಸಲು ಇದ್ದವರು ಯಾರು ಯಾರು ?"

"ಗಂಗೆ, ಗೌರಿ ಮತ್ತು ಚನ್ನೆ ಒಡೆಯ."

"ಕುಮಾರರಿಗೆ ಹಾಲನ್ನು ಕೊಡುತ್ತಿದ್ದವರು ಯಾರು ?"

"ಚನ್ನೆ ಒಡೆಯ !"

"ಅವಳನ್ನು ಕೆಲಸಕ್ಕೆ ತೆಗೆದುಕೊಂಡು ಎಷ್ಟು ಕಾಲವಾಯಿತು ?"

"ಸುಮಾರು ಏಳು ತಿಂಗಳು ಆಯಿತು ಒಡೆಯ."

"ರಾಜಕುಮಾರನ ಕೊಲೆಯಾದ ಮೇಲೆ ಅವಳನ್ನು ಭೇಟಿಯಾಗಿದ್ದಿಯ ?"

"ಇಲ್ಲ ಒಡೆಯ ?"

"ಏಕೆ ?"

" ಆ ವೇಳೆಗೆ ಅವಳು ಆತ್ಮಹತ್ಯ ಮಾಡಿಕೊಂಡಿದ್ದಳು ! "

" ಏಕೆ ಆತ್ಮಹತ್ಯಮಾಡಿಕೊಂಡಳು ? "

" ನನಗೆ ತಿಳಿಯದು ಒಡೆಯ. ಬಹುಶಃ ಕೊಲೆಯ ಅಪರಾಧ ತನ್ನ ಮೇಲೆ ಬರಬಹುದೆಂದು ಹೆದರಿ ಆತ್ಮಹತ್ಯ ಮಾಡಿಕೊಂಡಿರಬೇಕು. "

" ಅವಳು ವಿಷವಿಟ್ಟುಕೊಂದಿರುವ ಬಗ್ಗೆ ನಿನಗೇನಾದರೂ ತಿಳಿದಿದೆಯೇ ? "

" ಇಲ್ಲ ಒಡೆಯ ! "

ಇಲ್ಲಿಗೆ ಅವಳ ಹೇಳಿಕೆ ಮುಗಿಯಿತು.

ಅನಂತರ ರಾಜ ವೈದ್ಯರ ಸಾಕ್ಷ್ಯ ನಡೆಯಿತು.

" ರಾಜಕುಮಾರರ ಕಾಹಿಲೆಯಲ್ಲಿ ಅವರಿಗೆ ವೈದ್ಯೋಪಚಾರ ನಡಸುತ್ತಿದ್ದವರು ಯಾರು ? "

" ನಾನೇ ಪ್ರಭು. "

" ಕುಮಾರರ ಸಾವಿಗೆ ಕಾರಣವೇನು ? "

" ವಿಷಪ್ರಾಶನ. ಯಾರೋ ದುರಾತ್ಮರು ಕುಮಾರರು ಕುಡಿಯುವ ಹಾಲಿನಲ್ಲಿ ಕಾರ್ಕೋಟಕ ವಿಷವನ್ನು ಬೆರಸಿ, ಕೊಂದಿರುತ್ತಾರೆ. "

" ದಾಸಿ ಚನ್ನೆಯೇ ಕುಮಾರನಿಗೆ ವಿಷವಿಟ್ಟಳೆಂದು ಹೇಳಲು ನಿಮ್ಮಲ್ಲಿ ಯಾವುದಾದರೂ ಪ್ರಮಾಣವಿದೆಯೆ ? "

" ದಾಸಿ ಚನ್ನೆಯು ಆತ್ಮಹತ್ಯ ಮಾಡಿಕೊಂಡಿದ್ದರೂ, ಅವಳ ಬೆರಳುಗಳಲ್ಲಿ ಒಂದೆರಡು ಕಡೆ, ವಿಷ ಲೇಪನದಿಂದ ಬಣ್ಣಗೆಟ್ಟಿರುವುದು ಕಂಡುಬಂದಿತು. ಅದೇ ವಿಷದಿಂದ ಕುಮಾರರ ದೇಹವೂ ಬಣ್ಣಗೆಟ್ಟಿತ್ತು. "

ಈಗ ಗೋವಿಂದ ರಾಜನ ಸರದಿ.

" ದಾಸಿ ಚನ್ನೆಯ ಪರಿಚಯ ನಿಮಗಿದೆಯೆ ? "

" ಇದೆ. "

" ಹೇಗೆ ? "

" ಅವಳು ನಮ್ಮ ಮನೆಯಲ್ಲಿ ಪರಿಚಾರಿಕೆಯಾಗಿದ್ದಳು ! "

" ನಿಮ್ಮ ಮನೆಯ ಕೆಲಸದಿಂದ ಆಕೆ ಏಕೆ ಬಿಡುಗಡೆ ಹೊಂದಿದಳು "

" ನನಗೆ ಜ್ಞಾಪಕವಿರುವಂತೆ, ತನ್ನೊಬ್ಬನ ಮಗನ ರೋಗವನ್ನು

ಗುಣಪಡಿಸಲು, ಬೇರೆ ಊರಿನಲ್ಲಿ ಇರುವ ವೈದ್ಯರ ಬಳಿಗೆ ಹೋಗಲು ನನ್ನಿಂದ ಬಿಡುಗಡೆ ಹೊಂದಿದಳು. "

" ಇದು ನಡೆದು ಎಷ್ಟು ಕಾಲವಾಯಿತು ? "

" ಬಹುಶಃ ಏಳೆಂಟು ತಿಂಗಳು ಆಗಿರಬಹುದು. "

" ಮುಂದೆ ಅವಳನ್ನು ನೀವು ಸಂಧಿಸಿದ್ದೀರಾ ? "

" ಇಲ್ಲ. "

" ಏಕೆ ? "

" ಅವಳು ಇಂತಹ ಕಡೆ ಇರುವಳೆಂದು ನನಗೆ ತಿಳಿದಿರಲಿಲ್ಲ. ನನಗೆ ಅವಳು ಅಂತಃಪುರದ ದಾಸಿಯಾಗಿ ಇರುವಳೆಂದು ತಿಳಿದುದಾದರೂ ಕುಮಾರರ ಕೊಲೆಯಾದನಂತರವೇ ?"

"ದಾಸಿ ಚನ್ನೆಯಿಂದ ಈ ಕೊಲೆ ನಡೆಯಿತೆಂದು ನೀವು ನಂಬುತ್ತೀರಾ?"

" ಈ ಬಗ್ಗೆ ನಾನೇನೂಹೇಳಲಾರೆ. ಆದರೂ, ಚನ್ನೆಯ ಸ್ವಭಾವವನ್ನು ತಿಳಿದಿದ್ದವರಿಗೆ ಅವಳಿಂದ ಕುಮಾರನ ಕೊಲೆ ನಡೆದಿದೆ ಎಂದರೆ ಅಚ್ಚರಿ ಪಡಲೇ ಬೇಕು ! "

" ಏಕೆ ?"

" ಚನ್ನೆ ನಾನು ತಿಳಿದಂತೆ ಅಂಜುಕುಳಿ . ಅವಳಿಂದ ಕೊಲೆಯಂತಹ ಭೀಕರ ಕೃತ್ಯ ಹೇಗಾಯಿತೋ ತಿಳಿಯದಾಗಿದೆ. "

ಇಲ್ಲಿಗೆ ಗೋವಿಂದರಾಜನ ಸಾಕ್ಷ್ಯ ಮುಗಿಯಿತು. ಗೋವಿಂದ ರಾಜನ ಹೇಳಿಕೆಯನ್ನು ಸಮಾಲೋಚಿಸಿ ಕ್ರೋಢೀಕರಿಸುತ್ತಾ ಕೊಂಡಮರ ಸಯ್ಯನು ಹೇಳಿದ:

" ಸ್ವಯಂ ಗೋವಿಂದರಾಜರೇ ಒಪ್ಪಿಕೊಂಡಿದ್ದಾರೆ, ಕುಮಾರರ ಹತ್ಯಾಕಾರಿಯಾದ ದಾಸಿ ಚೆನ್ನೆ ಸುಮಾರು ಏಳೆಂಟು ತಿಂಗಳ ಹಿಂದೆ ತಮ್ಮ ಊಳಿಗದಲ್ಲಿ ಇದ್ದಳೆಂಬ ವಿಷಯವನ್ನು. ಚನ್ನೆ ಇವರ ಮನೆಯ ಕೆಲಸದಿಂದ ಬಿಡುಗಡೆ ಹೊಂದಿದ ತರುಣದಲ್ಲಿಯೇ ಅಂತಃಪುರದ ದಾಸಿಯಾಗಿ ಕೆಲಸಕ್ಕೆ ಸೇರಿಕೊಂಡಿರುವಳೆಂಬುದು ನಿರ್ವಿವಾದವಾಗಿದೆ. ಅವಳು ಒಮ್ಮೆಲೇ ಗೋವಿಂದರಾಜರ ಮನೆಯನ್ನು ಬಿಟ್ಟು, ಅಂತಃಪುರದ ದಾಸಿಯಾಗಿ ಏಕೆ ಕೆಲಸಕ್ಕೆ ಸೇರಿದಳೆಂಬುದು ವಿಚಾರ ಮಾಡಬೇಕಾದ ಅಂಶವಾಗಿದೆ.

ಏಕೆಂದರೆ, ಅವಳ ಅಂತಃಪುರದ ಇತರ ದಾಸಿಯರಂತೆ, ಸಾಮಾನ್ಯ ದಾಸಿಯಾಗಿ ಉಳಿಯದೆ ಕುಮಾರರ ಶುಶ್ರೂಷೆಯಂತಹ ಗುರುತರ ಜವಾಬ್ದಾರಿ ಕೆಲಸಕ್ಕೆ, ಅಂತಃಪುರವನ್ನು ಸೇರಿದ ಏಳೆಂಟು ತಿಂಗಳ ಅವಧಿಯಲ್ಲೇ ನಿಯೋಜಿತಳಾಗಬೇಕಾದರೆ, ಅವಳ ಜಾಣ್ಮೆ, ಮತ್ತಿದ್ದಿತನ ಎಂತಹದೆಂಬುದು ತಿಳಿಯುತ್ತದೆ. ಅಲ್ಲದೆ ಅವಳು ಯವುದೋ ಒಂದು ಉದ್ದಿಶ್ಯ ಸಾಧನೆಗಾಗಿ ಈ ಬಗೆಯ ನಂಬಿಕೆಯನ್ನು ಹುಟ್ಟಿಸಿದ್ದಳೆಂಬುದೂ ವ್ಯಕ್ತವಾಗುತ್ತದೆ. ಇಲ್ಲಿ ಮತ್ತೊಂದು ವಿಷಯವನ್ನು ನಾವು ಆಲೋಚಿಸಬೇಕಾಗಿದೆ. ಗೋವಿಂದರಾಜರು ಹೇಳಿದಂತೆ—ಚನ್ನೆ ಸಾಮಾನ್ಯ ದಾಸಿ, ಅವಳದು ಅಂಜುಕುಳಿ ಸ್ವಭಾವ. ಇಂತಹ ಭೀರುವ್ಯಕ್ತಿಯಿಂದ ಕುಮಾರನ ಕೊಲೆಯಂತಹ ಮಹಾಪರಾಧ ನಡೆದಿರಬೇಕಾದರೆ ಅವಳಲ್ಲಿ ಧೈರ್ಯ ತುಂಬಿದವರು ಯಾರು? ಕೊಲೆಯ ಬಗ್ಗೆ ಪ್ರೇರಣೆ, ಪ್ರೋತ್ಸಾಹ ಕೊಟ್ಟವರು ಯಾರು? ಅವರು ಸಾಮಾನ್ಯ ವ್ಯಕ್ತಿಗಳಲ್ಲ ಎಂಬುದು ನಿಜ. ಏಕೆಂದರೆ ಚನ್ನೆ ತಾನು ಅಪರಾಧಮಾಡಿಯೂ, ಆ ವ್ಯಕ್ತಿಗಳ ನೆರವಿನಿಂದ ತಾನು ತಪ್ಪಿಸಿಕೊಳ್ಳಬಹುದೆಂಬ ಧೈರ್ಯದಿಂದಲೇ ಈ ಅಕೃತ್ಯ ಮಾಡಿದ್ದಾಳೆ. ಅವಳಿಗೆ ಈ ಬಗೆಯ ಧೈರ್ಯ, ಭರವಸೆಯುಂಟುಮಾಡಿರುವ ವ್ಯಕ್ತಿ ನಿಜಕ್ಕೂ ಸಾಮಾನ್ಯ ವ್ಯಕ್ತಿಯಲ್ಲ. ಇದನ್ನು ನಾವು ಪರ್ಯಾಲೋಚಿಸಿದರೆ, ಈ ಕೊಲೆಯ ಹಿಂದೆ ನಿಂತು ಪ್ರೇರಕರಾಗಿರುವ ಶಕ್ತಿ, ವ್ಯಕ್ತಿ ಯಾರೆಂದು ತಿಳಿಯುತ್ತದೆ. ಇನ್ನು ಕೊಲೆಯ ಉದ್ದಿಶ್ಯ! ಇದರ ಬಗ್ಗೆ ಆರೋಪಿಗಳು ಏನು ಹೇಳುತ್ತಾರೆ?"

ಗೋವಿಂದರಾಜ ಗುಡುಗಿ ಕೇಳಿದ:

"ಕುಮಾರರ ಕೊಲೆಯಂತಹ ಹೇಸಿಗೆಯ ಕೆಲಸವನ್ನು, ಪಾಪದ ಕೆಲಸವನ್ನು ನಾವು ಯಾವ ಸ್ವಾರ್ಥಸಾಧನೆಗಾಗಿಮಾಡಿದ್ದೇವೆ?"

"ಇದರಲ್ಲಿ ವೈಯಕ್ತಿಕ ಸ್ವಾರ್ಥವಿಲ್ಲ, ದಿಟ. ಆದರೂ ಈ ಕೊಲೆಯಲ್ಲಿ ಸ್ವಾರ್ಥಸಾಧನೆಯಿದೆ. ಮಹಾ ಮಾತೃಶ್ರೀ ತಿರುಮಲಾದೇವಿಯವರ ಪುತ್ರನಿಗೆ ಸಲ್ಲಬೇಕಾಗಿದ್ದ ಸಿಂಹಾಸನವನ್ನು—ನಿಮ್ಮ ದೃಷ್ಟಿಯಲ್ಲಿ ಇದು ನ್ಯಾಯವಾದ ಹಕ್ಕುದಾರಿಕೆ—ಪ್ರಭುಗಳು ಮಾತೃಶ್ರೀ ಚಿನ್ನಾದೇವಿಯವರ ಕುಮಾರರಿಗೆ ಕೊಟ್ಟದ್ದೇ ನಿಮ್ಮೆಲ್ಲರ ಅಸಮಾಧಾನಕ್ಕೆ, ವಿರೋಧಕ್ಕೆ ಕಾರಣ

ವಾಯಿತು. ಈ ಅಸಮಾಧಾನದ ದ್ವೇಷಾಸೂಯೆಯಿಂದಲೇ ರಾಜಕುಮಾರರ ಕೊಲೆ ನಡೆಯಿತೆಂದು ನಮ್ಮ ಗ್ರಹಿಕೆ. ಇದಕ್ಕೆ ಸಾಕಷ್ಟು ಪ್ರಮಾಣವಿದೆ "

"ಇದು ನಿಮ್ಮ ತಪ್ಪುಗ್ರಹಿಕೆ!" ಗೋವಿಂದರಾಜ ಗರ್ಜಿಸಿದ.

"ಎಂದಿಗೂ ಅಲ್ಲ. ಆ ದಿನ ತಿಮ್ಮರಸರೊಂದಿಗೆ ನೀವು ಅಧರ್ಮದ ವಿರುದ್ಧ ಹೋರಾಡುವುದರಲ್ಲಿ ಪ್ರಾಣವನ್ನಾದರೂ ಬಲಿಗೊಡಲು ಸಿದ್ಧರಿರುವುದಾಗಿ ಹೇಳಿದಿರಿ. ಈ ಮಾತಿಗೆ ನಿದರ್ಶನ ಕುಮಾರರ ಕೊಲೆಯೇ ಸಾಕು."

"ಇವೆಲ್ಲ ಕೇವಲ ನಿಮ್ಮ ಊಹೆ. ನೀವು ಸಾವಿರ ಬಾರಿ ಹೇಳಿದರೂ ನಾವು ಕುಮಾರನ ಹತ್ಯಾಕಾರಿಗಳಲ್ಲ."

"ನೀವು ಹತ್ಯಾಕಾರಿಗಳು ಅಹುದೊ ಅಲ್ಲವೋ ಎಂಬುದನ್ನು ಧರ್ಮಾವತಾರರು ವಿಚಾರಿಸಿ ತೀರ್ಪು ಕೊಡುತ್ತಾರೆ. ಈಗ ನೀವು ನಿಮ್ಮ ವಿದ್ರೋಹದ ಆರೋಪಕ್ಕೆ ಏನು ಹೇಳುತ್ತೀರಿ?"

"ಯಾವ ವಿದ್ರೋಹ?"

"ಸೆರೆಮನೆಯಿಂದ ತಪ್ಪಿಸಿಕೊಂಡು ಹೋದ ವಿದ್ರೋಹ! ಚೋರರ ಮುಖಂಡನಾಗಿ ನಿಂತು, ಹಳ್ಳಿಗಳನ್ನು ಲೂಟಿ ಹೊಡೆದು, ಕೊಲೆ ಸುಲಿಗೆಗಳಿಂದ ಜನರನ್ನು ಹಿಂಸಿಸಿದ ವಿದ್ರೋಹ! ಕೊರಮನಾಯಕ ಮತ್ತು ಭರಮನಾಯಕರನ್ನು ಕೊಲೆ ಮಾಡಿದ ವಿದ್ರೋಹ! ಸಾಮ್ರಾಟರ ಸೈನ್ಯವನ್ನು ಎದುರಿಸಿ ಯುದ್ಧ ಮಾಡಿದ ವಿದ್ರೋಹ! ಈ ವಿದ್ರೋಹಗಳಿಗೆ ನೀವು ಏನು ಹೇಳುತ್ತೀರಿ?"

"ಮಹಾಪ್ರಭುಗಳು ಸಮಾಧಾನ ಚಿತ್ತದಿಂದ ಆಲಿಸಬೇಕು. ಮೇಲೆ ಹೇಳಿದ ಆಪೋಪಗಳನ್ನು ನಾನು ವಿದ್ರೋಹವೆಂದು ತಿಳಿದಿಲ್ಲ ಪ್ರಭು. ನಾನು ಸೆರೆಯಿಂದ ತಪ್ಪಿಸಿಕೊಂಡು ಹೋದೆ. ನಿಜ. ಆದರೆ ನನ್ನ ಮೇಲೆ ಮಿಥ್ಯಾರೋಪಣೆ ಹೊರೆಸಿ ಅಕಾರಣವಾಗಿ ಸೆರೆಯಲ್ಲಿಟ್ಟು ವ್ಯಕ್ತಿಸ್ವಾತಂತ್ರ್ಯಕ್ಕೆ ಭಂಗ ತಂದುದನ್ನು ಎದುರಿಸಲು ನಾನು ಸೆರೆಯಿಂದ ತಪ್ಪಿಸಿಕೊಂಡು ಹೋದೆ. ನಾನು ಕಳ್ಳಕಾಕರ ಮುಖಂಡನಾಗಿ ನಿಂತು ಕೊಲೆಸುಲಿಗೆ ಮಾಡಿದ ವಿಷಯ. ನಾನು ಚೋರನಾಯಕನಾಗಿ ನಿಂತರೂ, ಚೋರರಿಂದ ಸಾಮಾನ್ಯ ಪ್ರಜೆಗಳಿಗೆ ನಾನು ಯಾವ ವಿಧವಾದ ಹಿಂಸೆ ತೊಂದರೆಗಳನ್ನೂ ಕೊಟ್ಟಿಲ್ಲ.

ನಾನು, ಬಡವರ ರಕ್ತ ಹೀರಿ ಶ್ರೀಮಂತರಾದವರ ಐಶ್ವರ್ಯವನ್ನು ದೋಚಿದ್ದೇನೆ. ಅದನ್ನು ಮತ್ತೆ ಬಡಬಗ್ಗರಿಗೆ ಹಂಚಿದ್ದೇನೆ. ನನ್ನ ಈ ಕೃತ್ಯ ರಾಜದ್ರೋಹವೆಂದು ನಾನು ಖಂಡಿತ ತಿಳಿದಿಲ್ಲ. ಇನ್ನು ಭರಮನಾಯಕ ಮತ್ತು ಕೊರಮನಾಯಕರ ಕೊಲೆ. ಇದರಲ್ಲಿ ನನಗೆ ಯಾವ ಭಾಗವಿಲ್ಲ. ಓಬನಾಯಕನು ತನಗೆ ಅನ್ಯಾಯ ಮಾಡಿದ್ದ ಆ ದುರುಳರನ್ನು ಸೆರೆಹಿಡಿದು, ಅವರನ್ನು ವಿಚಾರಣೆಗೆ ಗುರಿಪಡಿಸಿ, ಅನಂತರವೇ ಅವರನ್ನು ಶೂಲಕ್ಕೆ ಏರಿಸಿದುದು. ಇದು ಕೊಲೆಯಲ್ಲ—ಪಾಪಿಗೆ ತಕ್ಕ ಶಿಕ್ಷೆ.

"ಇನ್ನು ಸಾರ್ವಭೌಮ ಸೈನ್ಯದ ವಿರುದ್ಧ ನಾನು ಯುದ್ಧ ಮಾಡಿದುದು. ಧರ್ಮಾವತಾರರಾದ ಮಹಾಪ್ರಭುಗಳು ಅಧರ್ಮಕ್ಕೆ ಪೋಷಕರಾದ ಮೇಲೆ ಪ್ರಭುಗಳ ವಿಚಾರದ ಕಣ್ಣಿಗೆ ಮುಸುಕಿರುವ ಈ ಪರೆಯನ್ನು ಕತ್ತರಿಸಲೆಂದೇ ವಿದ್ರೋಹದ ಚಳುವಳಿಗೆ ನಾನು ಪ್ರೇರಕನಾದೆ. ಮಹಾಪ್ರಭುಗಳ ಸೈನ್ಯವನ್ನು ಎದುರಿಸಿದೆ. ಇದು ನನ್ನ ಕರ್ತವ್ಯ, ಸಾಮ್ರಾಜ್ಯದ ಹಿತಚಿಂತನೆಯಿಂದ ಮಾಡಿದ ಸಾಹಸ ಎಂದು ನನ್ನ ಭಾವನೆಯೇ ಹೊರತು ರಾಜದ್ರೋಹವೆಂದು ನಾನು ಪರಿಗಣಿಸಿಲ್ಲ ಪ್ರಭು !"

"ಪ್ರಭುಗಳ ವರ್ತನೆಯನ್ನು ವಿಮರ್ಶಿಸುವ ಅಧಿಕಾರ ರಾಜಸಭೆಗೆ ಇಲ್ಲ. ಮಹಾಪ್ರಭುಗಳು ಧರ್ಮಾವತಾರರು. ಅವರಿಂದ ಎಂದಿಗೂ ಅಧರ್ಮ ನಡೆದಿಲ್ಲ." ಎಂದು ಕೊಂಡಮರಸಯ್ಯ ಹೇಳಿದ.

"ಪ್ರಭುಗಳು ನ್ಯಾಯಮೂರ್ತಿಯಾಗಿ ಕುಳಿತಾಗ ಈ ಮಾತು ಸತ್ಯವಾದರೂ, ಪ್ರಭುಗಳು ತಮ್ಮ ವೈಯಕ್ತಿಕ ಜೀವನದಲ್ಲಿ ಧರ್ಮಪ್ರವರ್ತಕರಾಗದೆ, ಅಧರ್ಮಕ್ಕೆ ಇಂಬುಗೊಡುವ ವಿಚಾರ ಮಂಥನ ನಡಸಿದಾಗ, ಅವರ ವರ್ತನೆಯನ್ನು ವಿಮರ್ಶಿಸಿ, ತೀರ್ಪಿೀಯುವ ಅಧಿಕಾರ ರಾಷ್ಟ್ರದ ಜನತೆಗೆ ಇದೆ ; ಸಾಮ್ರಾಜ್ಯದ ಹಿತಚಿಂತಕನಾದ ಪ್ರತಿಯೊಬ್ಬ ಪೌರನಿಗೂ ಇದೆ."

"ತುಂಬಿದ ರಾಜಸಭೆಯಲ್ಲಿ ಪ್ರಭುಗಳ ದೂಷಣೆ ಸಲ್ಲದು !" ಕೊಂಡಮರಸಯ್ಯ ಗರ್ಜಿಸಿದ.

"ಪ್ರಭುಗಳನ್ನು ಅನ್ಯಥಾ ದೂಷಿಸುವುದಾದರೆ ಈ ನಾಲಗೆಯನ್ನು ಮಾತ್ರವಲ್ಲ, ಈ ದೇಹವನ್ನೇ ಕತ್ತರಿಸಿ, ನಾಯಿನರಿಗಳಿಗೆ ಚಲ್ಲಬಹುದು.

ಗೋವಿಂದರಾಜನು ಎಂದಿಗೂ ಸುಳ್ಳಾಡುವುದಿಲ್ಲ. ಎದೆಂದಿಗೂ ಅನ್ಯಾಯಕ್ಕೆ, ಅಧರ್ಮಕ್ಕೆ ಮಣಿಯುವುದಿಲ್ಲ."

ಈ ಮಾತು ಕೇಳಿ ರಾಜಸಭೆಯಲ್ಲಿ ಹಾಹಾಕಾರವೆದ್ದಿತು. ಕೃಷ್ಣ ದೇವರಾಯನು ಕುಳಿತಲ್ಲಿಯೇ ತನ್ನ ನಿಂದನೆಯನ್ನು ಕೇಳಿ ಕೆರಳಿದ. ರಾಯನ ಉಗ್ರ ಮುಖವನ್ನು ನೋಡಿ ತಿಮ್ಮರಸನು ಹೇಳಿದ!

" ಗೋವಿಂದರಾಜನ ಒರಟು ಮಾತುಗಳಿಗೆ ಮಹಾಪ್ರಭುಗಳು ಸಿಟ್ಟಾಗಬಾರದು. ಅವನು ಯೌವನದ ಕಾವಿನಲ್ಲಿ ಔಚಿತ್ಯವರಿಯದೆ ಮಾತನಾಡಿದ್ದಾನೆ. ಅವನ ಮಾತನ್ನು ಪ್ರಭುಗಳು ಕ್ಷಮಿಸಬೇಕು.

"ಆದರೂ ಅವನ ಮಾತಿನಲ್ಲಿ ಸತ್ಯವಿದೆ. ವ್ಯಕ್ತಿಯೇ ಆಗಲಿ, ಸಮಿಷ್ಠಿಯೇ ಆಗಲಿ, ಧರ್ಮಮಾರ್ಗದಲ್ಲಿ ನಡೆದರೆ ಶ್ರೇಯಸ್ಸಿದೆ. ಇದರಿಂದ ಜಗತ್ತಿಗೆ ಕಲ್ಯಾಣವಿದೆ. ಸುಖ ಸಂತುಷ್ಟಿಗಳು ಉಂಟಾಗುತ್ತವೆ. ಆ ಧರ್ಮ ಬಿಟ್ಟು ಅಧರ್ಮಕ್ಕೆ ಎಡೆ ಕೊಟ್ಟಂದೇ ಆ ವ್ಯಕ್ತಿಯ, ಆ ಸಮಿಷ್ಠಿಯ ಪತನ. ಧರ್ಮಸ್ಥಾಪನೆಗಾಗಿ ಹುಟ್ಟಿದ ಈ ಧರ್ಮಸಾಮ್ರಾಜ್ಯದಲ್ಲಿ ಎಲ್ಲಿಯ ತನಕ ಅಧರ್ಮ ತಲೆ ಎತ್ತುವುದಿಲ್ಲವೋ ಅಲ್ಲಿಯ ತನಕ ಇದಕ್ಕೆ ಯಾವ ಚ್ಯುತಿ ಇಲ್ಲ. ಅಧರ್ಮ ಪ್ರಬಲಿಸಿ, ಧರ್ಮ ಮೂಲೆಗುಂಪಾದಂವೇ ಸಾಮ್ರಾಜ್ಯಕ್ಕೆ ಗಂಡಾಂತರವೆಂದು ಪೂಜ್ಯರಾದ ವಿದ್ಯಾರಣ್ಯ ಮುನೀಂದ್ರರ ಭವಿಷ್ಯ ವಾಣಿ ಇದೆ. ಇದು ಎಲ್ಲ ಕಾಲಕ್ಕೂ ಅವರು ಕೊಟ್ಟಿರುವ ಎಚ್ಚರಿಕೆ. ಪ್ರಭುಗಳು ತಿಳಿದೋ ತಿಳಿಯವೆಯೋ ಅಧರ್ಮ ಸಂಚಾಲಕರಾಗುತ್ತಿದ್ದೀರಿ. ಪರಧರ್ಮಗಳನ್ನು ಗೌರವ ಬುದ್ಧಿಯಿಂದ ನೋಡಬೇಕಾಗಿದ್ದ ಪ್ರಭುಗಳು ಮುಸ್ಲಿಮರನ್ನು ತಿರಸ್ಕಾರವಾಗಿ ನೋಡುತ್ತಿದ್ದೀರಿ. ಮುಸ್ಲಿಮರಾದ ಬಹಮನಿ ಸುಲ್ತಾನರನ್ನು ಪ್ರಭುಗಳು ದರ್ಪದಿಂದ, ತಿರಸ್ಕಾರದಿಂದ ನಡಸಿಕೊಂಡು ಅವರಿಗೆ ತುಂಬ ಅಪಮಾನ ಮಾಡಿದ್ದೀರಿ. ಇನ್ನಾದರೂ ಈ ಬಗೆಯ ವರ್ತನೆಯನ್ನು ನಿಲ್ಲಿಸಿ ಬಹಮನಿ ಸುಲ್ತಾನರೊಂದಿಗೆ ನಿರಂತರವಾದ ಸ್ನೇಹವನ್ನು ಬೆಳಸಿ ; ಹಿಂದೂ ಮುಸ್ಲಿಂ ಸಖ್ಯವನ್ನು ಸಾಧಿಸಿದ ಮಹಾಸಾಮ್ರಾಟರೆಂದು ಇತಿಹಾಸದಲ್ಲಿ ಅಜರಾಮರವಾದ ಕೀರ್ತಿ ಪಡೆಯಿರಿ. ರಾಷ್ಟ್ರಹಿತಸಾಧನೆಯಲ್ಲಿ ತೊಡಗಿರುವ ಪ್ರಭುಗಳು ಕೇವಲ ವೈಯಕ್ತಿಕವಾದ ಆಸೆ, ಆಕಾಂಕ್ಷೆಗಳಿಗೆ, ರಾಷ್ಟ್ರದ ಹಿತವನ್ನು

ಬಲಿಗೊಡಬಾರದು. ಪ್ರಜಾಪರಿಪಾಲನೆಯಲ್ಲಿ ವೈಯಕ್ತಿಕ ಸುಖಕ್ಕೆ ತಿಲಾಂಜಲಿಯನ್ನು ಇತ್ತು ಸಾಮ್ರಾಜ್ಯವೇ ತಮ್ಮ ಮನೆ, ಪ್ರಜೆಗಳೇ ತಮ್ಮ ಮಕ್ಕಳೆಂದು ತಿಳಿಯಬೇಕು. ಆಗ ಸಾಮ್ರಾಜ್ಯದಲ್ಲಿ ಹಾಲು ಜೇನು ಹೊಳೆಯಾಗಿ ಹರಿಯುತ್ತದೆ. ಶಾಂತಿ, ನೆಮ್ಮದಿಗಳು ನೆಲೆಯಾಗಿ ನಿಲ್ಲುತ್ತವೆ. ಭೂಮಿ ಸ್ವರ್ಗವಾಗುತ್ತದೆ. ಅಂತಹ ಆದರ್ಶ ಪ್ರಭುಗಳು ತಾವಾಗಬೇಕು. ಅಂತಹ ಆದರ್ಶರಾಜ್ಯ ನಮ್ಮದಾಗಬೇಕು. ಇದೇ ತಿಮ್ಮರಸನ ಆಶಯ!"

ಎಂದು ಹೇಳಿ ತನ್ನ ಮಾತನ್ನು ನಿಲ್ಲಿಸಿದನು.

ಈಗ ಪ್ರಭುಗಳು ನ್ಯಾಯ ದೇವತೆಯಾಗಿ ತೀರ್ಪು ಕೊಡಲು ಸಿದ್ಧರಾದರು.

ಪ್ರಭುಗಳು ಗಂಭೀರ ಧ್ವನಿಯಲ್ಲಿ ಹೇಳಿದರು.

"ಮಹಾಜನರೇ, ಇದುವರೆಗೆ ನಡೆದ ಎಲ್ಲ ವಿಚಾರಣೆಯನ್ನು ಆದ್ಯಂತವಾಗಿ ನೀವು ಕೇಳಿದ್ದೀರಿ.

"ಕುಮಾರರ ಪಟ್ಟಾಭೀಷೇಕದಿಂದ ನಾವು ಅಧರ್ಮ ಪ್ರವರ್ತಕರಾದೆವೆಂಬ ತಿಮ್ಮರಸರ ಮಾತನ್ನು ನಾವು ಒಪ್ಪುವುದಿಲ್ಲವೆಂದು ವಿಷಾದದಿಂದ ಹೇಳಬೇಕಾಗಿದೆ. ನಮ್ಮ ಕೃತಿ ಅಧರ್ಮವಾಗಿದ್ದದ್ದರೆ, ಅದನ್ನು ಮಹಾಜನತೆಯೇ ಎತ್ತಿ ತೋರಿಸುತ್ತಿತ್ತು. ಆದರೆ ಮಹಾಜನತೆ ಕುಮಾರರ ಪಟ್ಟಾಭಿಷೇಕದಿಂದ ಸಂತೋಷಪಟ್ಟಿದೆ, ಎನ್ನಲು ಅವರ ಸಂತೋಷ ಸಂಭ್ರಮಗಳೇ ಸಾಕ್ಷಿ. ಇಂತಿರುವಲ್ಲಿ, ತಿಮ್ಮರಸರು ವ್ಯಕ್ತಪಡಿಸಿರುವ ಅಭಿಪ್ರಾಯ—ಧರ್ಮಾಧರ್ಮದ ದೃಷ್ಟಿಯಲ್ಲಿ ಎಷ್ಟರ ಮಟ್ಟಿಗೆ ಅನ್ಯಾಯವೆನ್ನುವುದನ್ನು ಆಲೋಚಿಸಿದಾಗ, ಅದು ಕೇವಲ ಅವರ ವೈಯಕ್ತಿಕ ಅಭಿಪ್ರಾಯವೆಂದು ಹೇಳಲೇ ಬೇಕು. ಕೇವಲ ಅಭಿಪ್ರಾಯಭೇದವಿದ್ದ ಮಾತ್ರಕ್ಕೆ ಕುಮಾರರ ಕೊಲೆಯಂತಹ ಮಹಾಪರಾಧ ನಡೆಯಬೇಕೆ? ಎಂಬುದನ್ನು ಪರಿಶೀಲಿಸಬೇಕಾದ ಅಂಶ.

"ಕುಮಾರನ ಕೊಲೆಯಲ್ಲಿ ಯಾವುದೋ ದುರುದ್ದೇಶವಿದೆ. ಯಾರೋ ಉದ್ದೇಶ ಪೂರ್ವಕವಾಗಿಯೇ ಈ ಅಕೃತ್ಯವೆಸಗಿದ್ದರೆ ಯಾರು ಎಸಗಿರುವ ಅಕೃತ್ಯವಿದು? ಅವರ ಉದ್ದಿಶ್ಯವೇನು? ಎಂಬುದನ್ನು ಸ್ಥೂಲವಾಗಿ ವಿಚಾರಮಾಡೋಣ.

"ಈ ಕೊಲೆ ಸಾಮಾನ್ಯ ದಾಸಿಯೊಬ್ಬಳು ಮಾಡಿರುವ ಕೊಲೆ ಎಂದು ಹೇಳಲು ಬರುವಂತಿಲ್ಲ. ಈ ಕೊಲೆಯ ಹಿಂದೆ, ಮಹದ್ವ್ಯಕ್ತಿಗಳ ಕೈವಾಡವಿದೆ. ಯಾವುದೋ ಸ್ವಾರ್ಥ–ರಾಜಕೀಯವಾದ ಸ್ವಾರ್ಥ ಅಡಗಿದೆ. ಅವರ ಸ್ವಾರ್ಥಸಾಧನೆ ಈ ಕೊಲೆಯಿಂದ ಸಾಧಿಸಿತೆ? ಎನ್ನುವ ಪ್ರಶ್ನೆಗೆ ಉತ್ತರ ಹುಡುಕಿದರೆ, ಅಪರಾಧಿ ಯಾರೆಂದು ಹೊರಪಡುತ್ತಾರೆ.

"ಕುಮಾರನ ಕೊಲೆಯಿಂದ ಆಗಿರಬಹುದಾದ ಸ್ವಾರ್ಥಸಾಧನೆ ಎಂದರೆ, ಸಿಂಹಾಸನಕ್ಕೆ ಇದ್ದ ಇಬ್ಬರು ಹಕ್ಕುದಾರರಲ್ಲಿ ಒಬ್ಬನು ಈ ಕೊಲೆಯಿಂದ ತೀರಿ ಕೊಂಡರೆ ಉಳಿದವನಿಗೆ ಸಿಂಹಾಸನ ದೊರೆಯುವುದು. ಅಂದರೆ, ತಿರುಮಲಾದೇವಿಯ ಪುತ್ರನಿಗೆ ಸಿಂಹಾಸನದ ಹಕ್ಕುದಾರಿಕೆ ಈ ಕೊಲೆ ಯಿಂದ ಉರ್ಜಿತವಾಗುವುದು. ಇದರಿಂದ ಹೊರಬೀಳುವ ಅಂಶ:

"ಮಹಾರಾಣಿ ತಿರುಮಲಾದೇವಿಯೋ ಅಥವಾ ಅವಳ ಅಭಿಮಾನ ವರ್ಗಕ್ಕೆ ಸೇರಿದ ಯಾರಿಂದಲೋ ಆಗಿರುವ ಕೊಲೆ ಇದು. ಈ ಅಂಶದ ಮಹತ್ವವನ್ನು ಅರಿತರ ಕೊಲೆಪಾತಕಿ ಯಾರೆಂಬುದನ್ನು ನಾವು ಸುಲಭವಾಗಿ ಗೊತ್ತು ಹಚ್ಚಬಹುದು.

"ತಿರುಮಲಾದೇವಿಯವರು ತಮ್ಮ ಪುತ್ರನ ಮೇಲಿನ ಮೋಹದಿಂದ ಈ ಕೊಲೆಯನ್ನು ಮಾಡಿರಬೇಕು. ಇಲ್ಲವಾದರೆ, ತಿರುಮಲಾದೇವಿಯ ಪುತ್ರನ ಮೇಲೆ ವಾತ್ಸಲ್ಯವಿಟ್ಟ ಬೇರೆ ಯಾರಾದರೂ ಮಾಡಿಸಿರಬೇಕು.

"ಮಹಾರಾಣಿ ತಿರುಮಲಾದೇವಿಯವರಿಂದ ಈ ಕೊಲೆ ಬಹುಶಃ ನಡೆ ದಿರಲಾರದೆಂದು ನಮ್ಮ ಅಭಿಪ್ರಾಯ. ಯಾಕೆಂದರೆ, ತಿರುಮಲಾದೇವಿಯವರ ಸ್ವಭಾವಪರಿಚಯವಿರುವ ಯಾರಿಗೂ ಅವರ ಸಾತ್ವಿಕ ಗುಣ, ಮೇಲಾಗಿ, ಹೆಂಗರುಳಿನ ಪರಿಚಯವಾಗದೆ ಇರದು. ಅವರು ನಮ್ಮೊಂದಿಗೆ ಕುಮಾರರ ಪಟ್ಟಾಭಿಷೇಕದ ಬಗ್ಗೆ ಮಾತನಾಡಿದಾಗ, ತುಂಬ ಉದಾತ್ತ ರೀತಿಯಲ್ಲಿ ವರ್ತಿಸಿದ್ದಾರೆ. ಅವರಿಂದ ಕುಮಾರನ ಕೊಲೆ ಖಂಡಿತ ನಡೆದಿರಲಾರದೆಂದು ನಮ್ಮ ನಂಬಿಕೆ.

"ಇನ್ನು ಬೇರೆಯವರು ಮಹಾರಾಣಿ ತಿರುಮಲಾದೇವಿಯ ಪುತ್ರನ ಮೇಲಿನ ವಾತ್ಸಲ್ಯದಿಂದ ಕೊಲೆಮಾಡಿಸಿರುವರೆಂಬ ವಿಷಯ.

"ತಿಮ್ಮರಸ ಮತ್ತು ಗೋವಿಂದರಾಜರು ಕುಮಾರನ ಪಟ್ಟಾಭಿಷೇಕವನ್ನು

ಮೊದಲಿನಿಂದಲೂ ಅಧರ್ಮವೆಂದು ತಿಳಿದು, ವಿರೋಧಿಸುತ್ತ ಬಂದಿದ್ದಾರೆ. ಇವರಿಬ್ಬರೂ ತಮಗೆ ಈ ಕೊಲೆಯಲ್ಲಿ ಯಾವ ಪಾತ್ರವಿಲ್ಲವೆಂದು ಹೇಳುತ್ತಿದ್ದರೂ, ಗೋವಿಂದರಾಜನ ಮನೆಯ ಪರಿಚಾರಿಕೆಯಾಗಿದ್ದ ಹೆಣ್ಣಿನಿಂದಲೇ ಈ ಕೊಲೆ ನಡೆದಿರುವುದರಿಂದ, ಸಾಕ್ಷಿಗಳು ಇದೇ ವಿಷಯವನ್ನು ಸ್ಪಷ್ಟಪಡಿಸಿರುವುದರಿಂದ ಈ ಕೊಲೆಯಲ್ಲಿ ಅವರ ಕೈವಾಡ, ಪ್ರಚೋದನೆ, ಪ್ರೋತ್ಸಾಹಗಳು ತಮ್ಮ ಕೆಲಸ ಮಾಡಿವೆ. ಅಂತಲೇ ಕುಮಾರನ ಕೊಲೆಗೆ ಪರೋಕ್ಷನಾಗಿ ಇವರೇ ಕಾರಣರಾಗುತ್ತಾರೆ.

"ಇಷ್ಟೇ ಅಲ್ಲದೆ, ಗೋವಿಂದರಾಜರು ಸೆರೆಮನೆಯಿಂದ ತಪ್ಪಿಸಿಕೊಂಡು ಹೋಗಿ, ಚೋರರ ಮುಖಂಡರಾಗಿ, ಪ್ರಜೆಗಳಿಗೆ ಉಪಟಳವನ್ನು ಕೊಟ್ಟಿದ್ದಾರೆ. ನಮ್ಮ ಸೈನ್ಯದ ವಿರುದ್ಧ ಯುದ್ಧ ಮಾಡಿದ್ದಾರೆ—ಇದು ಅವರ ದೃಷ್ಟಿಯಲ್ಲಿ ರಾಜದ್ರೋಹವಾಗದೆ ಇದ್ದರೂ ಶಾಸನದ ದೃಷ್ಟಿಯಲ್ಲಿ ಇದು ರಾಜದ್ರೋಹವಾದ ಅಪರಾಧ—

"ಇವೆಲ್ಲವನ್ನು ಸಮಾಲೋಚಿಸಿ ನೋಡಿದರೆ, ಅಪರಾಧಿಗಳಿಬ್ಬರಿಗೂ, ಮರಣದಂಡನೆಯನ್ನೇ ವಿಧಿಸಬೇಕಾಗುತ್ತದೆ. ಇಲ್ಲಿ ಒಂದು ಧರ್ಮಸಂಕಟವಿದೆ.

"ಅಪರಾಧಿಗಳಿಬ್ಬರೂ ಬ್ರಾಹ್ಮಣರು. ಅವರಿಗೆ ಮರಣದಂಡನೆಯನ್ನು ವಿಧಿಸುವಂತೆ ಇಲ್ಲ. ಅವರ ಅಪರಾಧಗಳು ಉಗ್ರತರವಾಗಿರುವುದರಿಂದ, ಅವರಿಗೆ ಉಗ್ರವಾದ ಶಿಕ್ಷೆಯನ್ನೇ ವಿಧಿಸಬೇಕಾಗಿದೆ. ಆದುದರಿಂದ ಈ ತಿಮ್ಮರಸ ಮತ್ತು ಗೋವಿಂದರಾಜರ ಕಣ್ಣುಗಳನ್ನು ಕಿತ್ತು ಅಂಧರನ್ನಾಗಿ ಮಾಡಿ, ಆಮರಣಾಂತ ಅವರನ್ನು ಸೆರೆಮನೆಯಲ್ಲಿ ಇಡತಕ್ಕದ್ದೆಂದು ನಾವು ಘೋಷಿಸುತ್ತೇವೆ."

ಎಂದು ಹೇಳಿದವರೇ ಪ್ರಭುಗಳು ಸಿಂಹಾಸನವನ್ನು ಬಿಟ್ಟು ಹೊರಡಲು ಎದ್ದು ನಿಂತರು. ಈ ತೀರ್ಪನ್ನು ಕೇಳಿ ರಾಜಸಭೆಯ ಜನ ಗರ ಬಡಿದವರಂತೆ ನಿಶ್ಶಬ್ದವಾಗಿ ಅವಕ್ಕಾಗಿ ಕುಳಿತಿತ್ತು. ಕೆಲವರು ತಮ್ಮಲ್ಲಿಯೇ ಗೊಣಗುತ್ತಿದ್ದರು: "ಪ್ರಭುಗಳದು ಉತ್ಕೃಷ್ಟವಾದ ತೀರ್ಪು!" ಮತ್ತೆ ಕೆಲವರು "ಪ್ರಭುಗಳು ಮಹಾಪರಾಧ ಮಾಡಿದರು, ಅನ್ಯಾಯ ಮಾಡಿದರು" ಎಂದು ತಮ್ಮ ಸಂತಾಪವನ್ನು ವ್ಯಕ್ತಪಡಿಸುತ್ತಿದ್ದರು.

ಸಭೆಯಲ್ಲಿ ಗಜಿಬಿಜಿ ಶಬ್ದ ಉಂಟಾಯಿತು. ಕೊಂಡಮರಸಯ್ಯ ಪ್ರಭುಗಳ ಆಜ್ಞೆಯನ್ನು ಜಾರಿಮಾಡಲು ವಿಜಯಭದ್ರನ ಕಡೆ ನೋಡಿದ. ವಿಜಯಭದ್ರನು ತಡಮಾಡದೆ, ಸೆರೆಯಾಳುಗಳಿಬ್ಬರನ್ನೂ, ಕಬ್ಬಿಣದ ಸಂಕೋಲೆಗಳಿಂದ ಬಿಗಿಸಿ ಸೈನಿಕರ ಪಹರೆಯೊಂದಿಗೆ, ಅವರನ್ನು ಮುನ್ನಡಸಿ ಕೊಂಡು ಹೊರಟ—ಅವರ ಕಣ್ಣುಗಳನ್ನು ಕಿತ್ತು ಅಂಧರನ್ನಾಗಿ ಮಾಡಲು. ಸಭೆಯ ಜನಸ್ತೋಮ ಸೆರೆಯಾಳುಗಳನ್ನು ಅವಾಕ್ಕಾಗಿ ನೋಡುತ್ತಾ ವಿಗ್ರಹದಂತೆ ನಿಂತಿತ್ತು.

ಸೆರೆಯಾಳುಗಳನ್ನು ನೋಡುವ ಸಂಭ್ರಮದಲ್ಲಿ ಕೃಷ್ಣದೇವರಾಯನು ಯಾವಾಗ ಸಭಾತ್ಯಾಗಮಾಡಿದನೆಂಬುದೂ ಅವರಿಗೆ ತಿಳಿಯದಾಗಿತ್ತು.

# ೨೦

ಸಭೆಯ ಕಾರ್ಯಕಲಾಪಗಳನ್ನೆಲ್ಲ ಮುಗಿಸಿಕೊಂಡು ಅರಮನೆಯ ಅಂತಃಪುರಕ್ಕೆ ಬಂದು ವಿಶ್ರಾಂತಿ ಭವನದಲ್ಲಿ, ಹಂಸತೂಲಿಕಾತಲ್ಪದಲ್ಲಿ ಮೈಚಾಚಿ, ಮಲಗಿಕೊಂಡರೂ, ರಾಯನಿಗೆ ಅಂದಿನ ತೀರ್ಪಿನಿಂದ ಮನಸ್ಸು ಅಶಾಂತಿಯ ಆಗರವಾಗಿತ್ತು. ಎದೆಯಲ್ಲಿ ತಳಮಳ ಉಂಟಾಗಿತ್ತು. ಹೀಗೆಂದು ಹೇಳಲಾಗದ ಅವ್ಯಕ್ತ ವೇದನೆ, ಮೂಕಸಂಕಟ ಎದೆಯನ್ನು ಕಿತ್ತು ತಿನ್ನುತ್ತಿತ್ತು. ಮನಸ್ಸಿಗೆ ಏನೋ ಒಂದು ಬಗೆಯ ಕಳವಳ, ಅಸ್ಥಿರತೆ ಬಾಧಿಸುತ್ತಿದ್ದುವು. ಅವನಿಗೆ ಆ ಗಳಿಗೆಯಲ್ಲಿ ಯಾರ ಸಹವಾಸವೂ ಬೇಕಿರಲಿಲ್ಲ. ತಾನು ಒಂಟಿಯಾಗಿ ಕುಳಿತು,ಎದೆಯ ಅಳಲನ್ನು ತೋಡಿ ಕೊಳ್ಳುವ ಆಸೆಯಾಗಿತ್ತು. ಇದನ್ನು ಯಾರೊಂದಿಗೆ ಹೇಳಿಕೊಳ್ಳುವುದು ? ಯಾರು ತನ್ನನ್ನು ಬಾಲ್ಯದಿಂದ ಎತ್ತಿಕೊಂಡು, ಮುದ್ದಾಡುತ್ತಿದ್ದರೋ, ಯೌವನದಲ್ಲಿ ಶತ್ರುಗಳ ಸಂಚಿನಿಂದ ಪಾರುಮಾಡಿ, ಪ್ರಾಣ ಉಳಿಸಿದರೋ, ತಾನು ಸಾಮ್ರಾಟನಾದರೂ ತನ್ನ ಎಲ್ಲ ದಂಡಯಾತ್ರೆಗಳಲ್ಲಿ ಬಲಭುಜವಾಗಿ ನಿಂತು ವಿಜಯದ ಮೇಲೆ ವಿಜಯವನ್ನು ಸಂಪಾದಿಸಿಕೊಟ್ಟರೋ, ವಿಸ್ತಾರ ವಾದ ಸಾಮ್ರಾಜ್ಯವನ್ನು ವ್ಯವಸ್ಥಿತವಾದ ಅಸ್ಥಿಭಾರದ ಮೇಲೆ ನೆಲೆಯಾಗಿ ನಿಲ್ಲಿಸಿ, ರಾಜ್ಯಾಡಳಿತದ ಸಾವಿರ ಕೋಟಲೆಗಳಿಂದ ತನ್ನನ್ನು ಪಾರುಮಾಡಿ ದ್ದರೋ ಅಂತಹ ನಿಸ್ಪೃಹ ಸ್ವಾಮಿನಿಷ್ಠ ಸೇವಕನೂ ತನಗೆ ಗೆಳೆಯ, ತಂದೆ, ಮಂತ್ರಿಯೂ ಒಮ್ಮೆಲೇ ಆಗಿದ್ದ ತಿಮ್ಮರಸನನ್ನು, ಅಪ್ಪಾಜಿಯನ್ನು ರಾಜದ್ರೋಹ ಅಪರಾಧಕ್ಕಾಗಿ ಶಿಕ್ಷೆ ವಿಧಿಸಿ, ತಾನು ತಪ್ಪುಮಾಡಿದೆ ನೆಂದೇ ಅವನ ಅಂತರಾತ್ಮ ಮೊರೆಯುತ್ತಿತ್ತು. "ನೀನು ತಿಮ್ಮರಸನ ಅಖಂಡವಾದ ಸೇವೆಗೆ ತಕ್ಕ ಸೇವೆ ಸಲ್ಲಿಸಿರುವೆ. ಕಣ್ಣು ಕೀಳಿಸಿ ಆಮರಣಾಂತ ಸೆರಮನೆಯ ವಾಸದ ತೀರ್ಪು ಕೊಟ್ಟು ಮಹದುಪಕಾರಮಾಡಿರುವೆ" ಎಂದು ವಿವೇಕವಾಣಿ ಅವನನ್ನು ಮೂದಲಿಸುತ್ತಿತ್ತು.

"ತಿಮ್ಮರಸನು ರಾಜದ್ರೋಹವೆಸಗಿದ್ದಾನೆ, ನನ್ನ ಹೊಂಗನಸನ್ನೆಲ್ಲ ಮಣ್ಣುಗೂಡಿಸುವಂತಹ, ಅಕೃತ್ಯವೆಸಗಿದ್ದಾನೆ, ನನ್ನ ಮುದ್ದಿನ ಕುಮಾರ

ನನ್ನು ಕೊಲೆಮಾಡಿಸಿದ್ದಾನೆ. ಇಂಥವನನ್ನು ಸುಮ್ಮನೆ ಬಿಡಲು ಹೇಗೆ ಬಂದೀತು? ಕುಮಾರನ ಆತ್ಮವಾದರೂ ಹೇಗೆ ಶಾಂತಿಯನ್ನು ಪಡೆದೀತು ? " ಎಂದು ಮತ್ತೊಂದು ಮನಸ್ಸು ಪ್ರಶ್ನಿಸುತ್ತಿತ್ತು.

" ತಿಮ್ಮರಸನು—ಕುಮಾರನಿಗೆ ವಿಷವಿಡಿಸಿ ಕೊಂದನೆ? ನಿನ್ನನ್ನು ಮಗನಿಗಿಂತಲೂ ಅತಿಶಯವಾಗಿ ನೋಡಿಕೊಂಡ, ತಿಮ್ಮರಸನು ಆ ಕುಮಾರ ನನ್ನು ಮೊಮ್ಮಗನಂತೆ ಪ್ರೀತಿಯಿಂದ ನಡಸಿಕೊಂಡ ತಿಮ್ಮರಸನು—ನಿನಗೆ ವಿದ್ರೋಹ ಬಗೆಯುವನೆ ? ಇದರಲ್ಲಿ ಏನೋ ತಪ್ಪು ಆಡಗಿರಬೇಕು. ತಿಮ್ಮರಸನಂತಹ ದೈವಭಕ್ತನಿಂದ, ದೇಶಭಕ್ತನಿಂದ ಹಸುಗೂಸಿನ ಕೊಲೆ ಯಂತಹ ಮಹಾಪಾಪಕಾರ್ಯ ಖಂಡಿತವಾಗಿ ನಡೆಯಲು ಸಾಧ್ಯವಿಲ್ಲ—ಅವನೆಂದಿಗೂ, ಯಾವ ಕಾಲಕ್ಕೂ ಹತ್ಯಾಕಾರಿಯಾಗಲಾರ. ನಿನ್ನ ವಿಚಾರ ವೆಲ್ಲಿಯೋ ಮುಗ್ಗರಿಸಿದೆ, ಮತ್ತೊಮ್ಮೆ ವಿಚಾರ ನಡಸು " ಎಂದು ವಿವೇಕ ವಾಣಿ ಮೊಳಗುತ್ತಿತ್ತು.

ಈ ಅಂತರ್ ಮಥನದಲ್ಲಿ ರಾಯನು ತೊಡಗಿ ಅಶಾಂತಿಯ ಮಡುವಿನಲ್ಲಿ ಮಲಗಿರುವಾಗಲೇ, ವಿಶ್ರಾಂತಿ ಗೃಹದ ಸೇವಕನು ಓಡಿಬಂದು ಪ್ರಣಾಮ ಮಾಡಿ ನಿಂತುಕೊಂಡನು.

" ಮಹಾಪ್ರಭು, ಹೊರಗಡೆ, ಒಬ್ಬ ಹುಚ್ಚಿ ಆಗಲಿಂದಲೂ ಗದ್ದಲ ಮಾಡುತ್ತಿದ್ದಾಳೆ. ತಾನು ಮಹಾಪ್ರಭುಗಳನ್ನು ಈಗಲೇ ನೋಡಬೇಕು ; ಅವರಿಗೆ ತಾನೊಂದು ಮಹತ್ಪೂರಿತ ಸಂಗತಿಯನ್ನು ಹೇಳಬೇಕಾಗಿದೆ. ಎಂದು ಬೊಬ್ಬೆ ಇಡುತ್ತಿದ್ದಾಳೆ. ಅವಳನ್ನುನೋಡಿದರೆ ಹುಚ್ಚಿಯಂತೆ ಕಾಣು ತ್ತಾಳೆ. ಪ್ರಭುಗಳೊಡನೆ ಹೇಳಬೇಕಾದ ಸಂಗತಿಯನ್ನು ನಮಗೆ ಹೇಳಿದರೆ ನಾವು ತಿಳಿಸುವುದಾಗಿ ಎಷ್ಟು ಹೇಳಿದರೂ ಅವಳು ಒಡಂಬಡಲಿಲ್ಲ. ತಾನೇ ಅದನ್ನು ಹೇಳಬೇಕಾಗಿದೆಯಂತೆ. ಅದು ಇಂದಿನ ತೀರ್ಪಿಗೆ ಸಂಬಂಧಿಸಿದ ಯಾವುದೋ ಮಹದ್‌ಸಂಗತಿಯಂತೆ " ಎಂದು ಹೇಳಿದ.

' ಇಂದಿನ ತೀರ್ಪಿಗೆ ಸಂಬಂಧಿಸಿದ ಮಹದ್‌ಸಂಗತಿಯಂತೆ ' ಎಂದು ಕೇಳಿದೊಡನೆಯೇ ರಾಯನ ತಲೆ ಗರ್ರನೆ ಸುತ್ತಿಬಂತು. " ತನ್ನನ್ನು ನೋಡಲು ಹುಚ್ಚಿಯೊಬ್ಬಳು ಬಂದಿದ್ದಾಳೆ....ತನಗೆ ಇಂದಿನ ಕೊಲೆಗೆ ಸಂಬಂಧಿಸಿದ ಮಹತ್ಪೂರಿನ ಸಂಗತಿಯನ್ನು ತಿಳಿಸಬಯಸುತ್ತಿದ್ದಾಳೆ. ಈ

ಸಂಗತಿಗಳಿಂದ ಕುಮಾರನ ಕೊಲೆಯ ಮೇಲೆ ಹೊಸ ಬೆಳಕು ಚೆಲ್ಲುವಂತೆ ಆದರೆ.... ?" ಕೂಡಲೆ ಅವಳನ್ನು ತನ್ನ ಸಮ್ಮುಖಕ್ಕೆ ಕರೆತರಲು ರಾಯನು ಆಜ್ಞೆ ಮಾಡಿದನು.

ನಿಮಿಷ ಕಾಲದಲ್ಲಿ ಹುಚ್ಚಿಯಂತೆ ತೋರುವ ನಡುವಯಸ್ಸಿನ ಹೆಣ್ಣೊಬ್ಬಳು ಬಂದು ರಾಯನ ಮುಂದೆ ನಮಸ್ಕಾರ ಮಾಡಿ ನಿಂತಿದ್ದಳು. ಅವಳನ್ನು ನೋಡಿದರೆ, ಅವಳ ಮುಖ ಉದ್ವೇಗದಿಂದ ಉರಿಯುತ್ತಿತ್ತು. ತಲೆ ಕೆದರಿತ್ತು. ಮೈ ಬೆವರಿತ್ತು. ಬಹಳ ದೂರದಿಂದ ಬಂದವಳಂತೆ, ತುಂಬ ಆಯಾಸಗೊಂಡವಳಂತೆ, ತೋರುತ್ತಿದ್ದಳು. ಅವಳು ರಾಯನಿಗೆ ಸಾಮಾನ್ಯ ಹುಚ್ಚಿಯಂತೆ ಕಾಣದೆ, ಯಾವುದೋ ವಿಚಾರವನ್ನು ಬಲವಂತವಾಗಿ ಮನಸ್ಸಿನಲ್ಲಿ ಅದುಮಿ, ಬುದ್ಧಿ ವಿಕಾರಗೊಂಡ ಉಚ್ಚ ದರ್ಜೆಯ ಮಹಿಳೆಯಂತೆ ಕಂಡಳು. ಅವಳ ಮುಖದಲ್ಲಿನ ಉದ್ವೇಗ, ಆತುರ ಇವುಗಳನ್ನು ಕಂಡೇ ಅವಳು ಯಾವುದೋ ಮಹತ್ಸಂಗತಿಯನ್ನು ಹೇಳಲು ಬಂದಂತಿದೆ ಎಂದು ಅರಿತುಕೊಂಡ.

" ಯಾರು ನೀನು ? ಇಲ್ಲಿಗೇಕೆ ಬಂದೆ ? " ಎಂದು ರಾಯನು ಪ್ರಶ್ನಿಸಿಸಿದುವೇ ತಡ.

" ನಾನು ಪ್ರಭು ! ನಿರ್ಭಾಗ್ಯ ತಿಪ್ಪಾಜಿ—ನಿಮ್ಮ ಕುಮಾರನನ್ನು ವಿಷವಿಟ್ಟು ಕೊಲ್ಲಿಸಿದ ಮಹಾಪಾತಕಿ. "

ಈ ಮಾತುಗಳನ್ನು ಕೇಳಿ ರಾಯನಿಗೆ ಒಮ್ಮೆಲೇ ಸಹಸ್ರ ಹಾವು ಚೇಳುಗಳು ಕಡಿದಂತೆ, ಸಹಸ್ರ ಸಿಡಿಲು ಬಡಿದಂತೆ ಆಯಿತು. ತಲೆ ಗಿರ್ರನೆ ಸುತ್ತಿಬಂತು ; ನೆಲಕುಸಿಯುವಂತೆ ಭಾಸವಾಯಿತು ; ಕಣ್ಣಿಗೆ ಕತ್ತಲೆ ಮುಸುಕಿತು; ಅವನ ಹೃದಯದಲ್ಲಿ ಭಯಂಕರಬಿರುಗಾಳಿ ಎದ್ದಂತೆ ತೋರಿತು.

' ಹಾಂ ' ಎನ್ನುತ್ತ ರಾಯನು ಹಾಸಿಗೆಯ ಮೇಲೆ ಬಿದ್ದ.

" ಅನ್ಯಾಯವಾಯಿತು ! ಅನ್ಯಾಯವಾಯಿತು !! " ಎಂದು ಬಡಬಡಿಸಿದ.

ಅವನ ಕಣ್ಣಿಗೆ ತಿಮ್ಮರಸ ಗೋವಿಂದರಾಜರು " ಪ್ರಭು ! ಎಂತಹ ಅನ್ಯಾಯಮಾಡಿದಿರಿ ! ತಪ್ಪುಮಾಡದವರಿಗೆ ಶಿಕ್ಷೆವಿಧಿಸಿ ಎಂತಹ ಅನ್ಯಾಯ ಮಾಡಿದಿರಿ ?" ಎಂದು ಮೂದಲಿಸುತ್ತಾ ನಿಂತಂತೆ ಕಾಣಿಸಿತು.

" ಅಯ್ಯೋ ಎಂತಹ ಅನ್ಯಾಯವಾಯಿತು ! " ಎಂದು ಚೀರಿದ. ಮರು ಕ್ಷಣದಲ್ಲಿ ಏನನಿಸಿತೋ, ಬಳಿಯಲ್ಲೇ ಇದ್ದ ಜಾಗಟೆಯನ್ನು ಚರ್ಮದಂಡದಿಂದ ಬಡಿದು ಶಬ್ದಮಾಡಿದ. ಸೇವಕರು ಓಡಿ ಬಂದು, ಕೈ ಜೋಡಿಸಿ ನಿಂತರು.

" ಕೂಡಲೇ ಸೆರೆಮನೆಗೆ ಹೋಗಿ, ನಾನು ಹೇಳಿದೆನೆಂದು ತಿಳಿಸಿ, ತಿಮ್ಮರಸ ಮತ್ತು ಗೋವಿಂದರಾಜರ ಕಣ್ಣುಗಳನ್ನು ಕೀಳದೆ, ಅವರನ್ನು ಹಾಗೆಯೇ ಕರೆದುಕೊಂಡು ಇಲ್ಲಿಗೆ ಬರಲು ವಿಜಯಭದ್ರರಿಗೆ ತಿಳಿಸು " ಎಂದು ಹೇಳಿ, ತನ್ನ ತ್ವರಿತದ ಆಜ್ಞೆಯ ಗುರುತಿಗಾಗಿ ಕೈಲಿದ್ದ ಮುದ್ರೆಯುಂಗುರವನ್ನು ಅವನ ಕೈಲಿ ಕೊಟ್ಟು, ಆತುರವಾಗಿ ಸೇವಕರನ್ನು ಅಟ್ಟಿದ. ಈಗ ಒಂದೊಂದು ನಿಮಿಷಕ್ಕೂ ಮಹತ್ವದ ಬೆಲೆ ಬಂದಿತ್ತು. ಸೇವಕರು ಸುದ್ದಿ ತರುವ ವರೆಗೂ ರಾಯನಿಗೆ ಪ್ರಾಣದಲ್ಲಿ ಪ್ರಾಣವಿಲ್ಲ. ತನ್ನ ಆಜ್ಞೆಯನ್ನು ವಿಜಯಭದ್ರ ಈ ವೇಳೆಗೆ ತೀರಿಸಿಬಿಟ್ಟಿದ್ದರೆ? ತಿಮ್ಮರಸ ಗೋವಿಂದರಾಜರನ್ನು ಅಂಧರನ್ನಾಗಿ ಮಾಡಿಬಿಟ್ಟಿದ್ದರೆ....? ದೇವರೇ, ಇದೊಂದು ಬಾರಿ ನನ್ನ ಪ್ರಾರ್ಥನೆಯನ್ನು ಈಡೇರಿಸು. ತಿಮ್ಮರಸ ಗೋವಿಂದರಾಜರನ್ನು ಅಂಧಗೊಳಿಸುವ ಮುನ್ನವೇ ವಿಜಯಭದ್ರನಿಗೆ ಸೇವಕರ ಮೂಲಕ ಕಳುಹಿಸಿದ ತನ್ನ ಸಂದೇಶ ತಲುಪುವಂತೆ ಮಾಡು, ಎಂದು ತನ್ನ ದೇವರನ್ನು ಬಗೆಬಗೆಯಾಗಿ ಪ್ರಾರ್ಥಿಸಿಕೊಂಡ. ಅವನಿಗೆ ಒಮ್ಮೆಲೇ ವಿಸ್ಮಯ ಕಳವಳ ದುಃಖಗಳು ಉಂಟಾಗಿದ್ದುವು. ತಿಪ್ಪಾಜಿ ಹೇಳುವ ಸಂಗತಿಗಳು ನಿಜವೆ ? ಎಂದು ವಿಸ್ಮಯ. ಇದು ನಿಜವೇ ಆಗಿದ್ದರೆ ತಾನು ಕೊಟ್ಟಿರುವ ತೀರ್ಪು ಅನ್ಯಾಯ. ಇದನ್ನು ಈ ವೇಳೆಗೆ ಕಾರ್ಯಗತ ಮಾಡಿಬಿಟ್ಟಿದ್ದರೆ ಗತಿ ? ಎಂದು ಕಳವಳ. ಈ ವೇಳೆಗೆ ಕಾರ್ಯ ಮಿಂಚಿಹೋಗಿ, ವಿಜಯಭದ್ರನು ಅವರನ್ನು ಅಂಧರನ್ನಾಗಿಯೇ ಮಾಡಿಬಿಟ್ಟಿರಬಹುದೆಂದು ಊಹಿಸಿ ದುಃಖಭಾರದಿಂದ ನಿಂತಲ್ಲಿ ನಿಲ್ಲಲಾಗದೆ, ಸುಮ್ಮನೆ ಪರಿತಪಿಸಿದ. ತಿಪ್ಪಾಜಿ ಈ ಸುದ್ದಿಯನ್ನು ಮುಂಚೆ ಹೇಳಬಾರದಿತ್ತೆ ? ಅವಳು ಇದುವರೆಗೆ ಎಲ್ಲಿ ಹೋಗಿದ್ದಳು ? ಏನಾಗಿದ್ದಳು ? ಅವಳಿಂದ ಎಂತಹ ಅನರ್ಥ ಸಂಭವಿಸಿತು !—ಎಂದು ರಾಯನು ತಿಪ್ಪಾಜಿಯನ್ನು ಕುರಿತು ಚಿಂತಿಸಿದ. ಇದನ್ನು ಅರಿತವಳಂತೆ ತಿಪ್ಪಾಜಿ ತನ್ನ ಎಲ್ಲ ವೃತ್ತಾಂತವನ್ನೂ ರಾಯನಿಗೆ ಅರುಹಿದಳು.

"ನಾನು ಪರಮ ಪಾಪಿ ! ನನ್ನಂಥವಳು ತಮ್ಮ ಸಮ್ಮುಖಕ್ಕೆ ಬರಬಾರದು ! ನನ್ನ ಪಾಪ ತಮಗೆ ಸೋಂಕೀತು ! ಅಷ್ಟು ನೀಚಳು ನಾನು ! ಆದರೆ ನಾನು ತಮ್ಮ ಸಮ್ಮುಖಕ್ಕೆ ಬರಬೇ ಬೇಕಾಯಿತು. ನನ್ನ ತಪ್ಪನ್ನು ಒಪ್ಪಿಕೊಂಡು, ತಮ್ಮ ಕ್ಷಮೆಯನ್ನು ಯಾಚಿಸಲು ಬರಲೇ ಬೇಕಾಯಿತು. ತಮ್ಮ ಮುಂದೆ ನನ್ನ ತಪ್ಪನ್ನು ಒಪ್ಪಿಕೊಳ್ಳದ ಹೊರತು ನನಗೆ ಮನಸ್ಸು ಸಮಾಧಾನವಿಲ್ಲ! ನಾನು ಮಾಡಿದ ದುಷ್ಕೃತ್ಯದ—ಪಾಪ-ಭಾರದಿಂದ ಕುಗ್ಗಿದ್ದೇನೆ. ಅದು ನನ್ನನ್ನು ಜೀವ ಸಹಿತ ಸುಡುತ್ತಿರುವ ದಾವಾನಲವಾಗಿದೆ. ಅದನ್ನು ಯಾವ ಸಮುದ್ರದಲ್ಲಿ ಮುಳುಗಿಸಿದರೂ ಆರಿಸಲಾರೆ. ಈ ಬೇಗುದಿಯನ್ನು ತಣ್ಣಗೆ ಮಾಡಲಾರೆ. ಅಂತಲೇ ತಮ್ಮಲ್ಲಿಗೆ ಓಡಿ ಬಂದಿದ್ದೇನೆ, ತಪ್ಪನ್ನು ಒಪ್ಪಿಕೊಂಡು, ನನ್ನನ್ನು ದಹಿಸುತ್ತಿರುವ ಚಿಂತೆಯ ಬೆಂಕಿಯನ್ನು ಆರಿಸಲು ತಮ್ಮಲ್ಲಿಗೆ ಬಂದಿದ್ದೇನೆ" ಎಂದು ಹೇಳಿ ತನ್ನೆಲ್ಲ ಕಥೆಯನ್ನು ಎಲ್ಲಿಂದ ಆರಂಭಿಸಬೇಕೆಂದು ತಿಳಿಯದೆ, ಕೊಂಚ ಹೊತ್ತು ಮೌನ ತಾಳಿದಳು.

ರಾಯನಿಗೆ ನಿಮಿಷ ನಿಮಿಷಕ್ಕೂ ಅವಳ ಕಥೆಯನ್ನು ಕೇಳುವ ಕುತೂಹಲ ಹೆಚ್ಚಾಯಿತು.

ತಿಪ್ಪಾಜಿ ನೇರ ಕಥೆಯನ್ನು ಹೇಳದೆ, ನಿಧಾನಿಸುತ್ತಿರುವಳಲ್ಲ ಎಂದು ಚಡಪಡಿಸುವಂತೆ ಆಯಿತು. ಅದನ್ನು ತಿಪ್ಪಾಜಿ ಅರಿತಂತೆ ಹೆಚ್ಚು ವಿವರಗಳಿಗೆ ಹೋಗದೆ ನಡೆದ ಸಂಗತಿಯನ್ನು ಸಂಗ್ರಹವಾಗಿ ಹೇಳಿದಳು. ರಾಯನು ಅವಾಕ್ಕಾಗಿ, ಮೈಯೆಲ್ಲ ಕಿವಿಯಾಗಿಸಿಕೊಂಡು ಕೇಳಿದ.

ತಿಪ್ಪಾಜಿ ಕುಮಾರನ ಪಟ್ಟಾಭಿಷೇಕಕ್ಕಿಂತ ಮುಂಚೆ, ತಿರುಮಲಾದೇವಿಯೊಡನೆ ಮಾತನಾಡುತ್ತಾ ಆಡುತ್ತಾ ಯಾವ ಕೆಟ್ಟ ಬಾಯಲ್ಲಿ ಆ ಮಾತು ಹೇಳಿದಳೋ 'ರಾಜಕುಮಾರನ ಪಟ್ಟಾಭಿಷೇಕದ ಸಂಭ್ರಮ ಅವನ ಶ್ಮಶಾನಯಾತ್ರೆಯ ಸಂಭ್ರಮವಾಗುವುದೆನ್ನುವ ಮಾತು—ಅವಳನ್ನು ಹಗಲಿರುಳೂ ಕಾಡುವ ಭೂತವಾಯಿತು. ತಿರುಮಲಾದೇವಿ ಇಂತಹ ಕೆಟ್ಟ ವಿಚಾರಗಳನ್ನು ಮಾಡಬಾರದೆಂದು ಬುದ್ಧಿಹೇಳಿದರೂ ಅವಳಿಗೆ ತಿಳಿಯದಂತೆ ಈ ಕೆಟ್ಟವಿಚಾರ ಅವಳ ಮನಸ್ಸಿನ ಯಾವುದೋ ಮೂಲೆಯಲ್ಲಿ ನೆಲೆಯಾಗಿ ನಿಂತುಬಿಟ್ಟಿತ್ತು. ದಿನ ಕಳೆದಂತೆ ಅವಳ ಈ ದುರಾಲೋಚನೆ ಒಂದು ನಿಶ್ಚಿತ ರೂಪವನ್ನು ಪಡೆಯಿತು. ರಾಜಕುಮಾರರ ಕೊಲೆ ಮೆಲ್ಲ

ಮೆಲ್ಲನೆ ಅವಳ ತಲೆಯಲ್ಲಿದ್ದ ಸೈತಾನನ ಕಿಂಕರರಿಂದ ರೂಪಗೊಳ್ಳುತ್ತಾ ಹೋಯಿತು. ಅದಕ್ಕೆ ತಕ್ಕಂತೆ ಅವಳ ಮನೋಭಾವದಲ್ಲೂ ಕೊಲೆಗೆ ಪೂರಕವಾದ ವಿಚಾರ ಕ್ರಾಂತಿ ನಡೆದಿತ್ತು.

ರಾಜಕುಮಾರನ ಕೊಲೆಯಿಂದ ತಿಪ್ಪಾಜಿ ಮೂರು ಆಸೆಗಳನ್ನು ಈಡೇರಿಸಿಕೊಳ್ಳಲು ಆಶಿಸಿದಳು—

ತನ್ನ ಆತ್ಮೀಯ ಗೆಳತಿಯಾದ ತಿರುಮಲಾದೇವಿಯ ಪುತ್ರನಿಗೆ ಅನ್ಯಾಯ ಬಗೆದ ಕೃಷ್ಣದೇವರಾಯನ ಮೇಲೆ ಸೇಡುತೀರಿಸಿಕೊಳ್ಳುವುದು.

ತನ್ನ ಸೋದರಳಿಯನು ಸಾಮ್ರಾಟ ಪದವಿಗೇರಿದನೆಂದು, ಸೊಕ್ಕಿದ್ದ, ವಿಜಯಭದ್ರನ ದುರಹಂಕಾರವನ್ನು ಮುರಿಯುವುದು.

ವಿಜಯಭದ್ರನಂತಹ ವಿಷಯಲಂಪಟ, ದುಷ್ಟವ್ಯಕ್ತಿಗಳಿಂದ ತನಗೆ ರಕ್ಷಣೆ ಕೊಡಲು ತಿರಸ್ಕರಿಸಿ, ವಿಜಯಭದ್ರನ ಕೈಯಲ್ಲಿ ನರಳುವಂತೆ ಮಾಡಿದ ರಾಯನು ಪುತ್ರಶೋಕದ ಸವಿ ಅನುಭವಿಸುವಂತೆ ಮಾಡುವುದು.

ಈ ಬಗೆಯ ತನ್ನ ಕೀಳುಲಾಲಸೆಗಳನ್ನು ಈಡೇರಿಸಿ ಕೊಳ್ಳಲು ತಿಪ್ಪಾಜಿ ಕುಮಾರನ ಕೊಲೆಯನ್ನು ಸಾಧನವಾಗಿಕೊಂಡಳು.

ರಾಜಕುಮಾರನ ಕೊಲೆ ತಿಪ್ಪಾಜಿ ಭಾವಿಸಿದಷ್ಟು ಸುಲಭವಾಗಿರಲಿಲ್ಲ.

ಎಲ್ಲಕ್ಕಿಂತ ಮೊದಲು ಚಿನ್ನಾದೇವಿಯ ಅಂತಃಪುರದಲ್ಲಿ ತನಗೆ ಪ್ರವೇಶ ದೊರಕಿಸಿಕೊಳ್ಳಬೇಕಾಗಿತ್ತು. ಅಲ್ಲಿ ಚಿನ್ನಾದೇವಿಯ ನಂಬಿಕೆಗೆ ಪಾತ್ರಳಾಗಿದ್ದ ದಾಸಿಯೊಬ್ಬಳನ್ನು ತನ್ನ ಹಸ್ತಕಳನ್ನಾಗಿ ಮಾಡಿಕೊಳ್ಳಬೇಕಾಗಿತ್ತು. ಅನಂತರವೇ ಕೊಲೆಯ ಪ್ರಯತ್ನ !

ತಿಪ್ಪಾಜಿ ಚಿನ್ನಾದೇವಿಯ ಅಂತಃಪುರದಲ್ಲಿ ಯಾರೊಬ್ಬರ ಮೇಲೆ ತನ್ನ ಪ್ರಭಾವ ಬೀರಿ ಅವರನ್ನು ತನ್ನವರನ್ನಾಗಿ ಮಾಡಿಕೊಳ್ಳುವ ಕೆಲಸದಲ್ಲಿ ಕೃತಕೃತ್ಯಳಾಗಲಿಲ್ಲ. ತಿರುಮಲಾದೇವಿಯ ಗೆಳತಿ ಎಂದು ತಿಪ್ಪಾಜಿ ಸಾಕಷ್ಟು ಪ್ರಸಿದ್ಧಿ ಪಡೆದಿದ್ದಳು. ಅವಳಿಗೆ ಚಿನ್ನಾದೇವಿಯ ಅಂತಃಪುರದಲ್ಲಿ ಪ್ರವೇಶ ಸಿಕ್ಕುವುದು ದುರ್ಲಭವಾಗಿತ್ತು. ತನ್ನ ಆಸೆಗಳಿಗೆಲ್ಲಕ್ಕೂ ತುಕ್ಕು ಹಿಡಿಯುವ ಹೊತ್ತು ಬರುವುದೇ ಎಂದು ಕಾದಿದ್ದ ತಿಪ್ಪಾಜಿಗೆ ದಾಸಿ ಚನ್ನಿಯ ಪರಿಚಯವಾದುದು, ಕುಮಾರನ ಕೊಲೆಯ ಸಂಚಿನಲ್ಲಿ ಒಂದು ಪ್ರಧಾನಘಟ್ಟ.

ಚನ್ನಿ ಆಗಷ್ಟೇ ಗೋವಿಂದ ರಾಜನ ಮನೆಯ ಪರಿಚಾರಿಕೆಯ ಕೆಲಸ ದಿಂದ ನಿವೃತ್ತಿ ಹೊಂದಿದ್ದಳು. ಅವಳು ತನ್ನ ಒಬ್ಬಳೇ ಮಗನ ಕಾಹಿಲೆಗೆ ತಕ್ಕ ವೈದ್ಯಮಾಡಿಸಲು, ತನ್ನ ದೂರದ ಬಂಧುವಿನ ಊರಿನಲ್ಲಿ ಕೆಲಕಾಲ ನಿಂತಳು. ಆದರೆ ಕಾಹಿಲೆ ವಾಸಿಯಾಗುವ ಬದಲು ಉಲ್ಬಣವಾಗುತ್ತ ಬಂದು, ಒಂದು ದಿನ ಅವಳ ಮಗ ತೀರಿಹೋದ. ಮಗ ತೀರಿಹೋದ ಮೇಲೆ ಆ ಊರಿನಲ್ಲಿ ಅವಳು ಹೆಚ್ಚುಕಾಲ ನಿಲ್ಲದೆ ಮತ್ತೆ ರಾಜಧಾನಿಗೆ ಬಂದು ಪರಿಚಾರಿಕೆಯ ಕೆಲಸದ ಬೇಟೆ ನಡಸಿರುವಾಗಲೇ ಅವಳಿಗೆ ತಿಪ್ಪಾಜಿಯ ಪರಿಚಯವಾಯಿತು.

ತಿಪ್ಪಾಜಿ ತನ್ನ ಚಾತುರ್ಯವನ್ನೆಲ್ಲ ವೆಚ್ಚಮಾಡಿ, ಚನ್ನಿಗೆ ಚಿನ್ನಾದೇವಿಯ ಅಂತಃಪುರದಲ್ಲಿ ಪ್ರವೇಶ ದೊರಕಿಸಿಕೊಟ್ಟಳು. ಚನ್ನಿಯು ತನ್ನ ಕರುಣ ಕಥೆಯನ್ನು ಚಿನ್ನಾದೇವಿಯ ಮುಂದೆ ಹೇಳಿಕೊಂಡು, ಅವಳ ಅಂತಃಪುರದಲ್ಲಿ ಪರಿಚಾರಿಕೆಯ ಕೆಲಸ ಗಿಟ್ಟಿಸಿದ್ದಳು.

ಚನ್ನಿ ಚಿನ್ನಾದೇವಿಯ ಅಂತಃಪುರ ಸೇರಿದ ಅಲ್ಪಕಾಲದಲ್ಲಿ ಅವಳು ಚಿನ್ನಾದೇವಿಯ ಅಚ್ಚುಮೆಚ್ಚಿನ ದಾಸಿಯಾದಳು. ಅವಳಿಗೆ ರಾಜಕುಮಾರನ ಅನೇಕ ಕೆಲಸಗಳು ಕೊಡಲ್ಪಟ್ಟಿತ್ತು. ಅವುಗಳನ್ನೆಲ್ಲ ಅವಳು ಅತಿಶ್ರದ್ಧೆ ಯಿಂದಲೂ, ಪ್ರೀತಿಯಿಂದಲೂ ಮಾಡುತ್ತಾ, ರಾಜಕುಮಾರನಿಗೂ ಬೇಕಾದ ಸೇವಕಿಯಾದಳು.

ತಿಪ್ಪಾಜಿ ಚಿನ್ನಾದೇವಿಯ ಅಂತಃಪುರದಲ್ಲಿ ಚನ್ನಿ ದಿನದಿನಕ್ಕೆ ಹೇಗೆ ತನ್ನ ಕಾರ್ಯದಕ್ಷತೆ, ಪ್ರಾಮಾಣಿಕೆ ಮೊದಲಾದ ಸದ್ಗುಣಗಳಿಂದ, ಅವರ ನಂಬಿಕೆಗೆ ಪಾತ್ರಳಾಗುತ್ತಿದ್ದಾಳೆಂಬುದನ್ನು ಹೊರಗಿನಿಂದಲೇ ನಿರೀಕ್ಷಿಸು ತ್ತಿದ್ದಳು. ಚನ್ನಿಯ ಕಾರ್ಯಕುಶಲತೆಯನ್ನು ಕಂಡ ಮೇಲೆ ರಾಜಕುಮಾರನ ಕೊಲೆಗೆ ಅವಳನ್ನು ಹೇಗಾದರೂ ಪ್ರೇರೇಪಿಸಿ, ಅವಳ ಮೂಲಕ ತನ್ನ ಮನದ ಬಹುದಿನದ ಆಸೆಯನ್ನು ಈಡೇರಿಸಿಕೊಳ್ಳಬೇಕೆಂದು ನಿರ್ಧರಿಸಿದಳು. ಅದರ ಸುಳಿವು ಚನ್ನಿಗೆ ಕೊಡದಂತೆ, ಮೊದಲು ಭೂಮಿಕೆಯನ್ನು ಸಿದ್ಧಪಡಿಸಿ ದಳು.

ಚನ್ನಿಯ ಮನೆಗೆ ತಿಪ್ಪಾಜಿಯು ಬಂದುಹೋಗುವುದು ಹೆಚ್ಚಾಯಿತು. ಅವಳು ಬಂದಾಗಲೆಲ್ಲ ಚನ್ನಿಗೆ ಏನಾದರೂ ಅಮೂಲ್ಯವಾದ ವಸ್ತುವನ್ನು

ತಂದು ಕೊಡುತ್ತಿದ್ದಳು. ಚನ್ನೆಯ ಮೇಲೆ ತನಗೆ ಬಹಳ ಪ್ರೀತಿಯಿರುವಂತೆ ನಟಿಸಿ ಹೋಗುತ್ತಿದ್ದಳು. ಹೀಗೆ ಎಷ್ಟೋ ದಿನಗಳು ಕಳೆದ ಮೇಲೆ, ತಿಪ್ಪಾಜಿ ಮತ್ತು ಚನ್ನೆಯವರಿಗೆ ಒಡಹುಟ್ಟಿದವರಷ್ಟು ಪರಸ್ಪರ ಸಲಿಗೆಯುಂಟಾ ಯಿತು. ಒಮ್ಮೆ ಯಾವುದೋ ಮಾತು ತೆಗೆದು, ಚನ್ನೆಯನ್ನು ಅಂತರಂಗಕ್ಕೆ ತೆಗೆದುಕೊಂಡು, ತಿಪ್ಪಾಜಿ ತನ್ನ ಹಂಚಿಕೆಯನ್ನು ಅವಳಿಗೆ ಹೇಳಿದಳು: ಈ ಕೆಲಸ ಮಾಡಿಕೊಟ್ಟರೆ ಮಹಾರಾಣಿಯವರು ಸಂತೋಷಗೊಂಡು ಚನ್ನೆಗೆ ಬೆಲೆಬಾಳುವ ರತ್ನಾಭರಣಗಳನ್ನು ಕೊಟ್ಟು ಸನ್ಮಾನಿಸುವರೆಂದೂ, ಅನಂತರ ಅವಳು ಸಾಯುವ ತನಕ ಯಾವ ಕೆಲಸವಿಲ್ಲದಿದ್ದರೂ ಸುಖವಾಗಿ ಇರಬಹು ದೆಂದೂ ಅವಳನ್ನು ಶ್ರೀಮಂತಿಕೆಯ ಪ್ರಲೋಭಕ್ಕೆ ಒಳಪಡಿಸಿಕೊಂಡಳು. ಮೊದಮೊದಲು ಚನ್ನೆ ಈ ಬಗೆಯ ಪಾಪಕೃತ್ಯಕ್ಕೆ ಒಪ್ಪಲಿಲ್ಲ. ಆದರೆ, ತಿಪ್ಪಾಜಿ ಬಿಡಬೇಕಲ್ಲ? ಅವಳ ದುರ್ಬಲವಾದ ಮನಸ್ಸಿಗೆ ಧೈರ್ಯಬರಲು ಏನೆಲ್ಲ ಬೇಕೋ ಅಷ್ಟು ಹೇಳಿ ಅವಳನ್ನು ಹುರಿದುಂಬಿಸಿದಳು.

ಆದರೆ ಈ ಕೃತ್ಯ ಮಾಡುವಾಗ ತಾನು ಸಿಕ್ಕಿಬಿದ್ದರೆ ಗತಿ?—ಎನ್ನುವ ಅಂಜಿಕೆ ಚನ್ನೆಗೆ ಇದ್ದೇ ಇತ್ತು. ಅವಳ ಅಂಜಿಕೆಯನ್ನು ಹೇಗೆ ಕಳೆಯುವು ದೆಂದು ತಿಪ್ಪಾಜಿಗೆ ತಿಳಿಯದಾಯಿತು.

ಹೀಗಿರುವಲ್ಲಿ ರಾಜಕುಮಾರನು ಹಠಾತ್ತನೆ ಕಾಹಿಲೆ ಮಲಗಿದನು. ಅವನು ಕಾಹಿಲೆಯಿಂದ ಉಳಿಯುವುದಿಲ್ಲ. ಎನ್ನುವ ಸ್ಥಿತಿಗೆ ಮುಟ್ಟಿದರೂ, ದೈವಾನುಗ್ರಹದಿಂದ ಚೇತರಿಸಿಕೊಂಡನು. ಈ ಸಂದರ್ಭವನ್ನು ಸದುಪಯೋಗ ಪಡಿಸಿಕೊಂಡು, ತಿಪ್ಪಾಜಿ ಚನ್ನೆಗೆ ದುರ್ಬೋಧನೆಮಾಡಿ, ಅವಳ ಮನಸ್ಸನ್ನು ಕೊಲೆಯ ಕೃತ್ಯಕ್ಕೆ ಪ್ರೇರೇಪಿಸಿದಳು. ಹೇಗೂ ಕುಮಾರನು ಕಾಹಿಲೆ ಯಿಂದ ನರಳುತ್ತಿದ್ದಾನೆ, ಅವನು ಬದುಕುವುದು ಯಾವ ನೆಚ್ಚಿಕೆಯೂ ಇಲ್ಲ. ನೀನು ಅವನು ಕುಡಿಯುವ ಹಾಲಿನಲ್ಲಿ ನಾನು ಕೊಡುವ ಪುಡಿಯನ್ನು ಒಂದು ಚಿಟಿಕೆಯಷ್ಟು ಹಾಕಿ, ಹಾಲು ಕುಡಿಸುವ ವೇಳೆಯಲ್ಲಿ ಕುಡಿಯಲು ಕೊಟ್ಟುಬಿಡು. ಎಲ್ಲರೂ ಅವನು ಕಾಹಿಲೆಯಿಂದ ತೀರಿಕೊಂಡನೆಂದು ತಿಳಿಯುತ್ತಾರೆಯೇ ಹೊರತು, ನೀನು ಹಾಲಿಗೆ ಹಾಕಿದ ಚೂರ್ಣದಿಂದ ಅಲ್ಲ. ನಿನಗೆ ಇದರಿಂದ ಯಾವ ಕೆಡಕೂ ಆಗುವುದಿಲ್ಲ ಎಂದು ಪ್ರೇರೇಪಿಸಿ, ಅವಳನ್ನು ಕೊಲೆಗೆ ಸಿದ್ಧಪಡಿಸಿದಳು.

ಎಲ್ಲವೂ ತಿಪ್ಪಾಜಿ ಬಯಸಿದಂತೆ ನಡೆಯಿತು. ಆದರೆ ಕಡೆಯಲ್ಲಿ ಒಂದು ಅಚ್ಚಾತುರ್ಯ ನಡೆದುಹೋಯಿತು. ರಾಜಕುಮಾರನಿಗೆ ವಿಷವಿಟ್ಟ ನಂತರ ತನ್ನ ಕೃತ್ಯದ ಅಪರಾಧದ ಕಲ್ಪನೆ ಚನ್ನಿಗೆ ಉಂಟಾಗಿ, ಸ್ವಭಾವತಃ ಅಂಜುಕುಳಿಯಾದ ಅವಳು ಭಾವೋನ್ಮಾದವನ್ನು ತಡೆಯಲಾರದೆ, ಆತ್ಮ ಹತ್ಯ ಮಾಡಿಕೊಂಡುದರಿಂದ, ಕುಮಾರನ ಕೊಲೆ ಕಡೆಯ ತನಕ ಯಾರಿಂದಲೂ ಬಿಡಿಸಲಾಗದ ಒಗಟಾಗಿಯೇ ಉಳಿಯಿತು. ಈ ಮಧ್ಯೆ ತಿಪ್ಪಾಜಿಯ ಮೇಲೆ ಗುಪ್ತಚಾರರ ಗಮನ ಹರಿದುದರಿಂದ, ಅವರ ಕೈಗೆ ಸಿಕ್ಕಿದರೆ ಗುಟ್ಟುರಟ್ಟಾಗಿ ತನ್ನ ಸ್ಥಿತಿ ನೆಟ್ಟಗಾಗುವುದಿಲ್ಲವೆಂದು ಬಗೆದು ಅವಳು ತನಗೆ ಹಿಂದೆ ಆಶ್ರಯವನ್ನು ಕೊಟ್ಟಿದ್ದ ಆ ಅಂಬಿಗರ ಊರಿಗೆ ಹೊರಟು—ಹೋದಳು ಯಾರಿಗೂ ತಿಳಿಯದಂತೆ.

ಅಲ್ಲಿ ಇದುವರೆಗೂ ಯಾವ ಅಪಾಯವಿಲ್ಲದೆ ತಿಪ್ಪಾಜಿ ಸುರಕ್ಷಿತವಾಗಿದ್ದಳು. ಚಂಗಪ್ಪ, ಚಲ್ಲಂ ಮುತ್ತು ಲಚ್ಚಿ ಇವರ ಒಡನಾಟದಲ್ಲಿ, ಸ್ನೇಹದಲ್ಲಿ ಅವಳು ತಾನು ರಾಜಧಾನಿಯಲ್ಲಿ ಮಾಡಿ ಬಂದಿದ್ದ ಘೋರವಾದ ಪಾಪವನ್ನು ಮರೆಯಲೆಳಸಿದಳು. ಆದರೆ ಅವಳಿಗೆ ಮನಸ್ಸಿಗೆ ನೆಮ್ಮದಿ ಉಳಿಯಲಿಲ್ಲ. ಅದಕ್ಕೆ ತಕ್ಕಂತೆ ಸುರಪುರದಿಂದ ವ್ಯಾಪಾರದ ನಿಮಿತ್ತವಾಗಿ ವಿದ್ಯಾನಗರಕ್ಕೆ ಹೋಗಿದ್ದ ರತ್ನಶೆಟ್ಟಿಯು ಒಂದುಸ್ವಾರಸ್ಯವಾದ ವರ್ತಮಾನ ಊರಿಗೆತಂದಿದ್ದ. ತಿಮ್ಮರಸ ಹಾಗೂ ಗೋವಿಂದರಾಜರಮೇಲೆ ಕೊಲೆಯ ಆರೋಪ ಹೊರಿಸಿ ಅವರನ್ನು ಸೆರೆಮನೆಯಲ್ಲಿ ಇಟ್ಟಿದ್ದರೆಂದೂ, ಗೋವಿಂದರಾಜನು ಸೆರೆಮನೆಯಿಂದ ತಪ್ಪಿಸಿಕೊಂಡು, ಚೋರರ ಮುಖಂಡನಾಗಿ, ರಾಜದ್ರೋಹಕರವಾದ ಚಳುವಳಿಯನ್ನು ಹಬ್ಬಿಸಿದನೆಂದೂ, ಅವನನ್ನು ಸೆರೆಹಿಡಿಯಲು ಕೊಂಡಮರಸಯ್ಯನೇ ಹೋಗಬೇಕಾಯಿತೆಂದೂ, ಇನ್ನು ಒಂದೆರಡು ದಿನಗಳಲ್ಲಿ ತಿಮ್ಮರಸ ಮತ್ತು ಗೋವಿಂದರಾಜರನ್ನು ವಿಚಾರಣೆಗೆ ಗುರಿಪಡಿಸಿ, ಅವರನ್ನು ಶಿಕ್ಷಿಸುತ್ತಾರೆಂದೂ, ಆ ವ್ಯಾಪಾರಿಯಿಂದ ತಿಪ್ಪಾಜಿಗೆ ತಿಳಿಯಿತು. ಅಲ್ಲಿಯ ತನಕ ಇದ್ದುದರಲ್ಲಿಯೇ ನೆಮ್ಮದಿಯಿಂದ ಇದ್ದ ತಿಪ್ಪಾಜಿಯ ಮನಸ್ಸು ಒಮ್ಮೆಲೆ ಕದಡಿಹೋಯಿತು. ಅವಳಿಗೆ ತಾನು ಮಾಡಿದ ಪಾಪದ ಕೃತ್ಯಕ್ಕೆ, ತಿಮ್ಮರಸ, ಗೋವಿಂದರಾಜ—ತನ್ನ ಕುಸುಮೆಗೆ ಪ್ರಿಯನಾಗಿದ್ದ ಗೋವಿಂದರಾಜನು ಶಿಕ್ಷೆ ಅನುಭವಿಸಬೇಕಾಗಿಬರುವುದೆಂದು ತಿಳಿದಿರಲಿಲ್ಲ. ರಾಜ

ಧಾನಿಯನ್ನು ಬಿಟ್ಟು ಬಂದಮೇಲೆ ನಡೆದಿದ್ದ ಯಾವ ವರ್ತಮಾನಗಳೂ ಅವಳಿಗೆ ತಿಳಿದಿರಲಿಲ್ಲ. ಈಗ ರತ್ನಶೆಟ್ಟಿಯಿಂದ ತಿಳಿದು ಬಂದ ಸಂಗತಿಯನ್ನು ಕೇಳಿ ಅವಳ ಹೃದಯದಲ್ಲಿ ತಳಮಳ ಉಂಟಾಯಿತು. ಯಾರ ಸ್ವೈ...ರಿಗೆ ಶಿಕ್ಷೆ? ತನ್ನಿಂದ ಅನ್ಯಾಯವಾಗಿ ನಿರಪರಾಧಿಗಳಿಗೆ ಶಿಕ್ಷೆಯಾಗುವ ...ತು ಬಂತೆಂದು ಅವಳು ಮನಸ್ಸಿನಲ್ಲಿ ಮಿಡುಕಿದಳು.

ಆ ಕ್ಷಣ ಅವಳಿಗೆ ತನ್ನ ನೀಚತನದ ವಿರಾಟಸ್ವರೂಪದ ಅರಿವಾಯಿತು. ಅವಳಿಗೆ ತನ್ನ ಜೀವನದ ಮೇಲೆ ಜೇಸರಿಕೆಯುಂಟಾಯಿತು. ತಾನು ಬದುಕಿದ್ದಾಗ ಇನ್ನೊಬ್ಬರಿಗೆ ಒಳ್ಳೆಯದಾಗಲಿಲ್ಲ. ಇನ್ನು ಸತ್ತಮೇಲಾದರೂ ಇನ್ನೊಬ್ಬರಿಗೆ ಒಳ್ಳೆಯದಾಗಲೆಂದು ನಿರ್ಧರಿಸಿ ತಾನು ಈ ಕೂಡಲೇ ಹೋ... ದ ತನ್ನ ತಪ್ಪನ್ನು ಒಪ್ಪಿಕೊಂಡು, ನಿರಪರಾಧಿಯಾದ ತಿಮ್ಮರಸ ಮ... ಗೋವಿಂದರಾಜರನ್ನು ಬಿಡುಗಡೆ ಮಾಡಿಸಬೇಕೆಂದು ಸಂಕಲ್ಪಿಸಿದಳು. ಅವರಿಬ್ಬರ ಜೀವವನ್ನು ಉಳಿಸಲು ತನ್ನ ಜೀವವನ್ನೇ ಬಲಿಗೊಡಲು ನಿಶ್ಚಯಿಸಿದಳು. ಅಂತಲೇ ಅವಳು ಸುರಪುರವನ್ನು ಒಮ್ಮೆಲೇ ಬಿಟ್ಟು ಹೊರಟಳು. ಆದಷ್ಟು ಬೇಗ ರಾಜಧಾನಿಯನ್ನು ಸೇರಬೇಕೆನ್ನುವ ಅವಳ ಹಂಬಲದಿಂದ ಕುದುರೆಯ ಮೇಲೆ ಪ್ರಯಾಣ ಹೊರಟಳು.

ತಿಪ್ಪಾಜಿ ವಿಜಯನಗರಕ್ಕೆ ಮತ್ತೆ ಬರುವುದರಲ್ಲಿ ತನ್ನದೇ ಆದ ಕಾರಣವೂ ಇತ್ತು. ಸುರಪುರಕ್ಕೆ ಬಂದು ಅಲ್ಲಿ ಅಂಬಿಗರ ಆಶ್ರಯದಲ್ಲಿ ನಿಂತಮೇಲೆ ಅವಳು ತನ್ನ ಕೃತ್ಯವನ್ನು ಮತ್ತೆ ವಿಮರ್ಶಿಸಿಕೊಂಡಳು. ಕುಸುಮಾಜಿ ತೀರಿಕೊಂಡ ಮೇಲೆ ಅವಳಿಗೆ ಬದುಕು ಬೇಡವಾಗಿದ್ದರೂ— ಸಾಯದೆ ಬದುಕಿದ್ದಳು ಏಕೆ? ಕುಸುಮಾಜಿಯನ್ನು ಹಿಂಸಿಸಿ, ಕೊಂದ ವಿಜಯಭದ್ರನ ಮೇಲೆ ಸೇಡುತೀರಿಸಿಕೊಳ್ಳಲು! ಈ ಒಂದು ಉದ್ದೇಶ ಸಾಧನೆಗಾಗಿ ಅವಳು ಜೀವಧರಿಸಿದ್ದಳು. ತಿರುಮಲಾದೇವಿಯ ಅಂತಃಪುರದಲ್ಲಿ ನಿಂತುದಾದರೂ ಇದೇ ಉದ್ದೇಶ ಸಾಧನೆಗಾಗಿ. ಆದರೆ ಆದುದೇನು? ವಿಜಯಭದ್ರನ ಕೊಲೆಮಾಡದೆ ಕುಮಾರನ ಕೊಲೆಯನ್ನು ಮಾಡಿಸಿ ತಲೆ ತಪ್ಪಿಸಿಕೊಂಡು ಸುರಪುರಕ್ಕೆ ಬಂದಿದ್ದಳು. ಇಲ್ಲಿಗೆ ಬಂದು ಅವಳು ಯಾವ ಪುರುಷಾರ್ಥ ಸಾಧಿಸಬೇಕಾಗಿತ್ತು? ಅವಳಿಗೆ ತಿಳಿದಿರಲಿಲ್ಲ.

ಕುಸುಮೆಯಿಲ್ಲದ ಜಗತ್ತಿನಲ್ಲಿ ಜೀವಿಸುವುದು ಅವಳಿಗೆ ಬೇಕಿರಲಿಲ್ಲ.

ಸುರಿಸಿಕೊಂಡು ಪ್ರಾಣಭಯದಿಂದ,
ದಿಂದ ವಿಜಯಭದ್ರನ ಮೇಲಿನ ಸೇಡನ್ನು
ಮನೆಯಲ್ಲಿ ನೆಮ್ಮದಿಯಿಂದ ಇರಲೆತ್ನಿಸಿದ್ದಳು.
ಈಗ ವ್ಯಾಪಾರಿ ತಂದಿದ್ದ ಸುದ್ದಿಯಂತೆ, ಸಿರಪ
ಮತ್ತು ಗೋವಿಂದರಾಜರಿಗೆ ರಾಜಕುಮಾರನ
ಎಂದ, ಕ್ರೂರವಾದ ಶಿಕ್ಷೆ. ಇದಕ್ಕೆ ತಾನೇ ಕಾರಣ, ತನ್ನ
ಕಾರಣ ಎಂದುಕೊಂಡಳು ತಿಪ್ಪಾಜಿ. ಅವಳಿಗೆ ತನ್ನ ಜೀವನದ
ಎಷ್ಟೆ ಉಂಟಾಯಿತು, ತನ್ನ ಸೇಡನ್ನು ನೆನೆದು ಅದನ್ನು ಸಾಧಿಸಲು
ರಾಜಧಾನಿಗೆ ಹಿಂದಿರುಗಿದ್ದಳು ! ತನ್ನನ್ನು ಹಿಡಿದು ಕೊಟ್ಟವರಿಗೆ
ಕೊಡಲಿರುವ ಸಂಗತಿಯನ್ನು ತಿಳಿದೂ ತಿಳಿದೂ ಅವಳು ರಾಜ
ದಾಗ ಅವಳು ಕಂಡುದೇನು ?

ಪ್ಪಾಜಿ ರಾಜಧಾನಿಗೆ ಬರುವ ವೇಳೆಗೆ ತಿಮ್ಮರಸ ಮತ್ತು ಗೋವಿಂದ
ಶಿಕ್ಷಾರಣೆಯು ಮುಗಿದುಹೋಗಿತ್ತು. ಇದು ಮುಗಿದು ಬಹಳ
ರಲಿಲ್ಲ. ಕೇವಲ ಕೆಲವೇ ನಿಮಿಷಗಳಾಗಿದ್ದುವು. ತಿಪ್ಪಾಜಿ
ದು ಬಳಿಗೆ ಬೀಳುವುದನ್ನು ನೋಡದೆ, ಓಡುತ್ತಾ ಬಂದಳು.
ಕೃಷ್ಣದೇವರಾಯನು ತನ್ನ ತೀರ್ಪನ್ನು ಕೊಟ್ಟು ಅಂತಃ
ಕ್ಕೆ ಹೊರಟುಹೋಗಿದ್ದ. ವಿಜಯಭದ್ರನು ನೆರಿಯಾಳುಗಳನ್ನು ನಡಸಿ
ಂಡು, ನೆರಿಮನೆಗೆ ಹೊರಟಿದ್ದ !

ಆ ದೃಶ್ಯವನ್ನು, ಹೃದಯವಿದ್ರಾವಕ ದೃಶ್ಯವನ್ನು ದೂರದಿಂದಲೇ
ಳು. ಅವಳಿಗೆ ಕರುಳು ಕಾಯುವಂತಾಯಿತು. ಕಣ್ಣಲ್ಲಿ ರಕ್ತದ
ಸುರಿಯಿತು. ಅಲ್ಲೇ ಸ್ಮೃತಿತಪ್ಪಿ ಬೀಳುವಂತೆ ಆದರೂ, ಕೃಷ್ಣ
ಯನಿಗೆ ಸತ್ಯಸಂಗತಿಯನ್ನು ತಿಳಿಸಿ, ತಿಮ್ಮರಸ, ಗೋವಿಂದ
ನ್ನು ಬಿಡುಗಡೆ ಮಾಡಿಸಲು ಓಡಿಬಂದಿದ್ದಳು !

ತಿಪ್ಪಾಜಿಯ ಬಾಯಿಂದ ಅವಳ ಎಲ್ಲ ಕಥೆಯನ್ನು ಕೇಳಿ ಕೃಷ್ಣದೇವ
ಯನು ಹುಚ್ಚು ಹಿಡಿದವನಂತೆ, ಉದ್ವೇಗದಿಂದ ಕುಣಿಯಹತ್ತಿದ. ತನ್ನ
ಶವನ್ನು ಹೊತ್ತು ಹೊರಟ ಸೇವಕರು ಇನ್ನೂ ಏಕೆ ಬರಲಿಲ್ಲ ! ಅವರು
ಲದಲ್ಲಿ ತನ್ನ ಸಂದೇಶವನ್ನು ವಿಜಯಭದ್ರನಿಗೆ ತಲುಪಿಸಿದರೋ

ಇಲ್ಲವೋ ಎಂದು ಹಾತೊರೆದ. ಅವನಿಗೆ ಬಾಗಿಲ ಕಡೆ ನೋ
ವಾಯಿತು. ಯಾರು ಅತ್ತ ಸುಳಿದರೂ, ವಿಜಯಭದ್ರ ಬಂದ
ಗೋವಿಂದರಾಜರು ಸುರಕ್ಷಿತವಾಗಿ ಹಿಂದಿರುಗಿದರೆ, ಎಂ
ಮನಸ್ಸು. ಅಷ್ಟು ಆತುರ ರಾಯನಿಗಿತ್ತು. ದೂತರು ಸುದ್ದಿಯನ್ನು
ಬೇಗ ಸಾಧ್ಯವೋ ಅಷ್ಟು ಬೇಗ ತಂದು ಮುಟ್ಟಿಸುವರು ಎಂದು ರಾಯನಿ
ಹೊಳೆಯಲಿಲ್ಲ. ಅವನು ಸುಮ್ಮನೆ ನಿಂತಲ್ಲಿ ನಿಲ್ಲದೆ ಕೂತಲ್ಲಿ ಕೂಡ
ಚಡಪಡಿಸುತ್ತಿದ್ದ.

ಅಷ್ಟರಲ್ಲಿ ಬಾಗಿಲ ಕಡೆ ಯಾರೋ ಬರುತ್ತಿರುವ ಶಬ್ದವಾಯಿತು
ರಾಯನೇ ಅಲ್ಲಿಗೆ ಎದ್ದು ಬಂದ ಯಾರು ಬಂದರೆಂದು ತಿಳಿಯಲು. ಬಂ
ವರು ಬೇರೆ ಯಾರೂ ಅಲ್ಲ ವಿಜಯಭದ್ರ !

ವಿಜಯಭದ್ರನನ್ನು ನೋಡುತ್ತಲೇ ರಾಯನು ಉದ್ವೇಗದಿಂದ ಪ್ರಶ್ನಿಸಿದ:

" ತಿಮ್ಮರಸ ಗೋವಿಂದರಾಜರೆಲ್ಲಿ ? "

ಈ ಮಾತು ವಿಜಯಭದ್ರನಿಗೆ ಕೇಳಿಸಲಿಲ್ಲ. ಅವನಿನ್ನೂ ತಾನು ಗೋವಿಂದರಾಜನ ಮೇಲೆ ಗಳಿಸಿದ ಅಖಂಡ ದಿಗ್ವಿಜಯದ ಸಂತೋಷದಲ್ಲಿ ಇದ್ದ.

" ಎಲ್ಲಿ ತಿಮ್ಮರಸ ಗೋವಿಂದರಾಜರು ? "

ರಾಯನು ಮತ್ತೆ ಕೇಳಿದ.

ಈ ಬಾರಿ ಈ ಪ್ರಶ್ನೆ ವಿಜಯಭದ್ರನಿಗೆ ಕೇಳಿಸಿತು. ಆದರೆ ಅಸ್ಪಷ್ಟವಾಗಿ ಕೇಳಿಸಿತು. ಬಹುಶಃ ರಾಯನು ತಿಮ್ಮರಸ ಮತ್ತು ಗೋವಿಂದರಾಜರ ಕಣ್ಣುಗಳನ್ನು ಕಿತ್ತು ತಂದಿರುವುದನ್ನು ತೋರಿಸಲು ಹೇಳುತ್ತಿರುವನೆಂದು ಭಾವಿಸಿದ.

" ಇಗೋ ಪ್ರಭು, ಕಣ್ಣುಗಳು ! ತಿಮ್ಮರಸ ಮತ್ತು ಗೋವಿಂದರಾಜರ ಕಣ್ಣುಗಳು !! "

—ಎಂದು ತನ್ನೊಡನೆ ತಂದಿದ್ದ, ರಕ್ತಮಯವಾಗಿದ್ದ ವಸ್ತ್ರದಿಂದ, ಕೆಂಪಾದ ನಾಲ್ಕು ಮಾಂಸದ ತುಂಡುಗಳಂತಿದ್ದ ಕಣ್ಣುಗಳನ್ನು ತೆಗೆದು ತೋರಿಸಿದ !

# ಈ ಲೇಖಕರ ಇತರ ಕೃತಿಗಳು

## ಕಾದಂಬರಿಗಳು

ಮುಗಿಲ ಮಲ್ಲಿಗೆ
ಕೊನೆಯ ದಾರಿ
ತೆರೆದ ಕಣ್ಣು
ಮಂಜುಳಾ
ಹೊಸ ಬಾಳು (ಎರಡನೆಯ ಮುದ್ರಣ)
ಹಬ್ಬಿದ ಬಳ್ಳಿ
ಮುತ್ತೈದೆ (ಎರಡನೆಯ ಮುದ್ರಣ)
ಜೀವರಿನ ಜೆಲೆ
ಮನೆ ತುಂಬಿದ ಹೆಣ್ಣು (ಎರಡನೆಯ ಮುದ್ರಣ)
ಭಾಗೀರಥಿ
ಕವಲು ದಾರಿ
ಮಣ್ಣಿನ ಮಗಳು
ಮನಸೋತ ಮನದನ್ನೆ

ರಾಮೂನ ಕತೆಗಳು—ಒಂದೇ ವ್ಯಕ್ತಿಗೆ ಸಂಬಂಧಿಸಿದ ಒಂಭತ್ತು ಕತೆಗಳು

ಬಾಳ ಕನಸು—ಕವನ ಸಂಗ್ರಹ

## ಸರಳ ರಗಳೆಯಲ್ಲಿ ಬರೆದ ಕಾವ್ಯ ನಾಟಕಗಳು

ಸೈರಂಧ್ರಿ ಹಾಗೂ ಮಗನ ಗೆಲುವು (ಎರಡನೆಯ ಆವೃತ್ತಿ)
ದೊರೆಸಾನಿ (ಎರಡನೆಯ ಆವೃತ್ತಿ)
ರಾಧೇಯ
ರತಿವಿಲಾಪ
ಮದುವೆಯ ಆಟ (ಮಕ್ಕಳ ನಾಟಕಗಳು)